# ಬಸ್ತರ ಪ್ರವಾಸ

(ಪ್ರವಾಸ ಸಾಹಿತ್ಯ)

ಡಾ॥ ಕೃಷ್ಣಾನಂದ ಕಾಮತ್



ನವಕರ್ನಾಟಕ ಪ್ರಕಾಶನ

BASTARA PRAVASA
*- A Travelogue in Kannada by Dr. Krishnananda Kamath*

**Second Edition : 2007** **Pages : 124** **Price : Rs. 65**

*Paper used for this book :* 70 gsm NS Maplitho 18.6 Kgs (1/8 Demy Size)

ಎರಡನೇ ಮುದ್ರಣ : 2007



**ಬೆಲೆ : ರೂ. 65**

ಮುಖಚಿತ್ರದ ವರ್ಣ ಪಾರದರ್ಶಿಕೆ ಮತ್ತು ಒಳಚಿತ್ರಗಳು : ಡಾ|| ಕೃಷ್ಣಾನಂದ ಕಾಮತ್

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001
ದೂರವಾಣಿ : 22203580, 30578022 ಫ್ಯಾಕ್ಸ್ : 30578023
e-mail : navakarnataka@vsnl.com
www.navakarnatakabooks.com

*ಶಾಖೆಗಳು*

| ಗಾಂಧಿನಗರ | ಕೆ. ಎಸ್. ರಾವ್ ರಸ್ತೆ | ರಾಮಸ್ವಾಮಿ ವೃತ್ತ | ಸ್ಟೇಷನ್ ರಸ್ತೆ |
|---|---|---|---|
| ಬೆಂಗಳೂರು-9 | ಮಂಗಳೂರು - 1 | ಮೈಸೂರು - 24 | ಗುಲ್ಬರ್ಗಾ-2 |
| ✆ 22251382 | ✆ 2441016 | ✆ 2424094 | ✆ 224302 |

**0211072314** **ISBN 978-81-7302-982-0**

Printed by R. S. Rajaram at Navakarnataka Printers, No. 167 & 168, 10th Main III Phase, Peenya Industrial Area, Bangalore - 560 058 and published by him for Navakarnataka Publications (P) Ltd., 11, Embassy Centre, Crescent Road P. B. 5159, Bangalore-560 001 (INDIA). Typeset at Navakarnataka, Bangalore-1

# ಹಿನ್ನೆಲೆಯಾಗಿ

ಬಸ್ತರ್ ಮಧ್ಯಪ್ರದೇಶದ ಅತೀ ಹಿಂದುಳಿದ ಜಿಲ್ಲೆಯಾಗಿದ್ದು, ಕೇರಳ ರಾಜ್ಯಕ್ಕಿಂತ ಹೆಚ್ಚಿನ ವ್ಯಾಪ್ತಿ ಹೊಂದಿದೆ. ಜಗದಲಪುರ ಅದರ ಆಡಳಿತ ಕೇಂದ್ರವಾಗಿದ್ದು, ಇದು ಹಿಂದೊಮ್ಮೆ ರಾಜಮನೆತನದವರ ಒಡೆತನಕ್ಕೆ ಒಳಗಾಗಿತ್ತು. ಉತ್ತರಕ್ಕಿರುವ ಛತ್ತಿಸಗಡದ ಬೈಲು, ಧಮತರಿ ಊರಿನ ನಂತರ ಪರ್ವತಾವಳಿಗಳಿಗೆ ಎಡೆಮಾಡಿಕೊಡುತ್ತದೆ. ಕಾಂಕೇರದ ದಕ್ಷಿಣಕ್ಕೆ ಕೆಸಕಾಂಟದ ಗುಡ್ಡಗಾಡು ಪ್ರದೇಶದಿಂದ ಆವರಿಸಿದೆ. ನಾರಾಯಣಪುರ ತಹಸೀಲದಲ್ಲಿ ಹಳ್ಳ, ಕೊಳ್ಳ, ಬೆಟ್ಟಗಳ ದುರ್ಗಮ ಪ್ರದೇಶವಾದ ಅಬುಜ್‌ಮಾಡ್ ಹರಡಿಕೊಂಡಿದ್ದು, ಅಲ್ಲಿಯ ಆದಿವಾಸಿಗಳು ಶತಮಾನಗಳಿಂದ ಏಕಪ್ರಕಾರವಾಗಿ ಜೀವಿಸುತ್ತ ಬಂದಿದ್ದಾರೆ. ಇದು ಸಮುದ್ರಪಾತಳಿಯಿಂದ ಸುಮಾರು ಮೂರು ಸಾವಿರ ಅಡಿ ಎತ್ತರದಲ್ಲಿದೆ. ಕಬ್ಬಿಣದ ಅದಿರನ್ನು ಹೊಂದಿದ ಭಿಲಾಡೆಲಾ ಪರ್ವತಾವಳಿ ನಾಲ್ಕು ಸಾವಿರ ಅಡಿ ಎತ್ತರಕ್ಕೇರಿದೆ. ಇಂದ್ರಾವತಿ ನದಿ, ಪೂರ್ವದಿಂದ ಪಶ್ಚಿಮಕ್ಕೆ ಹರಿದು ಆಂಧ್ರಪ್ರದೇಶದ ಗೋದಾವರಿಯನ್ನು ಸೇರಿಕೊಳ್ಳುತ್ತದೆ. ಶಬರಿ, ಕೋಸಿ, ತಾಲ್ ಇನ್ನುಳಿದ ಚಿಕ್ಕ ಮೂರು ನದಿಗಳು, ನೂರ ಅರವತ್ತು ಸೆಂ. ಮೀ. ಗಿಂತ ಅಧಿಕವಾಗಿ ಸುರಿಯುವ ಮಳೆ ನೀರು ಸೇರಿ ಅನೇಕಾನೇಕ ಹೊಳೆ, ಹಳ್ಳಗಳಾಗಿ ಹರಿಯುತ್ತವೆ. ಅಂತೆಯೇ ಬಸ್ತರದ ಶೇಕಡ ಎಪ್ಪತ್ತರಷ್ಟು ಭೂ ಪ್ರದೇಶ ದಟ್ಟಕಾಡಿನಿಂದ ಆವರಿಸಿದೆ. ಜನವಸತಿ ವಿರಳವಾಗಿದ್ದು ಶೇಕಡ 72 ಆದಿವಾಸಿ ಜನಾಂಗದವರೇ ಅಲ್ಲಿದ್ದಾರೆ. ಅವರಲ್ಲಿ ಮಾರಿಯ, ಮುರಿಯ, ಹಲ್ಬಿ, ಕವಾರ್, ಬಂಜವಾರ, ಕುಮಾರ, ಭಾತ್ರಾಗಳು ಮುಖ್ಯವಾದ ಗುಂಪುಗಳು, ಜಿಲ್ಲೆಯ ಸರಾಸರಿ ಜನವಸತಿ ಪ್ರತಿ ಚದರ ಕಿಲೋಮೀಟರ್‌ಗೆ 77 ಇದ್ದರೆ ನಾರಾಯಣಪುರದಲ್ಲಿ 28ಕ್ಕೆ ಇಳಿಯುತ್ತದೆ. ಅಲ್ಲಿ 1500 ಚದರ ಕಿ. ಮೀ. ಗೆ 150 ಹಳ್ಳಿಗಳಿವೆ. ಆದ್ದರಿಂದ ಪ್ರತಿಯೊಂದು ಹಳ್ಳಿಗೆ 50 ಹೆಕ್ಟೇರ್ ಭೂಮಿ, 5 ಚ. ಕಿ. ಮೀ. ಅರಣ್ಯ !

ಬಸ್ತರ್ ಸಂಸ್ಥಾನದ ಆಂಗ್ಲ ಆಡಳಿತಗಾರರಾಗಿದ್ದ ಸರ್ ಡಬ್ಲ್ಯು. ವಿ. ಗ್ರಿಗ್‌ಸನ್ (1927-31) ಕಾಲುನಡಿಗೆಯಲ್ಲಿ ಅಬುಜ್‌ಮಾರದಲ್ಲಿ ಅಲೆದಾಡಿ ಅಲ್ಲಿಯ ಆದಿವಾಸಿಗಳ ಬಗ್ಗೆ ಮಾಹಿತಿ ಸಂಗ್ರಹಿಸಿದವರಲ್ಲಿ ಮೊದಲಿಗರು. ಅಲ್ಲಿ ಪ್ರತಿ ಐದು ವರ್ಷಕ್ಕೊಮ್ಮೆ ಜನಗಣತಿ ಮಾಡಬೇಕೆಂದು ಅದಕ್ಕಾಗಿ ಮೂಲ ಕರವನ್ನು ಹೇರಿಸಿದರು. ತಮ್ಮ ಅನುಭವಗಳನ್ನು ಆಧರಿಸಿ 'ಬಸ್ತರದ ಆದಿವಾಸಿ ಗೊಂಡರು' ಎಂಬ ಪುಸ್ತಕವನ್ನು ಪ್ರಕಟಿಸಿದರು. 1950-52ರಲ್ಲಿ ಬಸ್ತರದ ಕಲೆಕ್ಟರ್ ಆಗಿದ್ದ ಆರ್. ಸಿ. ವಿ. ಡಿ. ನೊರೊನ್ಹಾ ಅಬುಜಮಾರದ ಯಾತ್ರೆ ಕೈಗೊಂಡು ಉಪಯುಕ್ತ ಮಾಹಿತಿ ಸಂಗ್ರಹಿಸಿದರು. 1958ರಲ್ಲಿ ಆಡಳಿತಗಾರ ಎಸ್. ಬಿ. ಪವಾರ್ ಆ ಪ್ರದೇಶದಲ್ಲಿ ಯಾವ ಯಾವ ಸುಧಾರಣೆಗಳನ್ನು ತರಬಹುದು ಎಂಬ ಅಧ್ಯಯನಕ್ಕೆ ಹೋಗಿಬಂದರು. ಆದಿವಾಸಿಗಳ ಮತಗಳಿಗೆ ಆಸೆಪಟ್ಟ ರಾಜಕಾರಣಿಗಳು ಗಗನವಿಹಾರಿಗಳಾಗಿ ಅಲ್ಲಿ ಹೋಗಲಾರಂಭಿಸಿದರು. ಇಂದಿರಾ ಗಾಂಧಿ, ತುರ್ತು ಪರಿಸ್ಥಿತಿಯ ಕಾಲದಲ್ಲಿ ಅರಸಿಯೆಂದು ಸಾರಲು ಅಲ್ಲಿ ಹೋಗಿಬಂದರೆ, ಸಂಜಯ ಗಾಂಧಿ ತಾನು ಯುವರಾಜನೆಂದು ದೃಢೀಕರಿಸಲು ಅವರಿಗೆ ಉಪ್ಪು, ಬಟ್ಟೆ, ಬರೆಗಳ ವಿತರಣೆ ಮಾಡಿದ. ರಾಜೀವ ಗಾಂಧಿ ಅಲ್ಲಿಯ ಹೆಲಿಪ್ಯಾಡಿನ ಪರೀಕ್ಷೆಗಾಗಿಯೇ ಹೋದಂತಿತ್ತು. ವಿ. ಪಿ. ಸಿಂಗರಿಗೂ ಕಾಡಿನ ಕರೆಗೆ ಓಗೊಡದೆ ಇರಲಾಗಲಿಲ್ಲ.

1976ರಲ್ಲಿ 'ಕರ್ನಾಟಕ ಸಾಹಿತ್ಯ ಅಕಾಡೆಮಿ' ಲೇಖಕನನ್ನು ಒಂದು ವರ್ಷದ

ಅಧ್ಯಯನಕ್ಕಾಗಿ ಶಿಷ್ಯವೇತನ ದಯಪಾಲಿಸಿ ಮಧ್ಯಪ್ರದೇಶಕ್ಕೆ ಕಳಿಸಿ, ಅಧ್ಯಯನದಿಂದ ಮೂಡಿಬರುವ ಹಸ್ತಪ್ರತಿಯನ್ನು ಅಕಾಡೆಮಿಯವರೇ ಪ್ರಕಟಿಸುವದೆಂದು ಒಪ್ಪಂದವಾಗಿತ್ತು. ಆದರೆ ಪ್ರವಾಸದಿಂದ ಹಿಂದಿರುಗುವದರೊಳಗೆ ಧನಸಹಾಯ ಮಾಡಿದ ಸಂಸ್ಥೆ ಅದೃಶ್ಯವಾಗಿ ಅದರ ಸ್ಥಾನವನ್ನು 'ಸಾಹಿತ್ಯ ಮತ್ತು ಸಾಂಸ್ಕೃತಿಕ ನಿರ್ದೇಶನಾಲಯ' ಆಕ್ರಮಿಸಿಕೊಂಡಿತ್ತು! ಬಹಳಷ್ಟು ಪತ್ರ ವ್ಯವಹಾರದ ನಂತರ ಹೊಸ ಸಂಸ್ಥೆ, ಹಸ್ತಪ್ರತಿಯನ್ನು ಪ್ರಕಟಿಸಲು ಒಪ್ಪಿಕೊಂಡಿತು. ಆದರೆ ದುರ್ದೈವದಿಂದ 1978ರಲ್ಲಿ ಹಸ್ತಪ್ರತಿಯ ಜೊತೆಗೇ ಬಂದ ಪತ್ರ ಉತ್ಸಾಹದ ಮೇಲೆ ತಣ್ಣೀರೆರಚಿತು. ಅದರ ಒಕ್ಕಣಿಕೆ ಹೀಗಿತ್ತು: ''ದಿನಾಂಕ 15-2-1978 ರಂದು ಸಮಾವೇಶಗೊಂಡ ಸಭೆಯು ಡಾ|| ಕೃಷ್ಣಾನಂದ ಕಾಮತರು ರಚಿಸಿರುವ ಕೃತಿಯನ್ನು ಪ್ರಕಟಿಸಬೇಕೆಂದು ಸರ್ವಾನುಮತದಿಂದ ತೀರ್ಮಾನಿಸಿತು. ಆದರೆ ಅಕಾಡೆಮಿಯಿಂದ ಪ್ರಕಟವಾದ ಪುಸ್ತಕಗಳು ಮಾರಾಟದ ವ್ಯವಸ್ಥೆ ಇಲ್ಲದೇ ಉಳಿದುಹೋಗಿ, ಇದರಿಂದ ಸರಕಾರಕ್ಕೆ ನಷ್ಟವಾಗಿರುವ ಕಾರಣ, ಈ ಪುಸ್ತಕಕ್ಕೆ ಸೂಕ್ತ ಧನಸಹಾಯ ಮಾಡಿ, ನಿರ್ದಿಷ್ಟ ಸಂಖ್ಯೆಯಲ್ಲಿ ಪ್ರತಿಗಳನ್ನು ಪಡೆಯಬೇಕೆಂದು ತೀರ್ಮಾನಿಸಲಾಯಿತು. ಆದ್ದರಿಂದ ತಮ್ಮ ಕೃತಿ ಪ್ರಕಟಣೆಗೆ, ಯೋಗ್ಯ ಪ್ರಕಾಶಕರೊಂದಿಗೆ ವ್ಯವಹರಿಸಬೇಕೆಂದು ಕೋರುತ್ತೇವೆ. ಹಸ್ತಪ್ರತಿಯನ್ನು ಇದರೊಂದಿಗೆ ವಾಪಸ್ಸು ಕಳಿಸುತ್ತಿದ್ದೇವೆ.''

ಒಪ್ಪಿಕೊಂಡವರೇ ಹಿಂದೇಟು ಹಾಕಿದಾಗ ಬೇರೆ ಯಾರು ಮುಂದೆ ಬಂದಾರು ?

ಹರ್ಷ ಪ್ರಕಾಶನದವರು ಹೊರತಂದ ಒಂದೆರಡು ಕೃತಿಗಳ ಮುದ್ರಣ ಆಕರ್ಷಕ ವಾಗಿದ್ದರಿಂದ, ಅವರು ಹಸ್ತಪ್ರತಿ ಕೇಳಿದಾಗ ಗೆಲುವಾಯಿತು. ಆದರೆ ಪ್ರಾರಂಭದಲ್ಲೇ ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿಹಾಕಿಕೊಂಡು ಆ ಪ್ರಕಾಶನ ನಿಂತೇಹೋಯಿತು. ಅದರ ಜೊತೆಗೇ ಹಸ್ತಪ್ರತಿಯೂ ನಿರ್ನಾಮವಾಯಿತು. ನಂತರ 'ಸಾಕ್ಷಿ' ತ್ರೈಮಾಸಿಕಕ್ಕೆ ಮಧ್ಯಪ್ರದೇಶದ ಕುರಿತಾದ ಅಂಕಣವನ್ನು ಬರೆಯಲಾರಂಭಿಸಿದೆ. ನಾಲ್ಕು ಸಂಚಿಕೆ ಹೊರತಂದು ಅದೂ ಕೊನೆಯುಸಿರು ಎಳೆಯಿತು. ಕಸ್ತೂರಿ, ಸುಧಾ, ಪ್ರಜಾವಾಣಿಗಳಿಗಾಗಿ ಕೆಲ ಬಿಡಿ ಬರಹಗಳನ್ನು ಬರೆದೆ. 1982ರಲ್ಲಿ ಮನೋಹರ ಗ್ರಂಥಮಾಲೆಯವರು ಮಧ್ಯಪ್ರದೇಶದ ಕುರಿತಾದ ಪ್ರವಾಸ ಕಥನ ಪ್ರಕಟಿಸಿದರು. ಆದರೆ ಮಹತ್ವದ ಮಾಹಿತಿಯೆಲ್ಲ ಹಾಗೆಯೇ ಉಳಿದುಬಿಟ್ಟಿತು. 'ಪುಸ್ತಕಾಲಯ'ದ ಉತ್ಸಾಹಿ ಪ್ರಕಾಶಕರಾದ ಶ್ರೀ ಕೆ. ಎಸ್. ಗೋಪಾಲ್‌ರ ಪರಿಚಯವಾದದ್ದು ಒಂದು ಆಕಸ್ಮಿಕ. ಹದಿಮೂರು ವರ್ಷಗಳ ದೀರ್ಘಕಾಲ ನಿದ್ರಾವಸ್ಥೆಯಲ್ಲಿದ್ದ ಹಸ್ತಪ್ರತಿಯನ್ನು ಪ್ರಕಟಿಸಲು ಮುಂದೆ ಬಂದರಲ್ಲದೇ ರೇಖಾಚಿತ್ರಗಳನ್ನೂ ಸೇರಿಸುತ್ತೇನೆಂದರು. ಅಲ್ಲಿಯ ಆದಿವಾಸಿಗಳ ಚಿತ್ರಣ ಸಮಗ್ರವಾಗಲೆಂದು ಇತ್ತೀಚಿನವರೆಗೂ ಲಭ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ ಚಿಕಿತ್ಸಕ ರೀತಿಯಲ್ಲಿ ವಿವೇಚಿಸಲು ಯತ್ನಿಸಿದ್ದೇನೆ. ಹಸ್ತಪ್ರತಿಯನ್ನು ಪಡೆದ ಕೆಲವೇ ತಿಂಗಳಲ್ಲಿ ಅದನ್ನು ಗ್ರಂಥರೂಪದಲ್ಲಿ ತರುವ ಚಮತ್ಕಾರವನ್ನು ಶ್ರೀ ಗೋಪಾಲ್ ಅವರು ಸಾಧಿಸಿದ್ದಾರೆ. ಇದರಿಂದಾಗಿ ಮಧ್ಯಪ್ರದೇಶದ ಅಧ್ಯಯನದ ಇನ್ನುಳಿದ ಮಾಹಿತಿಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಕನಸು ಚಿಗುರುವಂತಾಗಿದೆ. ಈ ಕೊಡುಗೆಗಾಗಿ ಗೋಪಾಲ್ ಅವರಿಗೆ ಅನಂತ ಕೃತಜ್ಞತೆಗಳು.

ಬೆಂಗಳೂರು
23-12-1991

**ಕೃಷ್ಣಾನಂದ ಕಾಮತ**
110, ಶಶಿಕಿರಣ, 18ನೇ ಅಡ್ಡರಸ್ತೆ
ಮಲ್ಲೇಶ್ವರಂ, ಬೆಂಗಳೂರು -55

# ಎರಡನೆಯ ಮುದ್ರಣದ ಕುರಿತು

ಡಾ॥ ಕೃಷ್ಣಾನಂದ ಕಾಮತರು ಬಸ್ತರ ಜಿಲ್ಲೆಯಲ್ಲಿ ವಿಸ್ತಾರವಾಗಿ ಸಂಚರಿಸಿ ತಮ್ಮ ಅನುಭವಗಳನ್ನು ಬರೆದಿಟ್ಟದ್ದು, ಚಿತ್ರಗಳನ್ನು ಕ್ಲಿಕ್ಕಿಸಿದ್ದು, 1976-77ನೇ ವರ್ಷದಲ್ಲಿ. ಈ ಮೂವತ್ತು ವರ್ಷಗಳಲ್ಲಿ ಆ ಪ್ರದೇಶ, ಪೂರ್ಣವಾಗಿ ಮಾರ್ಪಾಡು ಹೊಂದಿದೆ. ನೈಸರ್ಗಿಕವಾಗಿದ್ದ ದಟ್ಟ ಕಾಡು ಸಾಕಷ್ಟು ಮಾಯ ವಾಗಿದೆ. ಸತುವು, ತವರಗಳ ಗಣಿಗಾರಿಕೆ ಪ್ರಾರಂಭವಾಗಿ ದಶಕ ದಾಟಿದೆ. ಛತ್ತೀಸಗಢ ರಾಜ್ಯ, ಬಸ್ತರದಲ್ಲಿ ರೂಪುಗೊಂಡಿದೆ. ಸರಕಾರ, ಕಂತ್ರಾಟು ದಾರರು, ಮಧ್ಯವರ್ತಿಗಳೆಲ್ಲ ಸೇರಿ ಅದಾಗಲೇ ಅವನತಿಯ ಹಾದಿಯಲ್ಲಿದ್ದ ಆದಿವಾಸಿಗಳ ನಿಸರ್ಗ ಸಹಜ ಜೀವನಕ್ಕೆ ನಾಂದಿ ಹಾಡಿದ್ದಾರೆ. ಬಸ್ತರದಲ್ಲಿ ಅಲ್ಲಲ್ಲಿ ನಕ್ಸಲೀಯರ ಅಡಗುತಾಣಗಳ ಕುರಿತು ವರದಿಗಳು ಬರುತ್ತಿವೆ. ಆದಿವಾಸಿಗಳನ್ನು ಕಾಡಿನ ಜೀವನ ತಪ್ಪಿಸಿ, ಅಸಹಾಯಕತೆಯ ಅಂಚಿಗೆ ದಬ್ಬಿ, ಈಗ ಅಲ್ಲಿ ಕಾಣಿಸಿಕೊಂಡ ಹಿಂಸೆಯನ್ನು ಹತ್ತಿಕ್ಕುವ ಪ್ರಯತ್ನದಲ್ಲಿ ರಾಜ್ಯ, ಕೇಂದ್ರ ಸರಕಾರಗಳು ತೊಡಗಿವೆ. ಈ ಪುಸ್ತಕದ ಕೊನೆಯಲ್ಲಿ ಕಾಮತರು ಆದಿವಾಸಿಗಳ ಭವಿಷ್ಯದ ಕುರಿತು ವ್ಯಕ್ತಪಡಿಸಿದ ಕಳವಳ ಹಾಗೂ ಎಚ್ಚರಿಕೆಯ ಗಂಟೆಗಳು ನಿಜವಾಗಿ ಪರಿಣಮಿಸಿದವು.

ಲೇಖಕರು ಕಣ್ಣಾರೆ ಕಂಡು ದಾಖಲಿಸಿದ ಬಸ್ತರ ವಾಸಿಗಳ ಸಹಜ ಸುಂದರ ಜೀವನ, ಈಗ ಇತಿಹಾಸಕ್ಕೆ ಸೇರಿಹೋಗಿವೆ. ಎಂದಿಲ್ಲದಷ್ಟು 'ಬಸ್ತರ ಪ್ರವಾಸ'ಕ್ಕೆ ಸಾಮಯಿಕತೆ ಒದಗಿದೆ. ಅದನ್ನು ಮನಗಂಡು, ಅದರ ಮರುಮುದ್ರಣಕ್ಕೆ ಮುಂದಾದ ನವಕರ್ನಾಟಕ ಪ್ರಕಾಶನಕ್ಕೆ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ.

ಬೆಂಗಳೂರು - 55

**ಜ್ಯೋತ್ಸ್ನಾ ಕಾಮತ್**

60ನೇ ಸ್ವಾತಂತ್ರ್ಯ ವರ್ಧಂತಿ
15.8.2007

## ಪರಿವಿಡಿ

# 1. ಬಸ್ತರ ಹಾದಿಯಲ್ಲಿ



ಮಧ್ಯಪ್ರದೇಶದ ಸರಕಾರಿ ಮತ್ತು ಸಾಹುಕಾರಿ ಸಾರಿಗೆ ವ್ಯವಸ್ಥೆ ಒಂದಿಷ್ಟೂ ಚೆನ್ನಾಗಿರದಿದ್ದರೂ ಯತ್ನಿಸಿದರೆ ಅವುಗಳಲ್ಲಿರುವ ಕೊರತೆಗಳನ್ನು ಲಾಭಕ್ಕಾಗಿ ಬಳಸಿಕೊಳ್ಳಬಹುದು. ಚುಂಗಿಕಟ್ಟೆ, ಆಂಜನೇಯಸ್ವಾಮಿ, ಮಾಟಿರ್‌ದೇವಿ, ಡೊಂಗರ್, ಮಾತಾಜಿಗಳ ಆಶೀರ್ವಾದ, ಪ್ರಸಾದಗಳನ್ನು ಪಡೆಯಲು ವಾಹನಗಳು ಅಲ್ಲಲ್ಲಿ ನಿಲ್ಲದೇ ಇರಲಾರವು. ವೇಳೆಯ ಬೆಲೆ ಇಲ್ಲದವರಿಗೆ ಸಹಸ್ರ ಶಾಪ ಹಾಕುತ್ತ ಬಸ್ಸಿನಲ್ಲಿಯೇ ಕಾಲಹರಣ ಮಾಡುವುದಕ್ಕಿಂತ ಇನ್ನಿತರರೊಂದಿಗೆ ಕೆಳಗಿಳಿದು ದೇವಾಲಯಗಳ ಆಸುಪಾಸು ಹುಡುಕಿದರೆ, ವೀರಗಲ್ಲು, ಶಿಲಾಮೂರ್ತಿ ಭಿತ್ತಿಚಿತ್ರಗಳ ದರ್ಶನವಾಗದೇ ಇರಲಾರದು. ನಡುದಾರಿಯಲ್ಲಿ ಬಸ್ ಕೈಕೊಟ್ಟರೆ ಅಕ್ಕಪಕ್ಕದ

ಹಳ್ಳಿಗರೊಡನೆ ಕೆಲ ರಸನಿಮಿಷಗಳನ್ನು ಕಳೆಯುಬಹುದು. ಸಂತೆ ನಡೆಯುವಲ್ಲಿ ಅರೆತಾಸು ಕಳೆಯಬೇಕಾದಲ್ಲಿ, ಮಾರಲು ಬಂದ ಸರಕುಗಳು, ಕೊಳ್ಳಲು ಬಂದ ಹಳ್ಳಿಗರು, ವಿನೋದಾವಳಿಗಳ ವ್ಯವಸ್ಥೆ, ಕೋಳಿ ಅಂಕಗಳನ್ನು ವೀಕ್ಷಿಸಬಹುದು. ನಗರಗಳಲ್ಲಿ ಬೇಗ ಬಾರದ ಬಸ್ಸಿಗೆ ಕಾಯಬೇಕಾಗಿಬಂದರೆ, ಹತ್ತಿರದ ಠೇಲಿವಾಲನ ಹತ್ತಿರ ಬಿಸಿಬಿಸಿ ಜಿಲೇಬಿ, ಪೊವ್ವಾ (ಅವಲಕ್ಕಿ), ಪಕೋಡ (ಬಜ್ಜಿ) ತಿಂದು, ಯಾಲಕ್ಕಿ, ಹಸಿಶುಂಠಿ ಹಾಕಿದ ಚಹಾ ಕುಡಿದರೆ, ಹೊಸ ಚೈತನ್ಯ ಬಾರದೇ ಇರದು. ನಡುದಾರಿಯಲ್ಲಿ ಹೊರಟ ಆದಿವಾಸಿಗಳ ದಿಬ್ಬಣ ನೋಡುವುದಿರಲಿ, ಅವರ ವಾಸಸ್ಥಾನಕ್ಕೆ ಹೋಗುವುದಿರಲಿ, ಕಂಡಕ್ಟರನಿಗೆ ಜಲಬಾಧೆಯ ಸಂಜ್ಞೆ ಮಾಡಿದರಾಯಿತು. ಅವನು ಒಂದಿಷ್ಟೂ ಸಂಶಯಪಡದೇ 'ರುಕ್ಕೆ' ಎಂದು ವಾಹನವನ್ನು ಗಕ್ಕೆಂದು ನಿಲ್ಲಿಸಿಬಿಡುತ್ತಾನೆ. ಸಹ ಪ್ರಯಾಣಿಕರೆಲ್ಲ ಸುಸಂಸ್ಕೃತರು. ಅಂತೆಯೇ ಸಿಕ್ಕಸಿಕ್ಕಲ್ಲಿ ಬಸ್ ಯಾಕೆ ನಿಲ್ಲಿಸುತ್ತೀಯಾ ಎಂದು ಡ್ರೈವರನನ್ನು ತರಾಟೆಗೆ ತೆಗೆದು ಕೊಳ್ಳುವ ಬದಲು ತಾವೂ ಇಳಿದು ಬಾರದ ಜಲಬಾಧೆ ತೀರಿಸಿಕೊಂಡು, ಎಲೆ ಅಡಿಕೆ ಜಗಿದು ಹರಟುತ್ತ ಬಸ್ಸಿಗೆ ಹಿಂದಿರುಗುವಷ್ಟರಲ್ಲಿ ಅರ್ಧಗಂಟೆಯಾದರೂ ಕಳೆದಿರುತ್ತದೆ.

ಪ್ರವಾಸದಲ್ಲಿ ಕಿಟಕಿಯತ್ತ ಸ್ಥಳ ದೊರಕಿಸುವದು ಅನಿವಾರ್ಯ. ಇದಕ್ಕಾಗಿ ಒಂದೆರಡು ತಾಸು ಮೊದಲೇ ಹೊರಡುವದು ಸುರಕ್ಷಿತ. ವಿಳಂಬವಾಗಿ ಬರುವವರಿಗೆ ಇದರಿಂದ ಹೊಟ್ಟೆಕಿಚ್ಚು ಉಂಟಾಗದೇ ಇರದು. ಸದಾಕಾಲ ಬೀಡಾ ಜಗಿಯುತ್ತ ಆಗಾಗ ಪಿಚಕ್ ಎಂದು ಹೊರಗೆ ಉಗುಳಲು ತನಗೆ ಕಿಟಕಿಯ ಅವಶ್ಯಕತೆ ಇದೆ, ಎಂದು ವಾದಿಸಿದರೆ, ಮಗದೊಬ್ಬ ತನಗೆ ಬಸ್ಸಿನಲ್ಲಿ ವಾಂತಿಯ ತೊಂದರೆ ಆದ್ದರಿಂದ ಕಿಟಕಿ ಬೇಕು ಎಂದು ಅಂಗಲಾಚುತ್ತಾನೆ. ಅಂಥ ಸಂದರ್ಭದಲ್ಲಿ ಕಿವುಡನಂತೆ ವರ್ತಿಸುವುದೇ ಫಲಕಾರಿ. ಬಸ್ ಹೊರಡುವಷ್ಟರಲ್ಲಿ ಪೋರನೊಬ್ಬ ಬರುವ. ಒಬ್ಬ, ದೊಡ್ಡ ತಪಸ್ವಿಗಾಗಿ ಕುಳಿತ ಜಾಗ ಖಾಲಿ ಮಾಡಲು ಆಜ್ಞಾಪಿಸುವ. ಅವನನ್ನೇ ದುರುಗುಟ್ಟಿ ನೋಡುತ್ತಾ, ''ತಪಸ್ವಿಗಾಗಿ ಕಾಡಿಗೆ ಕಾಲುನಡಿಗೆಯಲ್ಲಿ ಹೋಗಲಾಗದಿದ್ದರೆ ಪ್ರಧಾನ ಮಂತ್ರಿಗಳು ವಾಯುಸೇನೆಯ ವಿಮಾನ ಕೊಡುತ್ತಾರೋ ವಿಚಾರಿಸು'' ಎಂದಾಗ, ಈತನಿಗೆ ಇಲ್ಲಿಯ ರೀತಿ-ರಿವಾಜುಗಳ ಪರಿಚಯ ಇದ್ದಂತಿಲ್ಲ ಎಂದು ಗೊಣಗುತ್ತ ಬೇರೊಬ್ಬನನ್ನು ಎಬ್ಬಿಸಲು ಕಾಡಲಾರಂಭಿಸಿದ. ಇಸ್ಪೀಟಾಟದ ಚಟದವರು ನಾಲ್ವರು ಒಟ್ಟಾಗಿ ಕುಳಿತುಕೊಳ್ಳುವುದಕ್ಕೆ ಅನುಕೂಲವಾಗುವುದೆಂದು ಕುಳಿತಲ್ಲಿಂದ ಎಬ್ಬಿಸಿ ಸ್ಥಳಾಂತರಿಸಲು ಯತ್ನಿಸಿದರು. ''ಕುಳಿತಲ್ಲಿಂದ ಏಳುವುದಿಲ್ಲವೆಂದು ಆಶ್ವಾಸನೆ ಪಡೆದೇ ಪಿತರು ಸ್ವರ್ಗಕ್ಕೆ ಹೋಗಿದ್ದಾರೆ'' ಎಂದು ಬಂದ ಉತ್ತರದಿಂದ ತಬ್ಬಿಬ್ಬಾದರು. ಇದಾಗಲೇ ಸವೆಸಿದ ದಾರಿ ದೂರ ಎಷ್ಟು? ಎಂದು ನೋಡಲು ಹವಣಿಸಿದಾಗ, ಮೈಲಿಗಲ್ಲಿನ ಮೇಲೆ ಮಿತಸಂತಾನದ ಕೆಂಪು ತ್ರಿಕೋನದ ಚಿಹ್ನೆ ನೋಡಿ ಮೋಜೆನಿಸಿತು. ಕಿಲೋಮೀಟರುಗಳನ್ನು ತೋರಿಸುವ ಹೊಸಕಲ್ಲುಗಳನ್ನು ನಿಲ್ಲಿಸಿದ್ದರಿಂದ, ಹಳೆಯ ಮೈಲಿಗಲ್ಲುಗಳನ್ನು ಕುಟುಂಬ ಕಲ್ಯಾಣ ಖಾತೆಯವರು ತಮ್ಮ ಪ್ರಚಾರಕ್ಕಾಗಿ ಬಳಸಿದ್ದರು. ಮುಂಬರುವ ಇತಿಹಾಸತಜ್ಞರು, ನಿಷಿದಿ, ಮಾಸ್ತಿ, ವೀರಗಲ್ಲುಗಳ ಜೊತೆಗೆ ಈ ನಿರೋಧ ಶಿಲೆಗಳನ್ನು ಅಭ್ಯಸಿಸಬೇಕಾಗ ಬಹುದು! ಎಂಬ ವಿಚಾರದಿಂದ ನಗು ಬಂದಿತು.

ಡ್ರೈವರನ ಸನಿಹದಲ್ಲಿ ಕುಳಿತ ಪ್ರವಾಸಿಯೋರ್ವನು ಬೊನೆಟಿನ ಮೇಲೆ ಕಾಲು ಚಾಚಿ ಸುಖವಾಗಿ ವಿರಮಿಸಲು ಯತ್ನಿಸಿದಾಗ ''ಭಾಯಿಸಾಬ್, ಈ ಇಂಜಿನ್ ನಮಗೆ ಅನ್ನದಾತ. ಅದರ ಮೇಲೆ ಕಾಲಿಟ್ಟರೆ, ನಮ್ಮ ಹೊಟ್ಟೆಯ ಮೇಲೆ ಕಾಲು ಇಟ್ಟಂತೆ. ಆದ್ದರಿಂದ ಭಗವಾನ್ ಬುದ್ಧನಂತೆ ಕೂಡ್ರಲು ಕಲಿಯಬೇಕು'' ಎಂದು ಉಪದೇಶಿಸಿದ. ಹದಿನೈದು ನಿಮಿಷದಲ್ಲಿ ಆ

ಪ್ರವಾಸಿ ಆಕಳಿಸಲು ಪ್ರಾರಂಭಿಸಿದಾಗ, ಅವನಿಗೆ ಎದ್ದು ನಿಲ್ಲುವಂತೆ ಶಿಕ್ಷೆ ವಿಧಿಸಿದ. ಅವನಾದರೋ ವಿದ್ಯಾರ್ಥಿಯು ಗುರುವಿನ ಆಜ್ಞೆಯನ್ನು ಶಿರಸಾವಹಿಸುವಂತೆ ವರ್ತಿಸಿದಾಗ ಮೋಜೆನಿಸಿತು. ಹತ್ತು ಕಿಲೋಮೀಟರ್ ಓಡುವುದರಲ್ಲಿ ಬಸ್ ಗಕ್ಕನೆಂದು ನಿಂತಿತು. ಡ್ರೈವರನು ಎದ್ದು ಸಮೀಪದ ಆಸನದಲ್ಲಿ ಸುಖನಿದ್ರೆಯಲ್ಲಿದ್ದ ಪ್ರವಾಸಿಯ ಕೆನ್ನೆಗೊಂದು ಬಾರಿಸಿ, ಸಿಡಿಮಿಡಿಗೊಂಡು ''ನಿನ್ನೊಂದಿಗೆ ನಮ್ಮೆಲ್ಲರನ್ನೂ ಸ್ವರ್ಗಕ್ಕೆ ಕರೆದುಕೊಂಡು ಹೋಗಬೇಕೆಂದಿರುವೆಯಾ ?'' ಎಂದು ಪ್ರಶ್ನಿಸಿದ. ಪ್ರವಾಸಿಯು ಪೂರ್ಣ ಎಚ್ಚರಗೊಳ್ಳುವ ಮೊದಲೇ ಕಂಡಕ್ಟರನು ಅವನ ಕಾಲರ್ ಹಿಡಿದು ಎಳೆದುಕೊಂಡು ಹೋಗಿ ಹಿಂದಿನ ಸೀಟಿನಲ್ಲಿ ಕುಕ್ಕರಿಸಿದ. 'ಅವನು ಮಾಡಿದ ಅಪರಾಧವೇನು ?' ಎಂದು ಕಂಡಕ್ಟರನ ಹತ್ತಿರ ಪ್ರಶ್ನಾರ್ಥವಾಗಿ ನೋಡಿದಾಗ, ''ನೋಡಿ ಬಾಬೂಜಿ ಆಕಳಿಕೆ, ನಿದ್ರೆ, ಜಲಬಾಧೆಗಳೆಲ್ಲ ಸಾಂಕ್ರಾಮಿಕ ರೋಗಗಳಿದ್ದಂತೆ. ಡ್ರೈವರನ ಕಣ್ಣಿಗೆ ಬೀಳುವಂತೆ ಆಕಳಿಸಿದರೆ, ನಿದ್ರೆ ಹೋದರೆ, ಅವನನ್ನೂ ಅವು ಆಕ್ರಮಿಸದೇ ಬಿಡುವವೇ ? ಹಾಗೇನಾದರೂ ಆದರೆ, ಈ ಗುಡ್ಡಗಾಡಿನ ರಸ್ತೆಯಲ್ಲಿ ಅಪಘಾತವಾಗಿ ಸ್ವರ್ಗ ಸೇರುವದು ಖಂಡಿತ'' ಎಂದು ಹೇಳಿದ. ಇಂಥ 'ಕಾನೂನು' ಕರ್ನಾಟಕದಲ್ಲಿದ್ದರೆ ರಾತ್ರಿ ಪಯಣಿಸುವವರ ಸ್ಥಿತಿ ಏನಾಗುತ್ತಿತ್ತು! ಎಂಬ ಕಲ್ಪನೆಯಿಂದಲೇ ಕಂಗಾಲಾಗುವಂತಾಯಿತು.

ಬಸ್ಸು ಚಕ್ಕಡಿ ವೇಗದಿಂದ ಹೊರಟದ್ದರಿಂದ ಸುತ್ತಮುತ್ತಲು ಹರಡಿಕೊಂಡ ಸೃಷ್ಟಿ ಸೌಂದರ್ಯ ಸವಿಯಲು ಅನುಕೂಲವೇ ಆಯಿತು. ಡೆಲಿ ರಾಜೋರಾದಲ್ಲಿ ಬಿಸಿಬಿಸಿ ಪಕೋಡ, ಚಹಾಗಳು ಹೊಟ್ಟೆ ಸೇರಿದವು. ಭಾನುಪ್ರತಾಪಪುರ, ಖಣಿಗಳ ಬೀಡು. ಆದಿವಾಸಿಗಳೆಲ್ಲ ಮೈ ಕೈ ಧೂಳುಮಯ ಮಾಡಿಕೊಂಡು ಲಾರಿಗಳಲ್ಲಿ ತಂತಮ್ಮ ವಾಸಸ್ಥಾನಕ್ಕೆ ಹೊರಟಿದ್ದರು. ಅಂತಾಗಡ ಮುಟ್ಟುವದರಲ್ಲಿ ತಿರುಗಿ ಹೊಟ್ಟೆ ಹಸಿದಿತ್ತು. ''ಈ ಕುಟೀರದಲ್ಲಿ ಊಟ ಸಿಗುತ್ತದೆ ಬಾಬು'' ಎಂದು ಕಂಡಕ್ಟರನು ಹೇಳಿದಾಗ ಸೋಜಿಗವಾಗಿತ್ತು. ಅಡಿಗೆ ಮನೆಯಿಂದ ಹೊಮ್ಮುವ ಸುವಾಸನೆಯಿಂದಲೇ ಇನ್ನಷ್ಟು ಹಸಿವಾಯಿತು. ಸೊಗಸಾದ ಕೋಳಿಯ ಸಾರು, ಅನ್ನ-ಬೇಳೆಗಳ ಊಟಕ್ಕೆ ಮಾಲಿಕನು ಪಡೆದದ್ದು 3 ರೂಪಾಯಿಗಳು ಮಾತ್ರ! ರಾತ್ರೆಯ ಊಟ ಇಲ್ಲಿಯೇ ಮುಗಿಸಿದರೆ ಹೇಗೆ ? ಎಂದು ಯೋಚಿಸಿದಾಗ ನಗದೇ ಇರಲಾಗಲಿಲ್ಲ. ಡ್ರೈವರ್ ಕಂಡಕ್ಟರರು ಪೂಗದಸ್ತಾದ ಊಟ, ಬೀಡಾ, ಸಿಗರೇಟುಗಳ ಸೇವನೆ ಮುಗಿಸಿ ಬಂದ ನಂತರ ಬಸ್ ನಿಧಾನವಾಗಿ ಚಲಿಸಲಾರಂಭಿಸಿತು. ಎಲ್ಲಿಯೂ ಸ್ಥಾಯೀ ನಿಲ್ದಾಣವಿಲ್ಲದ್ದರಿಂದ ಆದಿವಾಸಿಗಳು ಕಂಡಲ್ಲಿ ನಿಲ್ಲಿಸುತ್ತಿದ್ದರು. ಇನ್ನೂ ಅರ್ಧ ಮೈಲಿ ದೂರ ಇರುವಾಗಲೇ ಕೂಗಿ, ಕೈ ಮಾಡಿ, ವಾಹನ ನಿಲ್ಲಿಸುವಂತೆ ದುಂಬಾಲು ಬೀಳುತ್ತಿದ್ದರು. ಒಬ್ಬ ಯುವ ದಂಪತಿಗೆ ಹಳ್ಳಹಾಯ್ದು ಬಂದು ಬಸ್ ಹತ್ತಬೇಕಾಗಿತ್ತು. ಗಾಳಿಯ ವೇಗದಿಂದ ಹೊರಟ ಪತಿಯೊಂದಿಗೆ ಕಾಲುಹಾಕುವ ಯತ್ನದಲ್ಲಿ ಪತ್ನಿಯ ತುಂಡುಸೀರೆ ಜಾರಿಕೊಂಡಿತು. ಕಟೆದ ವಿಗ್ರಹದಂತಿದ್ದ ಆಕೃತಿಯ ಅಸಹಾಯಕ ಸ್ಥಿತಿ ಗಮನಿಸಿದಾಗ ಭಿಕ್ಷಾಟನೆಗೆ ಬಂದ ಶಿವನ ರೂಪ-ಲಾವಣ್ಯಗಳಿಗೆ ಮರುಳಾದ ಋಷಿ ಪತ್ನಿಯ ಬಟ್ಟೆ ಜಾರುವಂತಿದ್ದ ಲೇಪಾಕ್ಷಿ ದೇವಾಲಯದ ಸುಂದರ ಶಿಲ್ಪವೊಂದರ ನೆನಪಾಯಿತು. ''ನಿಧಾನವಾಗಿ ಬಾಮ್ಮಾ ಬಸ್ ನಿಲ್ಲಿಸುತ್ತೇನೆ. ಈ ರಾತ್ರಿ ನಾರಾಯಣಪುರದ ಊಟ ಕಳೆದುಕೊಳ್ಳುವುದಕ್ಕೆ ಮನಸ್ಸಿಲ್ಲ'' ಎಂದು ಕಂಡಕ್ಟರನು ನಗುನಗುತ್ತಲೇ ಕೂಗಿ ಹೇಳಿದ.

ತಾಲ್ಲೂಕು ಮುಖ್ಯ ಸ್ಥಳವಾದ ನಾರಾಯಣಪುರ ಚಿಕ್ಕ ಹಳ್ಳಿಯಂತಿದೆ. ಯಾವನೋ ಸಾಹಸಿ, 'ಉಮಾ-ಮಹೇಶ್ವರ ಲಾಜ್'ವನ್ನು ಹೊಸದಾಗಿ ಪ್ರಾರಂಭಿಸಿದ್ದಾನೆಂದು ತಿಳಿದು ಹರ್ಷವಾಯಿತು. ಅರ್ಧನಾರೀಶ್ವರನ ಚಿತ್ತ ಹೊತ್ತ ವರ್ಣಮಯ ನಾಮಫಲಕ ಒಂದನ್ನು

ಬಿಟ್ಟರೆ ಅಲ್ಲಿ ಬೇರೆ ಯಾವ ಸವಲತ್ತೂ ಇರಲಿಲ್ಲ. ಪಕ್ಕದ ಕೋಮಲವಿಲಾಸದವನು ಕೊಡಮಾಡಿದ ಕೆಟ್ಟ ಊಟವನ್ನೇ ಮೃಷ್ಟಾನ್ನವೆಂದು ಸೇವಿಸಿ, ದಣಿದ ಶರೀರಕ್ಕೆ ವಿಶ್ರಾಂತಿ ಕೊಟ್ಟು ಮುಂದಿನ ಪ್ರಯಾಣಕ್ಕೆ ಸಿದ್ಧನಾದೆ. ಅಲ್ಲಿಂದ ಭೋಟೆ ಡೊಂಗರಕ್ಕೆ ದಿನಕ್ಕೆ ಒಂದೇ ಬಸ್ ಹೊರಡುತ್ತದೆ. ಅದೂ ಜಗದಲಪುರದಿಂದ ಬರಬೇಕು. ಆದ್ದರಿಂದ ಮಧ್ಯಾಹ್ನದ ನಂತರವೇ ಅದನ್ನು ನಿರೀಕ್ಷಿಸಬಹುದೆಂದು ಸ್ಥಳೀಯ ಮುಖಂಡರು ಹೇಳಿದರು. ಸನಿಹದಲ್ಲೇ ಆದಿವಾಸಿಗಳ ಕಲಾ ಕುಶಲ ಕೈಗಾರಿಕೆಯ ಸಾಮಾನುಗಳ ಸಹಕಾರಿ ಮಾರಾಟದ ಕೇಂದ್ರವಿದೆ. ಅದನ್ನು ನೋಡಿಕೊಂಡು, ಮನಸ್ಸಿಗೆ ಬಂದರೆ ಕೆಲವು ಸಾಮಾನುಗಳನ್ನು ಖರೀದಿಸಬಹುದು ಎಂದರು. ಅಲ್ಲಿ ಹೋದರೆ, ಸಕಲ ಸರಕಾರಿ ಆಫೀಸುಗಳ ಪರಿಪಾಠದಂತೆ ಮ್ಯಾನೇಜರ ಒಂದು ಗಂಟೆ ವಿಳಂಬವಾಗಿಯೇ ಬಂದ. ಅಲ್ಲಿದ್ದ ಸಕಲ ಸಾಮಗ್ರಿಗಳೂ ಆಸಕ್ತಿ ಕೆರಳಿಸುವಂತಹ ವಿದ್ದವು. ಆದಿವಾಸಿಗಳು ಕೈಯಿಂದಲೇ ತಯಾರಿಸಿದ ಬಿಲ್ಲು-ಬಾಣಗಳು, ಹಕ್ಕಿ, ಹಂದಿ, ಕಾಡುಕೋಣಗಳ ಬೇಟೆಗೆ ನಿರ್ಮಿಸಿದ ಬಾಣಗಳು ಬೇರೆ ಬೇರೆ ತೆರನಾಗಿದ್ದವು. ಹಕ್ಕಿಗಾಗಿ, ಪುಕ್ಕದಷ್ಟು ಹಗುರಾದವುಗಳು. ಹಂದಿ ಬೇಟೆಯವು ಅದರ ದಪ್ಪ ಚರ್ಮ ಭೇದಿಸುವಷ್ಟು ಹರಿತವಾಗಿದ್ದವು. ಬೆತ್ತಕ್ಕೆ, ಆದಿವಾಸಿಗಳ ಕಮ್ಮಾರರಾದ ಆಗೇರಿಯಾರು ಮಾಡಿಕೊಟ್ಟ ಉಕ್ಕಿನ ಹರಿತವಾದ ತ್ರಿಕೋನ ಜೋಡಿಸಿ, ಹಿಂಬದಿಗೆ ಗರಿಗಳನ್ನು ಜೋಡಿಸಿದ ಬಾಣದ ಕಲಾವಂತಿಕೆ ಮೆಚ್ಚಿಗೆ ಆಯಿತು. ಘರೇವಾ ಪಂಗಡದವರು ಎರಕ ಹೊಯ್ದು ನಿರ್ಮಿಸಿದ ಹಿತ್ತಾಳೆಯ ಮೂರ್ತಿಗಳು ಆತ್ಯಾಕರ್ಷಕವಾಗಿದ್ದವು. ಚಿಗರೆ, ಎತ್ತು, ಆನೆ, ಆಮೆಗಳು ಇನ್ನೆಲ್ಲಿಯೂ ಕಾಣದ ಲಾವಣ್ಯವನ್ನು ಹೊಂದಿದ್ದವು. ಏಕಮಾತ್ರ ಗಿರಾಕಿಗೆ ಇವನ್ನೆಲ್ಲ ತೋರಿಸಿ ಸುಸ್ತಾದ ಸರಕಾರಿ ನೌಕರ, ''ಕೊಳ್ಳುವದಿದ್ದರೆ ಮಾತ್ರ ಇನ್ನಷ್ಟು ತೋರಿಸುವೆ'' ಎಂದ ಮುನಿಸಿನಿಂದ. ಇದನ್ನೆಲ್ಲ ಅಭ್ಯಸಿಸುವದಕ್ಕಾಗಿಯೇ ಬೆಂಗಳೂರಿನಿಂದ ಇಲ್ಲಿಗೆ ಕಳಿಸಿದ್ದಾರೆ. ನೀವು ಒಪ್ಪಿದರೆ ಇವುಗಳೊಂದಿಗೆ ನಿಮ್ಮದೂ ಛಾಯಾಚಿತ್ರ ತೆಗೆಯುತ್ತೇನೆ, ಎಂದಾಗ ಗೆಲುವಾದ. ಅವನು ಗಾಜಿನ ಕಪಾಟಿನೊಳಗಿಂದ ಒಂದೊಂದನ್ನೆ ತೆಗೆದು ಬಿಸಿಲಲ್ಲಿ ಇಟ್ಟಾಗ, ಕ್ಯಾಮರಾ ಕ್ಲಿಕ್ ಎನ್ನತೊಡಗಿತು. ರೊಟ್ಟಿ ಜಾರಿ ತುಪ್ಪದಲ್ಲಿಯೇ ಬಿತ್ತು ಎಂದುಕೊಳ್ಳುವಾಗಲೇ ಬಸ್ಸು ಬಂದು ಬಿಡಬೇಕೇ ? ಸಹಕಾರಕ್ಕೆ ಕೃತಜ್ಞತೆ ಸೂಚಿಸುತ್ತಾ, ಕೊಂಡ ಕೆಲ ಸಾಮಾನುಗಳಿಗೆ ಹಣವಿತ್ತು, ಸಾಮಾನುಗಳೊಂದಿಗೆ ನಾಗಾಲೋಟ ಹಾಕಿದೆ. ನಗರದ ಈ ಬಾಬು, ಆದಿವಾಸಿಗಳ ಬಸ್ಸಿಗಾಗಿ ಯಾಕೆ ಧಾವಿಸುತ್ತಾನೆಂದು ಅರಿಯದೆ ಕಂಡಕ್ಟರನು ''ಭೋಟೆ ಡೊಂಗರದಲ್ಲಿ ನಾಗರಿಕರು ಬಯಸುವ ಯಾವ ಸವಲತ್ತುಗಳೂ ಇಲ್ಲ'' ಎಂದು ಎಚ್ಚರಿಸಿದ. ಅಂತೆಯೇ ಅಲ್ಲಿಗೆ ಹೊರಟಿದ್ದೇನೆ ಎಂದು ಚುಟುಕಾಗಿ ಉತ್ತರಿಸಿದೆ.

## 2. ಭೋಟೆ ಡೊಂಗರ



ಅಷ್ಟೊಂದು ದೂರದಿಂದ ಬಂದ ಉದ್ದೇಶವನ್ನು ಅರಿತು ಕಂಡಕ್ಟರನು ಪರಿಸರದ ಪರಿಚಯ ಮಾಡಿಕೊಡಲು ಹತ್ತಿರವೇ ಬಂದು ಕುಳಿತ. ಬಾಯಿ, ವೀಳ್ಯವನ್ನು ಜಗಿಯುತ್ತಿದ್ದರೂ ಗಂಟಲು ಸುರಾಪಾನದ ತೇಗು ಹೊರಹಾಕುತ್ತಿದ್ದರೂ, ಆ ಪ್ರದೇಶದ ಆಗುಹೋಗುಗಳನ್ನು ಅರಿಯಲು ಅವನ ನೆರವು ಅತ್ಯವಶ್ಯವಾಗಿದ್ದರಿಂದ ಅವನಿಗೆ ಅಸಹನೆ ತೋರುವಂತಿರಲಿಲ್ಲ. ''ಬಾಬಾ ಈ ಕಾಡಿನ ಮುಕ್ಕರಿಗೆ, ತಾಲ್ಲೂಕಿನ ಮುಖ್ಯಸ್ಥಳವಾದ ನಾರಾಯಣಪುರಕ್ಕೆ ಹೋಗಿ ಬರಲು ಅನುಕೂಲವಾಗಲಿ ಎಂದು ಈ ಬಸ್ಸನ್ನು ಭೋಟೆ ಡೊಂಗರವರೆಗೆ ಓಡಿಸಲಾರಂಭಿಸಿದ್ದಾರೆ. ಆದರೆ ಈ ತಿಳಿಗೇಡಿಗಳು ಕಾಲುಹಾದಿ ತುಳಿಯುತ್ತ ನಮಗಿಂತ ಮುಂಚಿತವಾಗಿ ಆ ಸ್ಥಳಕ್ಕೆ ತಲುಪುತ್ತಾರೆ. ಇಂಥ ಮುಟ್ಠಾಳರಿಗೆ ಎಂಥ ಸವಲತ್ತು ಕೊಟ್ಟರೂ ಏನು ಪ್ರಯೋಜನ ?''

ಎಂದು ಮಧುಪಾನದ ಅಮಲಿನಲ್ಲಿ ತತ್ವಜ್ಞಾನಿಯಾದ. ''ಈ ಕಲ್ಲು, ಮಣ್ಣು, ಬಂಡೆಗಳ ರಸ್ತೆಯಲ್ಲಿ ವಾಹನ ಓಡಿಸುವುದೆಂದರೆ ಇನ್ನೊಂದು ಜನ್ಮ ಪಡೆದುಬಂದಂತೆ'' ಎಂದು ಡ್ರೈವರನು ದೂರಿಕೊಂಡ. ''ಕಲ್ಲು ಬಂಡೆ, ಕಾಡು, ಪರ್ವತಾವಳಿಗಳು ಸುಂದರವಾಗಿವೆಯಲ್ಲವೇ ?'' ಎಂದು ವಿಷಯಾಂತರ ಮಾಡಲು ಯತ್ನಿಸಿದೆ. ''ಕಣ್ಣಿಗೇನೋ ರಮಣೀಯ. ಆದರೆ ವಾಹನಗಳಿಗೆ ಎಷ್ಟು ಘಾತಕವಾಗಿವೆ ಗೊತ್ತೆ ? ರಸ್ತೆಗಳು ಸರಿಯಾಗಿಲ್ಲ. ರಸ್ತೆಗೆ ಅಡ್ಡಲಾಗಿ ಹರಿಯುವ ಅಸಂಖ್ಯಾತ ಪ್ರವಾಹಗಳ ಮೇಲೆ ದಿಂಡುಗಳನ್ನು ಜೋಡಿಸಿ, ಮಣ್ಣು ಹರವಿ ಸೇತುವೆಯಾಗಿ ಬಳಸಲಾಗುತ್ತದೆ. ಒಂದೇ ಒಂದು ನಾಟು ಅತ್ತಿತ್ತ ಸರಿಯಿತೆಂದರೆ ವಾಹನ ಪಾತಾಳಕ್ಕಿಳಿಯುತ್ತದೆ. ಅದನ್ನು ಮೇಲೆತ್ತಲು ಸಹಾಯಕ್ಕೆ ಒಬ್ಬ ಆದಿವಾಸಿಯೂ ಬರುವುದಿಲ್ಲ. ಜಗದಲಪುರದಿಂದ ನೆರವು ಬರುವ ತನಕ ಇಲ್ಲಿಯೇ ಬಿದ್ದುಕೊಂಡಿರಬೇಕಾಗುತ್ತದೆ'' ಡ್ರೈವರನು ತನ್ನ ಗೋಳನ್ನು ತೋಡಿಕೊಂಡ.

''ಭೋಟೆ ಡೊಂಗರದಲ್ಲಿ ರಾತ್ರಿ ಕಳೆಯಲು ಯಾರಾದರೂ ಆಶ್ರಯ ಕೊಡಬಹುದೇ ?'' ಎಂದು ಅನುಮಾನಪಟ್ಟಾಗ, ''ಆದಿವಾಸಿಗಳಿನ್ನೂ ಸತ್ಯಯುಗದಿಂದ ಕಲಿಯುಗಕ್ಕೆ ಕಾಲು ಇಡದ್ದರಿಂದ ಅವರ ತಾಣದಲ್ಲಿ ಕಳ್ಳಕಾಕರ ಭಯವೇ ಇಲ್ಲ. ಯಾವ ಮರದಡಿಬೇಕಾದರೂ ಒಂದಿಷ್ಟೂ ಕಾಳಜಿ ಮಾಡದೇ ಸುಖವಾಗಿ ನಿದ್ರಿಸಬಹುದು. ಮಾಡು ಇದ್ದ ಕಟ್ಟಡವೇ ಬೇಕಾದಲ್ಲಿ ಸರಕಾರಿ ಶಾಲೆ, ಆಸ್ಪತ್ರೆಗಳಿವೆ. ಅಲ್ಲಿ ಮಾಸ್ತರರು, ಡಾಕ್ಟರರು ಇರದ್ದರಿಂದ, ವಿದ್ಯಾರ್ಥಿ-ರೋಗಿಗಳು ಬರುವ ಮಾತು ದೂರವೇ ಉಳಿಯಿತು! ಕಟ್ಟಡಗಳಿಗೆ ಜೀಗ ಜಡಿಯುವ ಪದ್ಧತಿ ಇಲ್ಲದ್ದರಿಂದ, ನೀವು ಬೇಕಾದಷ್ಟು ದಿನ ಅಲ್ಲಿರಬಹುದು'' ಎಂದು ಸೂಚಿಸಿದ. ದೌಡಾಯಿ ಊರಿನಲ್ಲಿ ಸಂತೆಗಾಗಿ ಆದಿವಾಸಿ ಜನಸ್ತೋಮವೇ ಸೇರಿತ್ತು. ವಾಹನವನ್ನು ನಿಲ್ಲಿಸಿದರೆ ಕ್ಷಣಾರ್ಧದಲ್ಲಿ ಕೆಲ ನೋಟಗಳನ್ನು ಕ್ಲಿಕ್ಕಿಸಿಕೊಂಡು ಬರುತ್ತೇನೆಂದು ಬಿನ್ನವಿಸಿಕೊಂಡರೂ ಡ್ರೈವರ್-ಕಂಡಕ್ಟರರು ಒಕ್ಕೊರಳಿನಿಂದ ''ಸಾಮಾನುಗಳೊಂದಿಗೆ ಇಲ್ಲಿ ಇಳಿದರೆ ನಂತರ ಅವನ್ನು ಹೊತ್ತುಕೊಂಡೇ ಕಾಲು ನಡಿಗೆಯಲ್ಲಿ ಭೋಟೆ ಡೊಂಗರಿಗೆ ಹೋಗಬೇಕಾದೀತು'' ಎನ್ನುತ್ತ ಬಸ್ಸನ್ನು ಓಡಿಸಿಯೇಬಿಟ್ಟರು. ದವಾಖಾನೆಯ ಬಾಗಿಲಿನಲ್ಲಿಯೇ ಬಸ್ ನಿಲ್ಲಿಸಿದಾಗ, ಊರಿನ ಮಕ್ಕಳು ಓಡೋಡಿ ಬಂದು ಬಸ್ಸಿಗೆ ಮುತ್ತಿಕೊಂಡ ಧೂಳಿನಲ್ಲಿ ಬೆರಳಾಡಿಸಿ ಜಿಂಕೆ, ಆನೆ, ಕೋತಿಗಳ ರೇಖಾಚಿತ್ರಗಳನ್ನು ಬಿಡಿಸಲಾರಂಭಿಸಿದರು. ಈ ಮಕ್ಕಳಿಗೆ ಬೇರೆ ಕೆಲಸವಿಲ್ಲವೆಂದು ಕಂಡಕ್ಟರನು ರೇಗಿದಾಗ, ''ಬಾಬೂಜಿ, ತಮಗೆ ಎಲ್ಲಿ ಹೋಗಬೇಕು ?'' ಎಂದು ಮಕ್ಕಳು ವಿಚಾರಿಸಿಕೊಂಡವು. ತಮ್ಮೂರು ನೋಡಲು ಬಂದಿದ್ದಾರೆಂದು ಹೇಳಿದರೆ ಅವು ನಂಬಲೇ ಇಲ್ಲ. ''ತಮ್ಮಂಥವರು ಈ ಆಸ್ಪತ್ರೆಯಲ್ಲಿ ಇರುವುದು ಸರಿಯಲ್ಲ. ಸರಕಾರೀ ಅಧಿಕಾರಿಗಳಿಗಾಗಿ ವಿಶ್ರಾಂತಿಧಾಮ ಒಂದಿದೆ. ಅಲ್ಲಿಗೆ ಕರೆದುಕೊಂಡು ಹೋಗುತ್ತೇವೆ'' ಎಂದು ಸಕಲ ಸಾಮಾನುಗಳನ್ನು ಎತ್ತಿಕೊಂಡವು. ತಮ್ಮ ತಮ್ಮ ಹೆಸರು ಹೇಳಿಕೊಂಡು, ಊರ ಪರಿಚಯ ಮಾಡಿಕೊಡುತ್ತ ವಿಶ್ರಾಂತಿ ಗೃಹಕ್ಕೆ ಕರೆತಂದು, ಕೈಚೀಲಗಳನ್ನು ಖೋಲಿಯಲ್ಲಿ ಜೋಡಿಸಿಟ್ಟು, ದುಡ್ಡು ಸ್ವೀಕರಿಸಲು ನಿರಾಕರಿಸಿ, ಸಂಜೆಗೆ ತಿರುಗಿ ಬರುತ್ತೇವೆಂದು ಓಡಿಯೇಬಿಟ್ಟವು. ಅಲ್ಲಿಂದ ಒಂದು ವಾರದ ತನಕ ಆ ವಾನರ ಸೇನೆ ಒಳ್ಳೆ ಜೊತೆ ನೀಡಿತು.

ಎರಡು ಪ್ರಶಸ್ತ ಕೊಠಡಿಗಳಿರುವ ವಿಶ್ರಾಂತಿ ಗೃಹದಲ್ಲಿ ಕೆಮ್ಮಿದರೆ, ಕರೆದರೆ, ಕೂಗಿದರೆ ಒಂದು ನರಹುಳುವೂ ಪ್ರತ್ಯಕ್ಷವಾಗಲಿಲ್ಲ. ಸಾವಕಾಶವಾಗಿ ಹಿಂಬದಿ ಹೋಗಿ ಅಡಿಗೆ ಮನೆಯತ್ತ ಕಣ್ಣು ಹಾಯಿಸಿದಾಗ ಯಾರೋ ಊಟಮಾಡಿ ಬಿಟ್ಟುಹೋದ ಪ್ಲೇಟು, ಲೋಟ, ಪಾತ್ರೆಗಳು ಕಂಡವು. ಅರ್ಥಾತ್ ಇಲ್ಲಿ ಊಟ ಸಿಗಬಹುದು ಎಂಬ ಸುಳಿವು ಹತ್ತಿತು. ಆದರೂ

ನರಸಂಚಾರವಿಲ್ಲ. ಕೊಂಚ ಹೊತ್ತಿನ ಮೇಲೆ ದೂರದ ಬಾವಿಯಲ್ಲಿ ಯಾರೋ ನೀರು ಸೇದಲು ಬಂದಾಗ, ''ಇಲ್ಲಿ ಯಾರೂ ಇಲ್ಲವೇ?'' ಎಂದು ವಿಚಾರಿಸಿದೆ. ''ಸೀತಾರಾಮ ಪೇಟೆಗೆ ಹೋಗಿದ್ದಾನೆ, ಹಿಂತಿರುಗಿ ಬರಬಹುದು'' ಎಂಬ ಆಶ್ವಾಸನೆಯಿಂದಲೇ ಎಷ್ಟೋ ನೆಮ್ಮದಿ ಅನ್ನಿಸಿತು. ಕಟ್ಟಡದ ಎದುರಿಗೆ ಒಳ್ಳೆ ಹೂದೋಟ ಮಾಡಿದ್ದರು. ಅಲ್ಲಿ ಬಣ್ಣ ಬಣ್ಣದ ಪಾತರಗಿತ್ತಿಗಳೂ ಬಂದು ಮುತ್ತಿಕೊಂಡು ಮಧುಪಾನ ನಡೆಸಿದ್ದವು. ಇಲ್ಲಿಯವು ನಗರದ ಚಿಟ್ಟೆಗಳಂತೆ ಚಂಚಲ ವೃತ್ತಿ ಬಿಟ್ಟುಕೊಟ್ಟು ವಿರಾಮವಾಗಿ ಪರಾಗದ ಮೇಲೆ ವಿಶ್ರಮಿಸುತ್ತಿದ್ದುದರಿಂದ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ ಸಿಕ್ಕಿದಂತಾಯಿತು. ಹೊಟ್ಟೆ ತಾಳ ಹಾಕಲಾರಂಭಿಸಿದ್ದರಿಂದ ಯಾವನಾದರೂ ಇತ್ತ ಬರುತ್ತಿದ್ದಾನೆಯೇ ಎಂದು ಕಣ್ಣೋಡಿಸಿ ನೋಡಿದಾಗ ಯಾವನೋ ಕೈಚೀಲದೊಂದಿಗೆ, ಕಾಲುನಡಿಗೆಯಲ್ಲಿ ಬರುವದು ಕಾಣಿಸಿತು. ಇವನೇ ಸೀತಾರಾಮನಿದ್ದರೆ ಚೆನ್ನಾಗಿರುತ್ತಿತ್ತು! ಎಂದುಕೊಳ್ಳುತ್ತಿದ್ದಂತೆ ವ್ಯಕ್ತಿ ಗೇಟು ತೆಗೆದು ಒಳಹೊಕ್ಕ. ಅದೆಷ್ಟೋ ಕಾಲದ ಪರಿಚಯವಿದ್ದವರಂತೆ ಹಲ್ಲು ಕಿರಿದು ನಕ್ಕು, ''ನಮಸ್ತೆ ಬಾಬೂಜಿ'' ಎಂದ. ವಿಪರೀತ ಹಸಿವಾಗಿದೆ. ಏನಾದರೂ ಊಟ ತಿಂಡಿ ಸಿಗುವಂತಿದೆಯೇ?'' ಎಂದು ವಿಚಾರಿಸಿದಾಗ ''ಜೀ, ನೀವು ಹೇಳಿದ್ದನ್ನು ಪೇಟೆಯಿಂದ ಸಾಮಾನು ತಂದು ಅಡಿಗೆ ಮಾಡಿ ಬಡಿಸುತ್ತೇನೆ'' ಎಂದ. ಇದಕ್ಕೆ ಎರಡು ಗಂಟೆಳಾದರೂ ಬೇಕು ಎಂದಾಗ ಹೌಹಾರಿ, ಕೈ ಚೀಲದಲ್ಲಿದ್ದ ಬೆಲ್ಲ ಅವಲಕ್ಕಿಗಳಿಂದಲೇ ಉಪಾಹಾರ ಮುಗಿಸಿದ್ದಾಯಿತು. ಒಣ ಅವಲಕ್ಕಿ ಇಷ್ಟು ರುಚಿಯಾಗಿರುತ್ತದೆಂದು ಎಂದೂ ಅನಿಸಿರಲಿಲ್ಲ. ಅಂತೆಯೇ ಶ್ರೀಕೃಷ್ಣನು ಸುಧಾಮ ತಂದ ಅವಲಕ್ಕಿಯನ್ನು ತಾನೊಬ್ಬನೇ ತಿಂದು ತೇಗಿರಬೇಕು!

ಸುಖನಿದ್ರೆಯ ನಂತರ ಹಾಲಿಲ್ಲದ ಬೆಲ್ಲದ ಚಹ ಚಪ್ಪರಿಸುವಂತಾಯಿತು. ಸೀತಾರಾಮನಿಗೆ ಸಾಮಾನು ತರಲು ಹಣಕೊಟ್ಟು ರಾತ್ರೆಯ ಅಡಿಗೆ ಮಾಡುವಂತೆ ಹೇಳಿ, ಹೊರಗೆ ಕಾಯುತ್ತ ನಿಂತ ಕಪಿಸೇನೆಯನ್ನು ಸೇರಿಕೊಂಡೆ. ಹಳ್ಳಿಯ ಹುಡುಗರ ತಂಡದ ನಾಯಕತ್ವವನ್ನು ಒಬ್ಬ ನಗರವಾಸಿ ವಹಿಸಿಕೊಂಡದ್ದನ್ನು ನೋಡಿ ಹೆಂಗಳೆಯರು ಮುಸಿ ಮುಸಿ ನಕ್ಕರು. ಪಶ್ಚಿಮಕ್ಕಿರುವ ಬೃಹತ್ ಬಂಡೆಯತ್ತ ತೋರಿಸುತ್ತ, ಇದರಿಂದಲೇ ನಮ್ಮ ಹಳ್ಳಿಗೆ 'ಛೋಟೆ ಡೊಂಗರ' (ಕಿರಿ ಬೆಟ್ಟ) ಎಂಬ ಹೆಸರು ಬಂದಿದೆ ಎಂದ ಪರಕಾಸ (ಪ್ರಕಾಶ). ''ಇನ್ನೊಂದು ಹಳ್ಳಿಯಲ್ಲಿ ಇದಕ್ಕೂ ದೊಡ್ಡ ಬಂಡೆ ಇದೆ. ಅದಕ್ಕೆ ಬಡೆ ಡೊಂಗರ (ದೊಡ್ಡ ಬೆಟ್ಟ) ಹೆಸರು ಬಂದಿದೆ. ಇಲ್ಲಿಂದ ಹರದಾರಿ ದೂರದಲ್ಲಿ ವಿಪುಲವಾಗಿ ಬಂಡೆಗಲ್ಲುಗಳಿದ್ದ ಹಳ್ಳಿಗೆ 'ಡೊಂಗರಗಾಂವ್' ಎನ್ನುತ್ತಾರೆ. ಡೊಂಗರಘರ್‌ಗಳಂತಹ ಅನ್ವರ್ಥಕ ನಾಮಗಳಿವೆ'' ಎಂದು ಚತ್ರುನ್ನಾ (ಶತ್ರುಘ್ನ) ವಿವರಿಸಿದ. ಸುತ್ತಲೂ ಶಾಂತವಾದ ನಿಸರ್ಗ. ಹಕ್ಕಿಗಳ ಕೂಜನವಲ್ಲದೇ ಬೇರೆ ಧ್ವನಿಯೇ ಇಲ್ಲ. ದೂರದ ಕಾಡಿನಲ್ಲಿ ಕೊರಡು ಕಡಿಯುವದು, ಧ್ವನಿವಾಹಕದಲ್ಲಿ ಕೇಳಿದಂತೆ ಅನಿಸುತ್ತದೆ. ತೆನೆಗಳನ್ನು ಹೊತ್ತು ನಿಂತ ಹೊಚ್ಚ ಹಸಿರು, ಬತ್ತದ ಗದ್ದೆಗಳು, ಮಾವಿನ ತೋಪು ಮನಸ್ಸಿಗೆ ಮುದ ನೀಡಿದವು. ಅದನ್ನು ದಾಟಿ ಮುನ್ನಡೆದಾಗ, ಜುಳುಜುಳು ಹರಿಯುವ ಆಮದಯಿ ನದಿ, ದಾರಿಯನ್ನು ಅಡ್ಡಗಟ್ಟಿದಳು. ಶುಭ್ರವಾದ ನದಿಯ ನೀರಿನಡಿ ಗುಂಡುಗುಂಡಾದ ಕಲ್ಲುಗಳು ಹವಳದಂತೆ ಕಂಡವು. ಮೀನುಗಾರರ ಹೆದರಿಕೆ ಇಲ್ಲದೇ ಸ್ವಚ್ಛಂದವಾಗಿ ಈಜಾಡಿಕೊಂಡಿದ್ದ ಮೀನುಗಳು ಆಗಂತುಕರಿಂದ ದೂರ ಸರಿದವು. ನೀರ ಮೇಲೆ ತೇಲುತ್ತ ಬಂದ ಬಾತುಕೋಳಿಗಳ ತಂಡ, ದಿಕ್ಕು ಬದಲಿಸಿ ಮುಂದುವರಿಯಿತು. ಎಂಥ ಸುಂದರ ತಾಣ ಅನಿಸದೇ ಇರಲಿಲ್ಲ!

ರಸ್ತೆಯಂಚಿನಲ್ಲಿ ಇರುವ ಚಿಕ್ಕ ಗುಡಿಸಲಿನತ್ತ ಕೈ ತೋರಿಸುತ್ತ, ಇದೇ ನಮ್ಮೂರಿನ

ದಂತೇಶ್ವರಿಯ ದೇವಾಲಯ ಎಂದಳು ಪುಟ್ಟ ಮಾದ್ರಿ (ಮಾಧುರಿ). ಇಕ್ಕಟ್ಟಾದ ಬಾಗಿಲಿನಿಂದ ಒಳಸೇರಿ ಕಗತ್ತಲಿನಲ್ಲಿ ಅಂಬೆಗಾಲಿಡುತ್ತ ಒಳಗೆ ಹೊಕ್ಕಾಗ ಬಿದಿರಿನ ಪಲ್ಲಕ್ಕಿಯಲ್ಲಿ ತೂಗು ಹಾಕಿದ ದೇವಿ ಪ್ರತ್ಯಕ್ಷಳಾದಳು. ತೂಗುತ್ತಿದ್ದ ಕಿರುಗಂಟೆಯಿಂದ ನಾದ ಹೊರಡಿಸಿ, ಜಾಗಟೆ ಬಾರಿಸಿ ಶ್ರೀಗಂಧ ಹಣೆಗೆ ಹಚ್ಚಿಕೊಂಡು ಹೊರಬರುವಷ್ಟರಲ್ಲಿ ಉಸಿರು ಕಟ್ಟಿದಂತಾಯಿತು. ಸನಿಹದಲ್ಲಿಯೇ ಮುಗಿಲೆತ್ತರ ಬೆಳೆದ ಆಲದ ಮರದಡಿಯಲ್ಲಿ ಉಮಾಮಹೇಶ್ವರ, ಗಣಪತಿ ವಿಷ್ಣುವಿನ ಸುಂದರ ವಿಗ್ರಹಗಳನ್ನು ತೋರಿಸಿದರು. ಇವು ಎಲ್ಲಿಂದ ಬಂದವು ಎಂದು ವಿಚಾರಿಸಿದಾಗ, ''ಭೂಮಿ ಅಸ್ತಿತ್ವಕ್ಕೆ ಬಂದಾಗಿನಿಂದ ಇಲ್ಲಿಯೇ ಇವೆ!'' ಎಂದು ಅಧಿಕಾರ ವಾಣಿಯಿಂದ ಹೇಳಿದ್ದಲ್ಲದೆ ಮನವರಿಕೆ ಮಾಡಿಕೊಡಲು ಸಹಾಯಕ ಬೇರಿನಲ್ಲಿ ಸೇರಿಕೊಂಡು ಭಗ್ನವಾದ ಶಿಲ್ಪವೊಂದನ್ನು ತೋರಿಸಿದರು. ''ಇಂಥ ವಿಗ್ರಹಗಳು ಊರ ಕೆರೆಯ ದಂಡೆಯ ಮೇಲೆ ರಾಶಿ ರಾಶಿಯಾಗಿ ಬಿದ್ದಿವೆ'' ಎಂದು ಅಲ್ಲಿಯೂ ಎಳೆದುಕೊಂಡು ಹೋದರು. ತಿಳಿನೀರಿನ ಪುಷ್ಕರಿಣಿಯಲ್ಲಿ ಶ್ವೇತಕಮಲಗಳು ನಾಚುತ್ತ ಬಳುಕುತ್ತ ನಿಂತಿದ್ದವು. ಬರಿಮೈಯಲ್ಲಿ ಸ್ನಾನಕ್ಕಿಳಿದ ಈರ್ವರು ಯುವತಿಯರಿಗೆ ನಾಚಿಕೆ ಸೋಂಕಿತು. ಕ್ಯಾಮರಾ ಸಿದ್ಧವಾಗಿಯೇ ಇದ್ದರೂ ಅವರ ಅಸಹಾಯಕತೆಯ ಲಾಭ ಪಡೆಯಲು ಮನಸ್ಸು ನಿರಾಕರಿಸಿತು.

ಕೆರೆಯ ಇನ್ನೊಂದು ದಡದಲ್ಲಿ ಎರಡು ದೇವಸ್ಥಾನಗಳು ಭಗ್ನಾವಸ್ಥೆಯಲ್ಲಿದ್ದವು. ಒಂದರಲ್ಲಿ ಜೋಡಿ ಶಿವಲಿಂಗಗಳಿದ್ದರೆ, ಇನ್ನೊಂದರಲ್ಲಿ ಮುಂದೆ ತುಳಸಿಕಟ್ಟೆಯಿತ್ತು. ಇವುಗಳ ಸುತ್ತಮುತ್ತ ಹತ್ತಾರು ಶಿಲ್ಪಗಳು ಮಣ್ಣಿನಲ್ಲಿ ಹುದುಗಿಹೋಗಿದ್ದವು. ವಾನರ ಸೇನೆಯ ಸಹಾಯದಿಂದ ಮಣ್ಣು ತೆಗೆದಾಗ ಸುಂದರವಾದ ದೇವ ದೇವತೆಗಳ ವಿಗ್ರಹಗಳು ಪ್ರತ್ಯಕ್ಷವಾದವು. ಅವುಗಳ ಜೊತೆ ಮಹಾಸತಿ ಕಲ್ಲು, ವೀರಗಲ್ಲುಗಳು, ಶಾಸನಗಳು ಕಾಲು ಮುರಿದುಕೊಂಡುಬಿದ್ದಿದ್ದವು. ಶಾಸನಗಳ ಲಿಪಿ ಹಳಗನ್ನಡ - ತೆಲುಗು ಎಂಬುದರಲ್ಲಿ ಸಂಶಯವೇ ಇರಲಿಲ್ಲ. ರಾಷ್ಟ್ರಕೂಟರು, ಚಾಲುಕ್ಯರು ತಮ್ಮ ರಾಜ್ಯವನ್ನು ಮಧ್ಯಭಾರತದವರೆಗೆ ವಿಸ್ತರಿಸಿದ್ದರು ಎಂಬುದನ್ನು ಸ್ಮರಿಸಿಕೊಂಡೆ. ಬಸ್ತರ ಜಿಲ್ಲೆಯ ದಕ್ಷಿಣಕ್ಕೆ ಆಂಧ್ರಪ್ರದೇಶದ ಗಡಿಯಿರುವದರಿಂದ ಶಾಸನಗಳನ್ನು ಅಲ್ಲಿಯ ಅರಸುಮನೆತನದ ವಂಶಜರು ನಿಲ್ಲಿಸಿದ್ದಾದರೆ ಏನೂ ಆಶ್ಚರ್ಯವಿಲ್ಲ. ಇವುಗಳ ಬಗ್ಗೆ ಊರ ಹಿರಿಯನಿಗೆ ವಿಚಾರಿಸಿದಾಗ, ತನಗೆ ಹೆಚ್ಚೇನೂ ತಿಳಿಯದು. ಬಾರಸೂರಿನಲ್ಲಿ ಇಂಥ ಅನೇಕಾನೇಕ ವಿಗ್ರಹಗಳಿವೆ. ಅಲ್ಲಿಯವರು ಅವೆಲ್ಲ ಬಾಣಾಸುರನ ರಾಜ್ಯಕ್ಕೆ ಸೇರಿದವುಗಳು ಎಂದು ಅಭಿಪ್ರಾಯಪಡುತ್ತಾರೆ ಎಂದು ಮಾತು ಮುಗಿಸಿದ. ಮರುದಿನ ಭೇಟಿಯಾಗೋಣವೆಂದು ಮಕ್ಕಳಿಂದ ಬಿಡುಗಡೆ ಹೊಂದಿ ವಾಸಸ್ಥಳಕ್ಕೆ ಹಿಂತಿರುಗಿದೆ.

ದೊಡ್ಡ ಬೆಟ್ಟ, ಸೂರ್ಯನನ್ನು ಮರೆಮಾಡುವದರಿಂದ ಈ ಊರಿನಲ್ಲಿ ಐದು ಗಂಟೆಗೇ ಕತ್ತಲಾಗಿಬಿಡುತ್ತದೆ. ಹಕ್ಕಿಗಳಂತೆ ಹಳ್ಳಿಗರೂ ತಮ್ಮ ದೈನಂದಿನ ಕೆಲಸಗಳನ್ನು ಪೂರೈಸಿಕೊಂಡು ವಿಶ್ರಾಂತಿಯತ್ತ ಲಕ್ಷ ಹಾಕಿದರು. ಸದಾ ಉರಿಯುವ ಬೆಂಕಿಯ ಸುತ್ತಲೂ ಕಲೆತು ಕೆಲ ಹೊತ್ತು ನಗೆ ಮಾತು ಮುಗಿಸಿ ಹಾಡಲು ತೊಡಗಿದರು. ಯುವ ಕೃಷಿಕರು, ತಮ್ಮ ಬೆಳೆಯನ್ನು ಕಾಡುಹಂದಿ, ಕೋಣಗಳಿಂದ ಸಂರಕ್ಷಿಸಲು ಬಿದಿರಿನ ಮಂಚಲನ್ನು ಏರಿದರು. ಅವರು ಹಾಕಿದ ಬೆಂಕಿಯ ಉರಿಯಿಂದ ಶೀತ ಕಡಿಮೆ ಆದರೆ, ಹೊಗೆಯಿಂದಾಗಿ ಕೀಟಗಳಿಂದ ರಕ್ಷಣೆಯಾಗುತ್ತದೆ, ವನ್ಯಪ್ರಾಣಿಗಳೂ ಬೆಂಕಿಯ ಸನಿಹಕ್ಕೆ ಬಾರವು. ಆಚೆ-ಈಚೆ ಮಂಚಲು ಏರಿದವನು ಗಟ್ಟಿಗಟ್ಟಿಯಾಗಿ ಮಾತನಾಡುವದರ ಜೊತೆಗೆ 'ಲಲಲೋ ಲೋ ಲೋಽಽ' ಎಂದು ರಾಗ ಎಳೆಯುತ್ತಿದ್ದರು. ಆಗೊಮ್ಮೆ ಈಗೊಮ್ಮೆ ಪಶುಗಳನ್ನು ಹೆದರಿಸಲು, ಕೋಡಿನ ಕಹಳೆ (ತೋಡಿ) ಯಿಂದ 'ಪೊಽಪೊಽಽ' ಪೊಪೊಪೊ ಽಽಽ' ಎಂದು ನಾದ ಹೊರಡಿಸಿದರು.

ಹುಣ್ಣಿಮೆಯ ಮರುದಿನವಾದ್ದರಿಂದ ಕೊಂಚ ವಿಳಂಬದ ಚಂದ್ರೋದಯವಾಯಿತು. ಬೆಳದಿಂಗಳಲ್ಲಿ ಆ ಸೃಷ್ಟಿಸೌಂದರ್ಯ ಸವಿದಷ್ಟೂ ಕಡಿಮೆ ಎನಿಸಿತು. ಆ ನಡುರಾತ್ರಿ ಆಮದಯಿ ನದಿಯಲ್ಲಿ ನೀರಾಟವಾಡುವ ಮನಸ್ಸಾಯಿತು. ಆದರೆ ಸುರಕ್ಷತೆಯ ದೃಷ್ಟಿಯಿಂದ ಸರಿಯಲ್ಲ ವೆನಿಸಿತು. ಇಬ್ಬರು ಹುಡುಗರನ್ನು ಜೊತೆಯಲ್ಲಿರು ಎಂದರೆ ಚೆನ್ನಾಗಿರುತ್ತಿತ್ತು ಅನಿಸಿತು. ಕ್ರಮೇಣ ಕಾವಲುಗಾರರ ಮಾತು, ಹಾಡು, ಶಂಖನಾದಗಳು ಕಡಿಮೆಯಾಗಿದ್ದರಿಂದ ಅವರಿಗೆ ಜೋಂಪು ಹತ್ತಿರಬೇಕು ಎನಿಸಿತು, ಕಣ್ಣುಗಳು ಒಂದೇ ಸವನೆ ಕೂರಲಾರಂಭಿಸಿದಾಗ ಮನಸ್ಸಿನಲ್ಲಿದ್ದ ಮನಸ್ಸಿನಿಂದ ನಿದ್ರಾವಶನಾಗಬೇಕಾಯಿತು.

ಕುಕ್ಕುಟ ಸಂಸಾರ, ಬೆಳಗಿನ ನಾಲ್ಕು ಗಂಟೆಗೇ ಜೀವಕೋಟಿಯನ್ನು ಎಚ್ಚರಿಸಲಾರಂಭಿಸಿತು. ಹೊಳೆಗೆ ಹೋಗಿ ಹೆಂಗಳೆಯರು ಮಡಕೆಗಳಲ್ಲಿ ನೀರು ಹೊತ್ತು ಹಿಂದಿರುಗಿದರು. ಒಬ್ಬ ಕೃಷಿಕನು ತನ್ನ ಬೆಳೆಯನ್ನು ಪರೀಕ್ಷಿಸುತ್ತಿದ್ದಾಗ, ಕೆಲವೆಡೆ ಕಾಡು ಹಂದಿಗಳು ಹಾಳುಗೆಡವಿದ ಚಿಹ್ನೆಗಳನ್ನು ನೋಡಿ ಬೆಚ್ಚಿದ. ಆದರೆ, ಹೆಜ್ಜೆಗಳ ಜಾಡುಹಿಡಿದು ಹೋಗಿ ವರಾಹವು ಕೆಸರಿನಲ್ಲಿ ಸಿಕ್ಕಿಹಾಕಿಕೊಂಡದ್ದನು, ನೋಡಿದಾಕ್ಷಣ ಹುರುಪುಗೊಂಡು ಹಳ್ಳಿಯವರಿಗೆಲ್ಲ ಈ ಶುಭ ಸಮಾಚಾರ ಸಾರಿದ. ಗಟ್ಟಿಮುಟ್ಟಾದ ಆಳುಗಳು ಬಾಣ-ಬಿಲ್ಲು, ಲಾಠೀ ಬರ್ಚಿ, ಕೊಡಲಿ, ಕಲ್ಲುಗಳಿಂದ ಆಕ್ರಮಣ ನಡೆಸಿದಾಗ, ರಕ್ತಮಯವಾದ ಕಾಡುಹಂದಿ ಸೋಲೊಪ್ಪದೆ ಕಾಡಿನತ್ತ ಧಾವಿಸಿತು. ಹುಡುಕುತ್ತಿರುವ ಬೇಟೆ, ಮನೆ ಬಾಗಿಲಿಗೆ ಬಂದಾಗ, ಬಿಡುವುದುಂಟೆ ? ಅದರ ಬೆನ್ನಟ್ಟಿ, ಸಂಹರಿಸಿ, ಮಾಂಸವನ್ನು ಹಂಚಿಕೊಂಡರು. ಅಂದು ಎಲ್ಲರ ಮನೆಯಲ್ಲಿ ಮಾಂಸದ ಮೇಜವಾನಿಯಿದ್ದರೂ ದೂರದ ಅತಿಥಿಯನ್ನು ಆಮಂತ್ರಿಸಬೇಕೆಂದು ಯಾರಿಗೂ ತೋಚಲಿಲ್ಲ. ಬಹುಶಃ ನಗರವಾಸಿಗಳೆಲ್ಲ ಶಾಕಾಹಾರಿಗಳೆಂದು ಅನಿಸಿರಬೇಕು. ಬರುತ್ತೇನೆಂದು ಹೇಳಿದ ಹುಡುಗರು ಮೇಜವಾನಿಯ ಗದ್ದಲದಲ್ಲಿ, ಬರುವ ತೊಂದರೆ ತೆಗೆದುಕೊಳ್ಳಲಿಲ್ಲ. ಇದರಿಂದಾಗಿ ಮುಂಡಾ ಟೆಕ್ರಾ ಹಳ್ಳಿಗೆ ಹೋಗಿಬರಲು ಅನುಕೂಲವೇ ಆಯಿತು.

ಜೊತೆಗೆ ಸ್ಥಳೀಯನೊಬ್ಬನಿದ್ದರೆ ಆದಿವಾಸಿಗಳಿಗೆ ಮೈಚಳಿಬಿಟ್ಟು ಮಾತನಾಡಲು ಅನುಕೂಲವಾಗುತ್ತದೆ ಅನಿಸಿತು. ಕಥೆಗಳನ್ನು, ಸ್ವಾರಸ್ಯಕರ ಘಟನೆಗಳನ್ನು ಹೇಳುತ್ತಿದ್ದುದರಿಂದ ಹಳ್ಳಿಯ ಹುಡುಗರೆಲ್ಲ ಶಿಷ್ಯರಾಗಿಬಿಟ್ಟಿದ್ದರು. ಸಾಲದ್ದಕ್ಕೆ ಮಾಸ್ಟರ್ ಸಾಬ್ ಎಂದೇ ಸಂಬೋಧಿಸ ಲಾರಂಭಿಸಿದರು. ಅವರಿಗೆ ಇಲ್ಲಿಯ ಕಾಡು-ಕೊಳ್ಳಗಳ ಪರಿಚಯ, ಚೆನ್ನಾಗಿರುವವನು, ಜೊತೆಗೆ ಸಿಗಬಹುದೇ ಎಂದು ವಿಚಾರಿಸಿದಾಗ ನೇರ ಸುಖದೇವ ರಾಜಮೇಸ್ತ್ರಿಯ ಕುಟೀರಕ್ಕೆ ಕರೆದೊಯ್ದರು. ಆತನ ಆದಿವಾಸಿ ಪತ್ನಿ, ಅಂಗಳವನ್ನು ಸಾರಿಸುವುದರಲ್ಲಿ ಮೈಮರೆತವಳು. ಅಪರಿಚಿತನನ್ನು ಕಂಡು ಸೀರೆ ಸರಿಪಡಿಸಿಕೊಂಡಳು. ವಾಮನ ಮೂರ್ತಿಯಂತಿದ್ದ ಸುಖದೇವನು ಸುಖಿಯಾಗಿದ್ದಂತೆಯೂ ತೋರಲಿಲ್ಲ. ದೇವತ್ವ, ರಾಜತ್ವಕ್ಕೆ ಹತ್ತಿರದವನೂ ಅನಿಸಲಿಲ್ಲ. ಕೆಲಕಾಲ ಬಡಿಗತನ ಮಾಡಿ, ನಂತರ ಹೊಲಿಗೆ ಮಾಡಿದ್ದನಂತೆ. ಅಬುಜಮಾರದ ವಿವಿಧ ಹಳ್ಳಿಗಳ ನಿಕಟ ಪರಿಚಯ ಅವನಿಗಿತ್ತು. ಮಾರ್ಗದರ್ಶಿಯಾಗಿ ಬರಲು ಕೂಡಲೇ ಒಪ್ಪಿ ಕೊಂಡ. ದಿನ ಒಂದಕ್ಕೆ ಐದು ರೂಪಾಯಿ ಕೇಳಿದಾಗ, ಅದರ ಇಮ್ಮಡಿ ಕೊಡುವೆನೆಂದಾಗ, ಅವನ ಆನಂದಕ್ಕೆ ಮೇರೆಯೇ ಇರಲಿಲ್ಲ. ಪತಿ ಶುದ್ಧ ನಾಲಾಯಕನೆಂದು ನಂಬಿದ ಪತ್ನಿಗೆ, ಆತನನ್ನು ಹುಡುಕಿಕೊಂಡು ನಗರದ ಮಾಸ್ಟರ್ ಸಾಬ್ ಬರುವ ಸಾಧ್ಯತೆಯಿದೆ ಎಂದು ನಂಬಲು ಸಾಧ್ಯವಾಗಲಿಲ್ಲ! ಪ್ರತಿದಿನವೂ ಕಾಲುನಡಿಗೆಯಲ್ಲಿ ದೂರದೂರದ ಹಳ್ಳಿಗಳಿಗೆ ಭೇಟಿಕೊಟ್ಟು ಹಿಂದಿರುಗಿದಾಗ, ಕಪಿ ಸೈನ್ಯ ಕಾದುಕೊಂಡಿರುತ್ತಿತ್ತು.

# 3. ಮುಂಡಾಟಿಕರಾ



ನಾರಾಯಣಪುರದ ದಕ್ಷಿಣಕ್ಕಿರುವ ದಟ್ಟಕಾಡು, ಕಣಿವೆ, ಇಂದ್ರಾವತಿ ನದಿಯ ಕೊಳ್ಳದಿಂದ ಒಳಗೊಂಡ ಅಭೇದ್ಯವೆಂದು ಒಂದು ಕಾಲಕ್ಕೆ ಖ್ಯಾತವಿದ್ದ ಅಬುಜಮಾಡಕ್ಕೆ ಕಾಲ್ನಡಿಗೆಯಲ್ಲಿ ಹೋಗಬೇಕಾಗುತ್ತದೆ. ಅಲ್ಲಿ ಸಾರ್ವಜನಿಕ ವಾಹನದಿಂದ ಮುಟ್ಟಬಹುದಾದ ಕಟ್ಟಕಡೆಯ ಊರೆಂದರೆ ಛೋಟೆ ಡೊಂಗರ. ಮುಂಡಾಟಿಕ್ರಾ, ಛೋಟೆ ಡೊಂಗರದಿಂದ 2 ಕಿಲೋ ಮೀಟರ್ ದೂರ ಇರುವ ಆದಿವಾಸಿಗಳ ಒಂದು ಪಂಗಡವಾದ ಹಲ್ಬಿ ಜನರ ಹಳ್ಳಿ. ವಿಪುಲ ಮಳೆಯಿಂದಾಗಿ ಹೊಂಡ, ಹಳ್ಳಗಳು ಹಿಗ್ಗಿದ್ದವು. ವನಸಿರಿಯೂ ಹಚ್ಚ ಹಸುರಾಗಿದೆ. ಆದರೆ

ಕರಿಮಣ್ಣಿನ ಕಾಲುಹಾದಿ, ದನಕರುಗಳ ಓಡಾಟದಿಂದ ಕೆಸರಿಗೆ ಪರಿವರ್ತನೆ ಆಗಿದೆ. ಕಳ್ಳಕಾಕರಿಗಿಂತ ಕಾಡುಪ್ರಾಣಿಗಳ ಪೀಡೆ ಹೆಚ್ಚೆಂದು ಕಾಣುತ್ತದೆ. ಇಮಾರತಿಗೆ ಹಾಕಬಹುದಾದ ಉತ್ತಮ ಕಟ್ಟಿಗೆಯನ್ನು ಜೋಡಿಸಿ ಗಟ್ಟಿಮುಟ್ಟಾಗಿ ಎತ್ತರದ ಬೇಲಿ ಜೋಡಿಸಿದ್ದಾರೆ. ಅಂತಹದೇ ಕೊರಡು ತುಂಡುಗಳಿಂದ ನರಿ, ತೋಳ, ಹುಲಿಯಿಂದಲೂ ಭೇದಿಸಲಾಗದ ದನದ ಹಟ್ಟಿಯನ್ನು ನಿರ್ಮಿಸಿ, ದಷ್ಟಪುಷ್ಟವಾದ ದನಕರುಗಳನ್ನು ಸಾಕಿದ್ದಾರೆ. ಆದರೆ ಈ ಹಟ್ಟಿಗಳಲ್ಲಿ ಸ್ಥಳದ ಅಭಾವ ವಿಪರೀತ. ಹೀಗಾಗಿ ಕಟುಕರ ಕಾರ್ಖಾನೆಗೆ ಸಾಗಿಸುವಾಗ ಲಾರಿಯಲ್ಲಿ ತುಂಬುವಂತೆ ಗೋವುಗಳನ್ನು ತುಂಬುವುದರಿಂದ ಅವು ನಿಂತಲ್ಲೇ ಸ್ಥಿತಪ್ರಜ್ಞೆಯನ್ನು ಸಿದ್ಧಿಸಿಕೊಳ್ಳಬೇಕಾಗಿದೆ. ಆಡುಗಳಿಗಾಗಿ ಅದೇ ಹಟ್ಟಿಯ ಮೇಲೆ ಮಂಚಲುಕಟ್ಟಿ ಹತ್ತಿ ಇಳಿಯಲು ಹಲಿಗೆ ಜೋಡಿಸಿದ್ದಾರೆ. ಅವು ಮರ ಹತ್ತಿದ ಶಿಕಾರಿಯಂತೆ ಆಗಂತುಕನ ಚಲನವಲನಗಳನ್ನು ದೂರದಿಂದಲೇ ವೀಕ್ಷಿಸಿ 'ಯಾರಿವನು ?' ಎಂದು ಸೋಜಿಗಪಟ್ಟವು.

ಮುಂಜಾವಿನ ಹೊಂಬಣ್ಣದ ಬೆಳಕಿನಲ್ಲಿ ಎದುರಿಗೆ ಬರುವ ಮಡಕೆ ಕೊಡಗಳೊಂದಿಗೆ ನೀರಿಗೆ ಹೊರಟ ಹೆಂಗಳೆಯರ ತಂಡದ ದೃಶ್ಯ ರಮ್ಯವೆನಿಸಿತು. ಹೊಸಬನಿಗಾಗಿ ಕಾಲುದಾರಿ ಮಾಡಿಕೊಡುತ್ತ, 'ಯಾರಿವನು ?' ಎಂದು ಪಿಸುಗುಟ್ಟಿದರು. ದಾರಿಗೆ ಅಡ್ಡವಾಗಿ ಹರಿಯುವ ಝರಿಯನ್ನು ದಾಟಲು ಈಚಲು ಮರದ ಬೊಡ್ಡೆಗಳನ್ನು ಜೋಡಿಸಿದ್ದರು. ಮರಳು ಕೀಲಿನಂತೆ ಅದು ಹೇಗೆ ಕಾಲಿಟ್ಟರೂ ಹೊರಳದೆ ಇರುತ್ತಿರಲಿಲ್ಲ. ಕಾಲೊಂದು ಜಾರಿ ಕೆಸರಾದರೂ, ಮೈಕೈ ನೋವಾಗಲಿಲ್ಲವೆಂದು ನೆಮ್ಮದಿಯೇ ಆಯಿತು. ಎತ್ತರವಾದ ಮರಗಳ ಆಶ್ರಯದಲ್ಲಿ ಕೇವಲ ಆರೇ ಆರು ಪರ್ಣಕುಟಿಗಳು ನಿಂತು, ಬಲಿಚಕ್ರವರ್ತಿ ವಾಮನರನ್ನು ನೆನಪಿಸಿದವು. ಇದ್ದುದರಲ್ಲಿಯೇ ದೊಡ್ಡ ಮನೆಯೊಂದರ ಅಂಗಳ ಹೊಕ್ಕಾಗ, ಬಿಸಿಲು ಕಾಯಿಸುತ್ತಿದ್ದ ಮಕ್ಕಳು ಸ್ವಗತ ಎಂಬಂತೆ, ''ನಮ್ಮ ಛಾಯಾಚಿತ್ರ ತೆಗೆಯುತ್ತೀರಾ ?'' ಎಂದು ವಿಚಾರಿಸಿದವು. ''ಹೌದು'' ಎಂದು ಮಾತನಾಡಿಸುತ್ತಾ ಬಳಿಸಾರಿದಾಗ, ಏನೋ ಅಚಾತುರ್ಯ ನಡೆದಿರಬೇಕು ಎಂದು ಭಾವಿಸಿ ಅಳುಕಿದವು. ನಿಜಕ್ಕೂ ಅವರ ಛಾಯಾಚಿತ್ರ ತೆಗೆಯಲೆಂದೇ ಬಂದಿರುವುದು ಎಂದು ಅವಕ್ಕೆ ಮನಗಾಣಿಸಲೆತ್ನಿಸಿದಾಗ ಈರ್ವರಿಗೂ ಎಷ್ಟು ಹಣ ಕೊಡಬೇಕೆಂದು ವಿಚಾರಿಸಿ ಕೊಂಡವು. ಹಣಕ್ಕಾಗಿ ಅಲ್ಲ, ಹವ್ಯಾಸಕ್ಕಾಗಿ ಮಾಡುವ ಕೆಲಸವಿದು ಎಂದು ವಿವರಿಸುತ್ತಿದ್ದಂತೆ, ಕೈ-ಕ್ಯಾಮರಾಗಳು ತಮ್ಮ ಕೆಲಸ ಮಾಡಿಬಿಟ್ಟಿದ್ದವು. ಮಕ್ಕಳು ಒಳಗೋಡಿ ಛಾಯಾಚಿತ್ರ ಪ್ರಕರಣ ಹೇಳಿರಬೇಕು. ಯಜಮಾನ ಕುರಮನು ಅಂಗಳಕ್ಕೆ ಇಳಿದು ಸ್ವಾಗತ ಬಯಸಿದ.

''ಜಗದಲಪುರದಿಂದ ಬಂದಿರಾ ?'' ಎಂಬ ಪ್ರಶ್ನೆಗೆ ಅಲ್ಲವೆಂದು ಉತ್ತರ ಬಂದಾಗ, ರಾಯಪುರದಿಂದ ಬಂದಿರಬೇಕು ಎಂದುಕೊಂಡ. ಇನ್ನೂ ದೂರದಿಂದ ಅಂದಾಗ, ಭೋಪಾಲ ದಿಂದಲೇ ಇರಬೇಕು ಎಂದು ನಿರ್ಧರಿಸಿಬಿಟ್ಟ. ಭೋಪಾಲಗಿಂತ ದೂರ ಬೆಂಗಳೂರು ಎಂಬ ನಗರವಿದೆ ಎಂದು ಬಿಂಬಿಸಲು ಸಾಧ್ಯವಿರದಿದ್ದರಿಂದ ಸುಮ್ಮನಿರಬೇಕಾಯಿತು. ಕುಳಿತು ಕೊಳ್ಳಲು ಯಾರೋ ಒಳಗಿನಿಂದ ಕಟಿಯಾ (ಚಿಕ್ಕ ಮಂಚ)ವನ್ನು ಪೂರೈಸಿದರು. ಒಂದು ದಿಕ್ಕು ಇನ್ನೊಂದಕ್ಕಿಂತ ಕಿರಿದಾಗಿತ್ತು. ಅದಕ್ಕೆ ಬಿಗಿದ ತೊಗಟೆಯ ಎಳೆಗಳನ್ನು ಪರಾಮರ್ಶಿಸು ತ್ತಿರುವಾಗ, ''ನೀವೀಗ ಬಡವರ ಜಗತ್ತಿನಲ್ಲಿದ್ದೀರಿ. ಇಲ್ಲಿ ಕೆನವಾಸ, ನಾಯಲೋನ, ನವಾರ ಪಟ್ಟಿಗಳು ಸಿಗುವುದಿಲ್ಲ. ಅವನ್ನು ಕೊಳ್ಳುವ ಯೋಗ್ಯತೆಯೂ ನಮಗಿಲ್ಲವಾದ್ದರಿಂದ ಈ ಮರದ ತೊಗಟೆ ಇಲ್ಲವೇ ಸೀಳಿದ ಬೆತ್ತ ಬಳಸುತ್ತೇವೆ. ಮನೆಯ ಹೆಂಗಳೆಯರನ್ನು ಜಾತ್ರೆ, ದಸರಾ ದಿನಗಳಲ್ಲಿ ಪರ ಊರಿಗೆ ಕರೆದೊಯ್ಯುವಾಗ ಚಕಡಾದಲ್ಲಿ ಸರಿಯಾಗಿ ಹೊಂದುವಂತೆ ಕಟಿಯಾ ನಿರ್ಮಿಸಿದ್ದರಿಂದ ಅದು ಕಾಟಕೋನ ಚೌಕೋನವಾಗಿಲ್ಲ'' ಎಂದು ಕುರಮನು ವಿವರಿಸಿದ.

ಬಂದ ಉದ್ದೇಶ ಹೇಳಿ ಅವರನ್ನೆಲ್ಲ ತೀರ ಹತ್ತಿರದಿಂದ ಅಭ್ಯಸಿಸುವ ಏಕಮೇವ ಉದ್ದೇಶ ದಿಂದಲೇ ಅಷ್ಟು ದೂರದಿಂದ ಬಂದಿದ್ದೇನೆಂದಾಗ ಗೆಲುವಾದ, ಹೊಗೆ ಕಾರುವ, ಹಾಲಿಲ್ಲದ ಬೆಲ್ಲದ ಚಹಾ ಅತಿಥಿಗಳ ಗೌರವಾರ್ಥ ಪೂರೈಸಿದರು. ಆದಿವಾಸಿಗಳ ಆಧುನಿಕ ಪೇಯ ಹೀರುತ್ತ, ''ಇಷ್ಟೆಲ್ಲ ದನಕರು, ಆಡುಗಳಿದ್ದಾಗಲೂ ಹಾಲಿಲ್ಲದ ಚಹಾ ಕುಡಿಯುವುದರ ವೈಶಿಷ್ಟ್ಯವೇನು ?'' ಎಂದು ಕೇಳಿದಾಗ, ''ಮೊದಲಿನಿಂದಲೂ ಇದೇ ರೂಢಿ, ಅಲ್ಲದೆ, ಹಸುವಿನ ಹಾಲು ಹುಟ್ಟುವುದೇ ಕರುವಿಗಾಗಿ ಎಂಬುದನ್ನು ನಾವು ದೃಢವಾಗಿ ನಂಬುವುದರಿಂದ, ಎಳೆಯರಿಗೆ, ಮುದುಕರಿಗೆ ಸಾಕಾಗುವಷ್ಟು ಮಾತ್ರ ಹಾಲನ್ನು ಹಿಂಡಿ ಉಳಿದದ್ದನ್ನು ಕರುವಿಗೆ ಬಿಡುತ್ತೇವೆ. ಅಷ್ಟೇ ಅಲ್ಲದೆ, ಹಿಂಡಿದ ಹಾಲು ಹೆಚ್ಚು ಉಳಿದರೂ ನಾವು ಸೇವಿಸದೇ ಅವಕ್ಕೇ ಕುಡಿಸುತ್ತೇವೆ. ನಾವು ಮೀನು-ಮಾಂಸ ತಿನ್ನುತ್ತೇವೆ. ಆ ಕರುಗಳಿಗೆ ಹುಲ್ಲಿನ ಹೊರತಾಗಿ ಏನೂ ಇಲ್ಲ. ಹತ್ತಿಕಾಳು-ಹಿಂಡಿ ಪೂರೈಸಲು ನಮಗೆ ಸಾಧ್ಯವಿಲ್ಲವಾದ್ದರಿಂದ ಹೀಗೆ ಮಾಡಲೇ ಬೇಕಾಗುತ್ತದೆ'' ಎಂದ ಯಜಮಾನ. ತಮ್ಮ ಸಾಕುಪ್ರಾಣಿಗಳ ಬಗ್ಗೆ ಎಷ್ಟೊಂದು ಕಳಕಳಿ ಇವರಿಗೆ. ಸಹಚರಿ ಜೀವಿಗಳ ಯೋಗಕ್ಷೇಮವನ್ನು ಬುದ್ಧ್ಯಾಪೂರ್ವಕ ತೆಗೆದುಕೊಳ್ಳುವ ಈ ಆದಿವಾಸಿಗಳು, ತಮ್ಮ ಸ್ವಾರ್ಥಕ್ಕಾಗಿ ಪಶು-ಪ್ರಾಣಿಗಳ ಸರ್ವಸ್ವವನ್ನು ತನ್ನದನ್ನಾಗಿ ಮಾಡಿಕೊಳ್ಳುವ ಆಧುನಿಕರು, ಇವರಲ್ಲಿ ಯಾರು ಸುಸಂಸ್ಕೃತರು ? ಎಂದು ನಿರ್ಧರಿಸುವುದು ಕಷ್ಟದ್ದಾಯಿತು.

ತುಳಸಿಯ ಕಟ್ಟೆ, ಅದರೊಂದಿಗೆ ಇರುವ ಶಿವಲಿಂಗ, ಉಮಾಮಹೇಶ್ವರ ವಿಗ್ರಹ ನೋಡಿ, ''ನೀವು ಹಿಂದೂಗಳ ದೇವರನ್ನು ಪೂಜಿಸುತ್ತೀರಾ ? ನಿಮ್ಮ ಪಂಗಡದ ದೇವರನ್ನು ಆರಾಧಿ ಸುವುದು ಕಡ್ಡಾಯವಲ್ಲವೇ ?'' ಎಂದು ಸಂಶಯ ವ್ಯಕ್ತಪಡಿಸಿದಾಗ, ''ಯಾರೋ ನಿಮಗೆ ತಪ್ಪು ಕಲ್ಪನೆ ಕೊಟ್ಟಂತೆ ಇದೆ. ಹಲ್ಬೀ ಜನರು ಹಿಂದೂಗಳೇ! ಆದಿವಾಸಿಗಳಲ್ಲಿಯೇ ಅತಿ ಮುಂದುವರಿದವರಾಗಿದ್ದು ನಾವು ಎಂದೋ ಈ ಧರ್ಮವನ್ನು ನಮ್ಮದನ್ನಾಗಿ ಮಾಡಿಕೊಂಡಿದ್ದೇವೆ. ಹಲ್ಬಿ ಭಾಷೆಗೆ ತನ್ನದೇ ಲಿಪಿ ಇದ್ದು , ಬೇರಾವ ಆದಿವಾಸಿ ಭಾಷೆಗಿಂತ ಹೆಚ್ಚಿನ ಸಾಹಿತ್ಯವಿದೆ. ಹಲ್ಬಿ ಹಾಡುಗಳು ಹೆಸರುವಾಸಿ. ಆದಿವಾಸಿ, ಗಿರಿಜನರಿಗೆ ಕೊಡಮಾಡಿದ ಸವಲತ್ತುಗಳನ್ನು ನಮ್ಮಷ್ಟು ಬಳಸಿ ಸರಕಾರಕ್ಕೆ ಸಹಾಯ ಮಾಡಿದಷ್ಟು ಬೇರಾರಿಂದಲೂ ಸಾಧ್ಯವಾಗಲಿಲ್ಲವೆಂದು ಅಭಿಮಾನದಿಂದ ಹೇಳಬಲ್ಲೆ. ಆದರೆ ಸಿಗುವ ಸವಲತ್ತುಗಳನ್ನು ಕಳೆದುಕೊಳ್ಳಬಾರದೆಂಬ ಏಕಮಾತ್ರ ಧ್ಯೇಯ ನಮ್ಮದು. ಜನಗಣತಿಗೆ ಬಂದಾಗ ಈಗಲೂ ಆದಿವಾಸಿಗಳೆಂದೇ ನೋಂದಾಯಿಸಿಕೊಳ್ಳುತ್ತೇವೆ'' ಎಂದು ಕಣ್ಣು ಮಿಟುಕಿಸಿ ಕುರಮ ನುಡಿದ. ಸಂಭಾಷಣೆಯನ್ನು ಕೇಳಿಸಿಕೊಂಡ ಮನೆಯ ಇನ್ನಿತರ ಪುರುಷರು ಅಂಗಳಕ್ಕೆ ಬಂದು ಬೇಲಿಗೆ ಬೆನ್ನೂರು ಬಕದಂತೆ ಒಂಟಿಕಾಲಿನ ಮೇಲೆ ನಿಲ್ಲುವ ಪರಿಪಾಠ ಮೋಜೆನಿಸಿತು.

ಕುರಮ ಮನೆಯನ್ನು ತೋರಿಸಿದ. ದೇವರ ಕೋಣೆಗೂ ಕರೆದೊಯ್ದ. ಹುಲ್ಲಿನ ಛಾವಣಿಯಿದ್ದ ಮನೆಯನ್ನು ಓರಣವಾಗಿ ಇಟ್ಟಿದ್ದರು. ಉರುವಲಿಗೆ ಬರವಿಲ್ಲದ್ದರಿಂದ ಸದಾ ಉರಿಯುವ ಒಲೆ, ದಿನದಲ್ಲಿ ಅಡಿಗೆಗಾದರೆ, ರಾತ್ರಿ ಚಳಿಯಿಂದ ಸಂರಕ್ಷಿಸಿಕೊಳ್ಳಲು ಬೇಕು. ಹೀಗಾಗಿ ಸದಾಕಾಲ ಅದು ಉರಿಯುತ್ತಿರಬೇಕು. ದಿನಬಳಕೆಯ ಹೆಚ್ಚಿನ ಸಾಮಾನುಗಳನ್ನು ಪರ್ಣದ ಬುಟ್ಟಿಗಳಲ್ಲಿ ಶೇಖರಿಸಿ, ಮಾಡಿನಿಂದ ಇಳಿಬಿಟ್ಟಿದ್ದಾರೆ. ಬಿದಿರಿನ ನೇತು ಹಾಕಿದ ಬೆತ್ತದ ತೊಟ್ಟಿಲಿನಲ್ಲಿ ಅವಳಿ-ಜವಳಿ ಮಕ್ಕಳಿಬ್ಬರು ಸುಖನಿದ್ರೆಯಲ್ಲಿದ್ದಾರೆ. ದೇವಗೃಹದಲ್ಲಿ ಬಗೆಬಗೆಯ ದೇವರ ವಿಗ್ರಹಗಳನ್ನು ಶೇಖರಿಸಿದ್ದಾರೆ. ಗಂಧ ಲೇಪಿಸಿ, ದಾಸವಾಳದ ಹೂ ಮುಡಿಸಿ, ರಂಗೋಲಿಯಿಂದ ಅಲಂಕರಿಸಿದ್ದಾರೆ. ಕುರಮನು ದೊಡ್ಡದೊಂದು ಮಣ್ಣಿನ ಗಡಿಗೆಯತ್ತ ಬೊಟ್ಟು ಮಾಡಿ ತೋರಿಸಿ ಅದರ ತುಂಬ ಔಡಲ ಎಣ್ಣೆಯಿದೆ, ಹಿತ್ತಲಲ್ಲೆ ಗಿಡಗಳನ್ನು ಬೆಳೆಸಿ,

ಕಾಳುಗಳಿಂದ ಮನೆಯಲ್ಲಿ ಎಣ್ಣೆ ತಯಾರಿಸಿ ದೀಪಾವಳಿಗೆ ದೀಪ ಉರಿಸುತ್ತೇವೆ ಎಂದು ಹಿತ್ತಲಿಗೆ ಕರೆದೊಯ್ದ. ಅಲ್ಲಿ ಅಮಟೆಕಾಯಿ, ನುಗ್ಗೆಕಾಯಿ, ಬಸಳೆಸೊಪ್ಪು ನೋಡಿ ಸೋಜಿಗವಾಯಿತು. ಕರ್ನಾಟಕ ಕರಾವಳಿಯ ಕೊಂಕಣಿಗರು ಚಂದ್ರಲೋಕಕ್ಕೆ ಹೋದರೂ ಆಸೆಪಡುವ ತರಕಾರಿಗಳಿವು. ಹೊರಗೋಡೆಯ ಗೂಟಕ್ಕೆ ನೇತುಹಾಕಿದ ಮಾಂಡ್ಲಾ ಜಿಲ್ಲೆಯಲ್ಲಿ ನೋಡಿದ ಎಲೆಗಳ ಹ್ಯಾಟನ್ನು ಮುಟ್ಟಿ ನೋಡುವ ಮನಸ್ಸಾಯಿತು. ರಾವಣನ ಹತ್ತೂ ತಲೆಗಳಿಗೆ ಆಶ್ರಯ ಕೊಡಬಲ್ಲ ಬೃಹದಾಕಾರದ ಶಿರಸ್ತ್ರಾಣವದು! ''ಇಂಥ ಹ್ಯಾಟನ್ನು ಒಬ್ಬನೇ ಧರಿಸಿ ಕೆಲಸ ಮಾಡುವುದು ಹೇಗೆ ಸಾಧ್ಯ ?'' ಎಂದು ವಿಚಾರಿಸಿದಾಗ, ನಕ್ಕು ಮಾತನಾಡದೇ ತೆಗೆದು ಕೈಗಿತ್ತ. ಗುಡಿಗಾರರು ಬೆಂಡಿನಿಂದ ತಯಾರಿಸುವ ಬಾಸಿಂಗದಷ್ಟೇ ಹಗುರಾಗಿತ್ತು ಅದು. ಬೆಂಗಳೂರಿನಲ್ಲೋ ಬಿಸಿಲು ಜೋರಾಗಿರುವ ನಗರಗಳಲ್ಲೋ ಇಂಥವನ್ನು ಧರಿಸಿ ಓಡಾಡಿದರೆ ಪ್ರತಿಕ್ರಿಯೆ ಹೇಗೆ ಬರಬಹುದೆಂದು ಯೋಚಿಸಿಯೇ ತಮಾಷೆಯೆನಿಸಿತು.

''ನಗರದ ಸವಲತ್ತುಗಳಿಂದ ದೂರ ಇರುವವರು ನಾವು. ಜೀವನದ ಎಲ್ಲ ಅವಶ್ಯಕತೆಗಳನ್ನು ನಾವೇ ಪೂರೈಸಿಕೊಳ್ಳುವ ಏರ್ಪಾಟು ಮಾಡಿಕೊಳ್ಳಬೇಕಾಗುತ್ತದೆ''ಂದು ಪೀಠಿಕೆ ಹಾಕಿ, ತಮ್ಮ ಅಕ್ಕಿ, ಅವಲಕ್ಕಿಗಳನ್ನು ತಯಾರಿಸುವ ಕಾರ್ಖಾನೆ ತೋರಿಸುತ್ತೇನೆಂದು ಕರೆದೊಯ್ದ. ಚಿಕ್ಕದಾದ ಗುಡಿಸಲು. ತೆರೆದ ಬಾಗಿಲಿನಿಂದ ಬರುವಷ್ಟು ಬೆಳಕಿಲ್ಲ. ಕೊರಡಿನ ಒಂದು ತುದಿಯಿಂದ ಹಾರೆಯನ್ನು ಹಾಯಿಸಿ 'ರಾಟೆ' ಮಾಡಿದ್ದಾರೆ. ಬತ್ತವನ್ನು ಹಿಂದೆ ಮುಂದೆ ಮಾಡಲು ಅಜ್ಜಿ ಕುಳಿತರೆ, ಅದನ್ನು ಕುಟ್ಟುವ ಕೆಲಸ ಹರೆಯದ ಹೊಸ್ತಿಲಲ್ಲಿ ಇದೀಗ ಕಾಲು ಇಡುತ್ತಿರುವ ಮೊಮ್ಮಗಳ ಮೇಲೆ ಬಿದ್ದಿದೆ. ಹರಡಿದ ಕೇಶರಾಶಿಯ ಮೇಲೆ ಅಕ್ಕಿಯ ಹುಡಿ ಸಂಚಯ ವಾಗಿದ್ದರೂ ಮುಖದ ಅಂದ ಕಡಿಮೆಯಾಗಿರಲಿಲ್ಲ. ಆಕರ್ಷಕ ಮುಗ್ಧಮುಖ, ಕೊರಳಲ್ಲಿ ಕರಿದಾರಕ್ಕೆ ಪೋಣಿಸಿದ ಮೊಗಲರ ಬೆಳ್ಳಿ ನಾಣ್ಯದ ಸರ. ಇನ್ನೂ ಫ್ರಾಕ್ ತೊಡುವ ವಯಸ್ಸು ಮೀರದಿದ್ದರೂ ಕಿರಿದಾದ ಸೀರೆ (ಕಿರಿಗೆ) ಯನ್ನೇ ಉಟ್ಟಿದ್ದಳು. ನಾಚಿಕೆ-ಸೌಜನ್ಯಗಳಿಂದ ಕೆಲ ನಿಮಿಷ ತಲೆ ತಗ್ಗಿಸಿ ಯಾಂತ್ರಿಕವಾಗಿ ಕಾಲಿನಿಂದ ರಾಟೆಯನ್ನು ಮೇಲಕ್ಕೆ ಎತ್ತುತ್ತಲೇ ಇದ್ದರೂ ಕ್ಯಾಮರಾದ ಬಗೆಗಿನ ಆಕರ್ಷಣೆಯನ್ನು ಅದುಮಲಾರದೆ ಕಣ್ಣೆತ್ತಿ ನೋಡಿದಳು. ಕ್ಯಾಮರಾ ಕ್ಲಿಕ್ ಎಂದಿತು.

ಛಾಯಾಗ್ರಹಣಕ್ಕೆ ನಾಂದಿಯಾಯಿತು. ಕುರಮನ ಭಾವಚಿತ್ರ ತೆಗೆದೆ. ತುಳಸಿಗೆ ಪೂಜೆ ಮಾಡುವಾಗ ಚಿತ್ರ ತೆಗೆಯಲು ವಿನಂತಿಸಿಕೊಂಡ. ಮಡಿಯುಟ್ಟು, ಗಂಧ, ಅರಿಸಿನ, ಕುಂಕುಮ ಹಚ್ಚಿ, ಆರತಿ ಮಾಡುವಾಗ ಪತ್ನಿ ಅಭಿಮಾನದಿಂದ ನೋಡುತ್ತ ನಿಂತಿದ್ದಳು. ಕ್ಯಾಮರಾ ಕಣ್ಣು ಅವಳತ್ತ ತಿರುಗಿದಾಗ, ಗಾಬರಿಗೊಂಡು ಒಳಗೆ ಓಡಿದಳು. ಎಲೆಗಳ ಹ್ಯಾಟು ಹಾಕಿಸಿ ಕುರಮನ ತಮ್ಮನ ಛಾಯಾಚಿತ್ರ ತೆಗೆದು, ಮಗನಿಗೆ ನಿಲ್ಲೆಂದು ಸೂಚಿಸಿದಾಗ, ಬಟ್ಟೆ ಬದಲಿಸಿ ಬರುತ್ತೇನೆಂದು ಒಳಗೆ ಓಡಿದ. ಇದ್ದ ಬಟ್ಟೆ ಚೆನ್ನಾಗಿದೆ ಎಂದು ಹೇಳಿದರೂ ಕೇಳಬೇಕಲ್ಲವೇ ? ಅವನು ಧರಿಸಿ ಬಂದ ಬಟ್ಟೆ ನೋಡಿ ಘೋರ ನಿರಾಶೆಯಾಯಿತು. ನಗರಗಳಲ್ಲಿ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ನೀಲಿ ಸಮವಸ್ತ್ರವನ್ನು ಅಭಿಮಾನದಿಂದ ತೊಟ್ಟಿದ್ದ! ''ಅವನು ಮ್ಯಾಟ್ರಿಕ್ ಪಾಸುಮಾಡಿದ್ದಾನೆ. ಬಿಲ್ಲು ಬಾಣ ಹಿಡಿದು ಕಾಡು-ಮೇಡು ಗಳಲ್ಲಿ ಅಲೆಯುವುದಾಗಲಿ, ಬೇಟೆಯಾಡುವುದಾಗಲಿ, ಹೊಲದಲ್ಲಿ ದುಡಿಯುವುದಾಗಲಿ ಶೋಭಿಸದ ಮಾತಲ್ಲವೇ ಬಾಬೂಜಿ ? ಹಾಗೆಂದು ಸುಮ್ಮನೆ ಮನೆಯಲ್ಲಿ ಕೂಡ್ರಲಾಗುವುದೇ ? ಆದ್ದರಿಂದ ಸ್ಥಾನೀಯ ನೇತಾರರಿಗೆ, ರಾಜಕಾರಣಿಗಳಿಗೆ ಹೇಳಿ, ವಶೀಲಿ ಹಚ್ಚಿ, ಮೇಲಧಿಕಾರಿ ಗಳಿಗೆ ಕೈಬೆಚ್ಚಗೆ ಮಾಡಿ ಅವನಿಗೆ 'ಅರಣ್ಯ ರಕ್ಷಕ'ನ ಜಾಗ ಕೊಡಿಸಬೇಕಾದರೆ ಕುರಿ ಕೋಣ ಬಿದ್ದುಹೋದವು. ಇಂದಿನ ದಿನಗಳಲ್ಲಿ ಇಮಾರತಿ ಕಟ್ಟಿಗೆಗೆ ಒಳ್ಳೆ ಬೆಲೆ ಇದ್ದುದರಿಂದ

ಸರಕಾರಮೊಂದಿಗೆ ಸಾಮುಕಾರರೂ ಸ್ಪರ್ಧೆಗೆ ಇಳಿದಿದ್ದಾರೆ. ಇವರಿಗೆಲ್ಲ ರಾಜಕಾರಣಿಗಳ ರಕ್ಷಾಕವಚವಿದ್ದುದರಿಂದ, ಯಾರಿಂದಲೂ ಏನೂ ಮಾಡಲಾಗುವುದಿಲ್ಲ... ಬಂದ ಲಾಭದ ಏಂದಂಶ ನಮ್ಮ ಮಗನ ಜೇಬು ತುಂಬುವದರಿಂದ ಗೆಲುವಾಗಿದ್ದಾನೆ... ಈ ಸಮವಸ್ತ್ರ ಅವನ ಯಶಸ್ಸಿನ ಚಿಹ್ನೆ, ಆದ್ದರಿಂದ ಅವುಗಳ ಬಗ್ಗೆ ಬಲೇ ಅಭಿಮಾನ''.

ಸಮವಸ್ತ್ರಗಳ ಬಗ್ಗೆ ಆಕ್ಷೇಪವೆತ್ತಿದಾಗ ಕುರಮನೆಂದ. ''ಸರಕಾರ ನಮ್ಮ ವಾಸಸ್ಥಳದ ಸುತ್ತಮುತ್ತಲ ಕಾಡೆಲ್ಲ ನಿಮಗೆ ಕೊಡುವುದಾಗಿ ಘೋಷಿಸಿದೆ. ಅದರ ಲಾಭ ಪಡೆದುಕೊಳ್ಳ ಲಾಗುವದಿಲ್ಲವೇ ?'' ಎಂದು ವಿಚಾರಿಸಿದಾಗ, ''ಸರಕಾರ, ಹೇಳಿದಂತೆ ಮಾಡಿದ್ದರೆ ನಮ್ಮೆಲ್ಲರ ಜೀವನ ಬೇರೆಯೇ ಆಗಿರುತ್ತಿತ್ತು. ಸರಕಾರದ ಮಾತು ನಂಬಿದರೆ ನೀರು ಕುಡಿದು ಹವೆ ತಿಂದು ಇರಬೇಕಾದೀತು. ಅಂತೆಯೇ ಊರ ಹೊರಗಿನ ಕಾಡಿನಲ್ಲಿಯ ಐದು ಎಕರೆಯಲ್ಲಿ ಮರ ಕಡಿದು ಮಗನ ಸಹಾಯದಿಂದ ಮಾರಾಟ ಮಾಡಿ, ಆ ನೆಲವನ್ನು ಸಾಗುವಳಿ ಮಾಡಿದ್ದೇನೆ. ಈ ಜಮೀನನ್ನು ನನ್ನ ಹೆಸರಿಗೆ ಸ್ಥಳಾಂತರಿಸಲು ಮುಖಂಡರಿಗೆ, ಅಧಿಕಾರಿಗಳಿಗೆ ದುಂಬಾಲು ಬಿದ್ದು ಹಲವು ಕಾಲವಾಯಿತು. ಈವರೆಗೂ ಕಿವಿಯ ಮೇಲೆ ಹಾಕಿಕೊಂಡಿಲ್ಲ. ಕಾಸಿನ ಪುಡಿಕೆ ಬಿಚ್ಚದೆ ಯಾವ ಕೆಲಸವೂ ಆಗುವುದಿಲ್ಲ'' ಎಂದು ಯಶಸ್ಸಿನ ಗುಟ್ಟು ತನಗೂ ತಿಳಿದಿದೆ ಎಂದು ಅರುಹಿದ. ಇಷ್ಟೊಂದು ಭಯ ಭಕ್ತಿಯಿಂದ ದೇವರನ್ನು ಪೂಜಿಸಿದಾಗ ಈತನ ಧ್ಯೇಯವನ್ನು ದೇವರು ಅರ್ಥಮಾಡಿಕೊಳ್ಳದೇ ಇರುತ್ತಾನೆಯೇ ?

ಮಗನಿಗೆ ಮಡದಿಯೊಂದಿಗೆ ಭಾವಚಿತ್ರ ತೆಗೆದುಕೊಳ್ಳುವ ಮನಸ್ಸಾಯಿತು. ಅವನಿಗೆ ಅದಾಗಲೇ ವಿವಾಹವಾಗಿದ್ದು ಬೆತ್ತದ ತೊಟ್ಟಿಲಲ್ಲಿದ್ದ ಅವಳಿ ಮಕ್ಕಳು ಅವನವೇ ಎಂದು ತಿಳಿದು ಆಶ್ಚರ್ಯವಾಯಿತು. ಮಗುವಿಗೆ ಹಾಲು ಕುಡಿಸುತ್ತಿರುವಾಗ ಪತಿ ಕರೆದುದರಿಂದ ಹಾಗೇ ಬಂದು ಪಕ್ಕಕ್ಕೆ ನಿಂತಳು. ಹಳ್ಳಿಯಲ್ಲಿ ಓರ್ವನಾದ ಸುಶಿಕ್ಷಿತ 'ಅರಣ್ಯಾಧಿಕಾರಿ' (ಸಾಹಬ್)ಯ ಹೆಂಡತಿ ಕುಪ್ಪಸವಿಲ್ಲದೇ ಕ್ಯಾಮರಾ ಎದುರಿಗೆ ನಿಲ್ಲುವುದು, ಪತಿಗೆ ಅವಮಾನವಲ್ಲವೇ ? ಅವಳನ್ನು ಬೈದು ಒಳಗೆ ಓಡಿಸಿದ. ವಿವಾಹ ಸಮಯದಲ್ಲಿ ಹೊಲಿಸಿದ, ಆದರೆ ಈಗ ಮೈಗೇರಲು ಪ್ರತಿಭಟಿಸುತ್ತಿದ್ದ ರವಕೆಯನ್ನು ಏರಿಸಿ, ಗುಂಡಿ ಹಾಕಲಿಕ್ಕಾಗದೇ ಮುದುಡಿದ ಸೀರೆಯಿಂದ ಸೆರಗನ್ನು ಮುಚ್ಚಿ ಛಾಯಾಚಿತ್ರಕ್ಕೆ ನಿಂತಾಗ, ಮೊದಲಿನ ಸಹಜ ಉಡುಗೆಯೇ ಚೆನ್ನಾಗಿತ್ತು ಎಂದು ಹೇಳುವಂತಿರಲಿಲ್ಲ. ಫೋಟೊಗಾಗಿ ಎಲ್ಲ ತರದ 'ಮಂಗ್ಯಾತನ' ಬರುವದರಿಂದ ಕಲಾತ್ಮಕವಾಗಿ ತೆಗೆಯಬೇಕಾದ ಭಾವಚಿತ್ರಗಳನ್ನು ಅವರು ಅರಿಯುವ ಮೊದಲೇ ಕ್ಲಿಕ್ಕಿಸಲು ಪ್ರಜ್ಞೆ ಬೇಕು. ಮನೆಯ ಸೊಸೆ ಧಾರೆಸೀರೆಯಲ್ಲಿ ಪತಿಯೊಂದಿಗೆ ಹೇಗೆ ಶೋಭಿಸುತ್ತಾಳೆಂದು ನೋಡಲು ಈರ್ವರು ಮುದುಕಿಯರು ಹೊರಗೆ ಬಂದಿದ್ದರು. ಅವರು ಕೂದಲಿನಲ್ಲಿ ಸಿಗಿಸಿಕೊಂಡ ಬಾಚಣಿಕೆಗಳು ಕುತೂಹಲಕಾರಿಯಾಗಿದ್ದುದರಿಂದ, ಅವರದೂ ಛಾಯಾಚಿತ್ರಣ ವಾಯ್ತು. ಅಜ್ಜಿ ಹೊರಗೆ ಬಂದದ್ದರಿಂದ ಮೊಮ್ಮಕ್ಕಳಿಗೆ ಭತ್ತ ಕುಟ್ಟುವದರಿಂದ ಬಿಡುವಾಗಿರ ಬೇಕು. ಬಾಗಿಲಿನಿಂದ ಹಣಿಕಿ ಹೊರಗೆ ವೀಕ್ಷಿಸುತ್ತಿದ್ದಳು. ಅವಳನ್ನು ಹೊರತರಲು ಇನ್ನಿಬ್ಬರು ಮೂವರು ಹುಡುಗಿಯರನ್ನು ಹೊಂದಿಸಬೇಕಾಯಿತು. ಅದಾದ ನಂತರ ಅವಳ ಕೊರಳಲ್ಲಿನ ನಾಣ್ಯದ ಸರದ ಫೋಟೊ ತೆಗೆಯುವ ನೆಪದಿಂದ ಅವಳ ಎರಡು ಸಹಜ ಭಂಗಿಯ ಭಾವಚಿತ್ರಗಳನ್ನು ತೆಗೆಯಲು ಸಾಧ್ಯವಾದುದಕ್ಕೆ ಅತೀವ ಸಂತೋಷವಾಯಿತು. ತಮ್ಮ ವಿಳಾಸವನ್ನು ಸರಿಯಾಗಿ ಬರೆದುಕೊಳ್ಳುವಂತೆ ಮಾಡಿ ಬೀಳ್ಕೊಡುತ್ತಿದ್ದಂತೆ ಭಾವಚಿತ್ರ ಕಳಿಸಲು ಮರೆಯದಿರಲು ಕುರಮನು ವಿನಂತಿಸಿಕೊಂಡ. ಕಳಿಸಿದ ಚಿತ್ರಗಳು ಅವರಿಗೆ ಸಿಕ್ಕವೊ ಇಲ್ಲವೊ ಎಂಬುದನ್ನು ಇಂದಿಗೂ ತಿಳಿದುಕೊಳ್ಳಲಾಗಿಲ್ಲ!

# 4. ಅಬುಜ ಮಾರ



ಆಳವಾದ ಕುಣಿಯಲ್ಲಿ ಕಾಲು ಸಿಕ್ಕಿಹಾಕಿ ಮುಗ್ಗರಿಸಿದಾಗ, ಅದನ್ನು ಹೊರಗೆ ಎಳೆದುಕೊಳ್ಳಲು ಸಹಾಯ ಹಸ್ತ ನೀಡುತ್ತ, "ಈ ರಾವಣನ ವಂಶಜರ ಕಾಡಿನಲ್ಲಿ ಜಾಗ್ರತೆಯಿಂದಿರಬೇಕು ಎಂದು ಎಚ್ಚರಿಸಲಿಲ್ಲವೇ ಬಾಬು ?" ಎಂದು ಮಾರ್ಗದರ್ಶಕ ಸುಖದೇವನು ತನ್ನ ಜವಾಬ್ದಾರಿಯಿಂದ ನುಣುಚಿಕೊಂಡ. ತಮ್ಮವರಲ್ಲದವರನ್ನು ಬರಮಾಡಿಕೊಳ್ಳುವ ಮನಸ್ಸು ಇಲ್ಲದ್ದರಿಂದ ಆದಿವಾಸಿಗಳು ಬಿಲಗಳನ್ನು ತೋಡಿರುತ್ತಾರೆ. ಬಲೆಗಳನ್ನು ಹಾಕಿರುತ್ತಾರೆ. ನೀರಿಗೆ ವಿಷ ಸೇರಿಸುತ್ತಾರೆ, ಎಂದು ವಿವರಿಸಿದ. ಮೂಲ ಬುಡಕಟ್ಟಿನವರಾದ ಮಾರಿಯ ಮತ್ತು ಮುರಿಯರ ಬಗ್ಗೆ ಸ್ಥಳೀಯರಿಗೆ ಅದೆಷ್ಟು ಅಸಡ್ಡೆ! ಎನಿಸಿತು. ನಗರದವನಾಗಿಯೂ ಪ್ರತಿಯೊಂದು ಹೆಜ್ಜೆಯನ್ನು ಜಾಗರೂಕತೆಯಿಂದ ಇಟ್ಟು ನಡೆದೇ ಹೋಗುವವನನ್ನು ನೋಡಿ

ಅವನಿಗೆ ಮೋಜೆನಿಸಿತು. ''ಬಾಬು, ನೀವು ವಿದ್ಯಾ ಬುದ್ಧಿಯುಳ್ಳವರು. ದೂರದಿಂದ ಬಂದಿದ್ದೀರಿ. ಡಾಕಬಂಗ್ಲೆಯಲ್ಲಿಯೇ ಮಾಝಿಯನ್ನೂ ಇತರರನ್ನೂ ಕರೆಸಬಹುದಿತ್ತಲ್ಲ? ಇಲ್ಲವೇ ಪೊಲೀಸ ಮತ್ತು ಅರಣ್ಯ ಖಾತೆಯವರನ್ನು ವಿನಂತಿಸಿಕೊಂಡರೆ, ಅವರೇ ಜೀಪ್, ಡ್ರೈವರ್, ಪೆಟ್ರೋಲ್ ಕೊಡಮಾಡುತ್ತಿರಲಿಲ್ಲವೇ ?'' ಎಂದು ಈ ಬಾಬುವಿನ ವರ್ಚಸ್ಸು, ಸರಕಾರದಲ್ಲಿ ಸ್ಥಾನ-ಮಾನಗಳನ್ನು ಅಳೆಯಲು ಯತ್ನಿಸಿದ. ''ಅವರಿವರನ್ನು ಕೇಳುವುದಕ್ಕಿಂತ ನಮ್ಮ ಊರಿನಿಂದಲೇ ಜೀಪಿನಲ್ಲಿ ಬರಬಹುದಾಗಿತ್ತು. ಆದರೆ ಇಲ್ಲಿಯವರನ್ನು ಅವರವರ ದೈನಂದಿನ ಪರಿಸರದಲ್ಲಿಯೇ ಕಾಣಬೇಕೆಂಬ ಹಂಬಲದಿಂದ ನಿನ್ನ ಮಾರ್ಗದರ್ಶನ ಕೋರಿದ್ದು'' ಎಂದಾಗ ಹುರುಪಾದ. ''ನನ್ನ ಜೀವನದಲ್ಲಿಯೇ ನಿಮ್ಮಂಥ ಇನ್ನೊಬ್ಬ ಸಾಹಸಿ ವ್ಯಕ್ತಿಯನ್ನು ನೋಡಿಲ್ಲ'' ಎಂದು ಅಟ್ಟಕ್ಕೇರಿಸಿದ.

ಕಾಲುಹಾದಿಯಲ್ಲಿ ಅಲ್ಲಲ್ಲಿ ಅಂಚಿನಲ್ಲಿದ್ದ ಕೊರಡಿನ ಸ್ತಂಭಗಳ ಬಗ್ಗೆ ವಿಚಾರಿಸಿದಾಗ, ''ಮಾಡಿಯ (ಮಾರಿಯ)ರು, ಸತ್ತವರನ್ನು ತಮ್ಮ ಹಳ್ಳಿಯ ಹೊರಗೆ ತಂದು ಹೂಳುತ್ತಾರೆ. ಅವರಿಗೆ ಒಂದಿಷ್ಟೂ ಬುದ್ಧಿ ಇಲ್ಲ ಬಾಬು. ಮೃತನ ಬಟ್ಟೆ ಬರೆ, ಪಾತ್ರೆ ಸರಂಜಾಮು, ಟಾಂಕಿ (ಕಿರು ಕೊಡಲಿ), ಇದ್ದುಬಿದ್ದ ಕಾಸು ಕೂಡ ಅವನೊಂದಿಗೆ ಮಣ್ಣುಮಾಡಿಬಿಡುತ್ತಾರೆ. ಅವನ್ನು ಉಳಿಸಿಕೊಂಡರೆ, ಭೂತ-ಪಿಶಾಚಿಗಳ ಕಾಟ ತಪ್ಪಿದ್ದಲ್ಲ ಎಂದು ನಂಬುತ್ತಾರೆ'' ಎಂದು ವಿವರಿಸಿದ. ಮೃತ್ಯು ಸ್ಮಾರಕಗಳನ್ನು ನಿಲ್ಲಿಸುವ ವಿಧಾನದ ಬಗ್ಗೆ ವಿಚಾರಿಸಿದಾಗ ''ಅವರದು ಖಚಿತವಾಗಿ ಹೇಳಲು ಬರುವುದಿಲ್ಲ. ಹೂಳಿದ ಸ್ಥಳದಲ್ಲಿ ಒಂದೆರಡು ಬಂಡೆಗಲ್ಲು ಇಟ್ಟು, ನರಿ, ತೋಳಗಳಿಂದ ಸಂರಕ್ಷಿಸಲು ಭದ್ರವಾಗಿ ಬಿದುರಿನ ಬೇಲಿ ನಿಲ್ಲಿಸಿಬಿಡಬಹುದು. ಇಲ್ಲವೇ ಗಟ್ಟಿ ಮುಟ್ಟಾದ ದಿಮ್ಮಿ ನೆಟ್ಟು, ಅದರ ಮೇಲೆ ಇಳಿಕೆಯ ಕ್ರಮದಲ್ಲಿ ಐದಾರು ಮಡಕೆಗಳನ್ನು ಜೋಡಿಸಬಹುದು. ಹಳ್ಳಿಯ ಮುಖ್ಯಸ್ಥನ ನೆನಪಿಗಾಗಿ, ಸಾಲ್ ಇಲ್ಲವೇ ಸಾಗವಾನಿ ಮರದಲ್ಲಿ ಆತನ ಜೀವನದ ವಿವಿಧ ದೃಶ್ಯಗಳನ್ನು ಕೊರೆಯಿಸುವ ಪರಿಪಾಠವೂ ಕೆಲವೆಡೆಯಲ್ಲಿ ಇದೆ'' ಎಂದು ವಿವರಿಸಿದ. ''ಅವುಗಳನ್ನೆಲ್ಲ ಅಭ್ಯಸಿಸಬೇಕಲ್ಲವೇ ?'' ಎಂದಾಗ ಅಚ್ಚರಿಯಿಂದ, ''ಅವು ಕಾಡಿನಲ್ಲಿ ಎಲ್ಲೆಲ್ಲೋ ಹರಡಿಕೊಂಡಿರುತ್ತವೆ. ಅಲ್ಲದೆ ಯಾವುದೇ ಸಂರಕ್ಷಣೆ ಇಲ್ಲದ್ದರಿಂದ ಇರುವೆ, ವರಲೆ ಮತ್ತು ಪೋಲಿಗಳ ಬಾಧೆಯಿಂದ ಹಾಳಾಗಿಹೋಗಿರುತ್ತವೆ'' ಎಂದು ನುಣುಚಿಕೊಂಡ. ಕೃಷಿಗಾಗಿ ಮಾರಿಯರು ಕೊಡಲಿಯನ್ನು ಬಳಸುತ್ತಾರೆಂದು ಆತ ಹೇಳಿದಾಗ, ಅದು ಹೇಗೆ ಸಾಧ್ಯವೆಂದು ಸೋಜಿಗ ವ್ಯಕ್ತಪಡಿಸಿದಾಗ, ''ಇವರೆಲ್ಲ ಅಲೆಮಾರಿ ಜನ, ನೀರು ಇರುವಲ್ಲಿ ಬೀಡು ಬಿಟ್ಟು ಸುತ್ತಮುತ್ತ ಕಾಡೆಲ್ಲ ಸವರಿ ಬೆಂಕಿ ಹಾಕುತ್ತಾರೆ. ಗಾಳಿಯಲ್ಲಿ ಬೀಜ ತೂರಿ, ನೈಸರ್ಗಿಕವಾಗಿ ಬೆಳೆದ ಬೆಳೆಯನ್ನು ಹಂಚಿಕೊಳ್ಳುತ್ತಾರೆ. ಜನಸಂಖ್ಯೆ ತೀರ ಕಡಿಮೆ ಇರುವುದರಿಂದ ಬಂದ ಕಾಳು ಕಡಿಯಿಂದ ಉದರ ಪೋಷಣೆ ನಡೆಯುತ್ತದೆ. ನಾಲ್ಕು-ಐದು ವರ್ಷಗಳಲ್ಲಿ ಹೊಲಗಳು ಸತ್ವಹೀನವಾಗುವದರಿಂದ ಬೇರೆ ತಾಣಕ್ಕೆ ಗುಳೆ ಹೊರಡುತ್ತಾರೆ. ಆದ್ದರಿಂದ ಹಳ್ಳಿಗಳೂ ಒಂದೇ ಸ್ಥಳದಲ್ಲಿರದೆ ಚಲಿಸುತ್ತಲೇ ಇರುತ್ತವೆ. ನಾವೀಗ ಹೋಗಲಿರುವ ಧಾನೋರ ಹಳ್ಳಿ ಬೇರೆ ಎಲ್ಲಿಂದಲೋ ಇಲ್ಲಿ ಬಂದಿದೆ. ನೀವು ಐದು ವರ್ಷಗಳ ನಂತರ ತಿರುಗಿ ಇಲ್ಲಿ ಬಂದರೆ ಅದು ಈ ಸ್ಥಾನದಲ್ಲಿಯೇ ಇರುತ್ತದೆಂದು ಹೇಳಲಾಗದು'' ಎಂದು ವಿವರಿಸಿದ. ''ಈ ಪ್ರವೃತ್ತಿಯಿಂದ ಕಾಡು, ಕೃಷಿ ಎರಡೂ ಶಾಶ್ವತವಾಗಿ ನಾಶವಾಗುವುದಿಲ್ಲವೇ ?'' ಎಂದು ಆತಂಕ ವ್ಯಕ್ತಪಡಿಸಿದಾಗ, ''ಅದೇ ಬಂದಿರುವುದು, ಸ್ಥಾಯಿಯಾಗಿ ನಿಲ್ಲಲು ಸರಕಾರ, ಸಕಲ ಸೌಲಭ್ಯ ಗಳನ್ನು ಕಲ್ಪಿಸಿದರೂ ಇವರು ಕಳ್ಳತನದಿಂದ ಕೊಡಲಿ-ಕೃಷಿ ಮುಂದುವರೆಸಿದ್ದಾರೆ'' ವಿವರಣೆ ಕೊಟ್ಟ.

ಧಾನೋರಾ ಪಟೇಲನ ಮನೆಗೆ ಬಂದು ಸುಖದೇವನು ಪರಿಚಯ ಮಾಡಿಸಿದಾಗ,

ಪಟೇಲನ ಮಗನು ಕಂಬಳಿ ಹಾಸಿ, ಕಾಡಿಗೆ ಹೋದ ಪಿತನಿಗೆ ಸಮಾಚಾರ ಮುಟ್ಟಿಸುತ್ತೇನೆ ಎಂದು ಹೇಳಿ ಮಾಯವಾದ. ಬೈಠಕ್‌ಸಾರ್ (ಬೈಠಕಖಾನೆ)ಯಲ್ಲಿ ಕುಳಿತು ಹತ್ತು-ಹದಿನೈದು ನಿಮಿಷ ಕಳೆದರೂ ಯಾರೂ ಮಾತನಾಡಿಸುವ ಸಾಹಸ ತೋರಲೇ ಇಲ್ಲ. ಮೂಲೆಯೊಂದರಲ್ಲಿ ಗೃಹಿಣಿ, ಕಾಡಿನಿಂದ ತಂದ ಸಾಲ್‌ಪರ್ಣಗಳನ್ನು ಬಿದಿರು ಕಡ್ಡಿಗಳಿಂದ ಜೋಡಿಸಿ, ದೊನ್ನೆ (ದ್ರೋಣ)ಗಳನ್ನು ರಚಿಸುತ್ತ ಕುಳಿತಿದ್ದಳು. ಹೊರಕಟ್ಟೆಯ ಮೇಲೆ ಕುಳಿತ ಯುವಕನೋರ್ವನು ನಾಗಬೆತ್ತಕ್ಕೆ ಚರ್ಮದಾರ ಸುತ್ತಿ ಬಾಣ ಮಾಡುವದರಲ್ಲಿ ಮೈಮರೆತಿದ್ದ. ಅಂಗಳದಲ್ಲಿ ಕುಳಿತ ಇಬ್ಬರು ಪರಸ್ಪರ ಹಜಾಮತಿಯಲ್ಲಿ ತೊಡಗಿದ್ದರು. ನಾಪಿತರಿಲ್ಲದ ಹಳ್ಳಿಯಲ್ಲಿ ಸ್ವಾವಲಂಬಿ ಮುರಿಯರಲ್ಲಿ ಇದು ಒಳ್ಳೆಯ ಏರ್ಪಾಡು ಅನಿಸಿತು. ಕೊತವಾಲನು ಕಾಡಿನಿಂದ ಕೊರಡುಗಳ ಹೊರೆ ಹೊತ್ತು ಹಿಂದಿರುಗಿದ ಕಟ್ಟಿಗೆಯ ಒಜ್ಜೆಯನ್ನು ತಾಳೆ ಮರದಡಿಯಲ್ಲಿ ಜೋಡಿಸಿ, ರುಮಾಲಿನಿಂದ ಬೆವರು ಒರೆಸಿಕೊಳ್ಳುತ್ತ, ಹೊಸಬನನ್ನು ಸಂಶಯದ ಕಣ್ಣಿನಿಂದ ಪರೀಕ್ಷಿಸುತ್ತ, 'ತನ್ನಿಂದೇನಾಗಬೇಕು' ಎಂದು ಪ್ರಶ್ನಿಸುತ್ತ, ದೂರದಲ್ಲಿ ಕಿರುಮಣೆಯೊಂದರ ಮೇಲೆ ಕುಂಡೆ ಯೂರದೆ ಕುಳಿತ. ಅವರೆಲ್ಲರ ಜೀವನದ ರೀತಿ, ಸುಖ-ದುಃಖಗಳನ್ನು ಅರಿಯಲು ಬಂದಿದ್ದೇನೆ ಎಂದರೆ ಅವನು ನಂಬಲೇ ಇಲ್ಲ. ಸದಾಕಾಲವೂ ಅವರನ್ನು ಶೋಷಣೆ ಮಾಡಲೆಂದೇ ಅಧಿಕಾರಿಗಳು ಬರುವದು ವಾಡಿಕೆಯಾದ್ದರಿಂದ ಈ ಅಪನಂಬಿಕೆ ಸಹಜವಾದದ್ದು. ಆದರೆ ಯಾರೂ ಮಾತನಾಡಲು ಇಚ್ಛಿಸದಿದ್ದುದರಿಂದ ಅಲ್ಲಿ ಸ್ಮಶಾನ ಶಾಂತಿ ಅಸಹನೀಯವಾಯಿತು.

ಮೆಲ್ಲಗೆ ಕೈಚೀಲದಿಂದ ಕ್ಯಾಮರಾ ಹೊರಗೆಳೆದಾಗ ಸಕಲರಲ್ಲಿಯೂ ವಿದ್ಯುತ್ ಸಂಚಾರ ವಾದಂತಾಯಿತು. ಕ್ವಚಿತ್ತಾಗಿ ಕಾಣಸಿಗುವ ಕ್ಯಾಮರಾದ ದರ್ಶನ ಪಡೆಯಲು ಪಿಳಿಪಿಳಿ ಕಣ್ಣು ಬಿಡಲಾರಂಭಿಸಿದರು. ಕೊತವಾಲನಿಂದಲೇ ಪ್ರಾರಂಭಿಸೋಣವೆಂದು ಛಾಯಾಗ್ರಹಣದ ಸಿದ್ಧತೆ ನಡೆಸುತ್ತಿರುವಾಗ, ''ಬಾಬು ಈ ಬಿದ್ದು ಹೋಗುವ ಮುದಿಯನ ಚಿತ್ರ ಹಿಡಿದು ಏನು ಮಾಡುವಿರಿ ? ಈ ಯುವಕರದ್ದನ್ನು ತೆಗೆದರೆ ಅವರ ಪತ್ನಿಯರಾದರೂ ಆನಂದಿಸಿಯಾರು...'' ಎಂದು ಬೊಚ್ಚುಬಾಯಿಂದ ಹೇಳುತ್ತಿರುವಾಗಲೇ ಕ್ಯಾಮರಾ ಕ್ಲಿಕ್ ಎಂದಿತು. ಫ್ಲಾಶ್‌ನ ಬೆಳಕಿಗೆ ಮುದಿಯನು ಹೌಹಾರಿದ್ದರಿಂದ ಸುತ್ತ ಕುಳಿತವರೆಲ್ಲ ಬಿದ್ದು ಬಿದ್ದು ನಕ್ಕರು. ''ಗುಡುಗು ಇಲ್ಲದ ಮಿಂಚನ್ನು ಈ ಪೆಟ್ಟಿಗೆ (ಕ್ಯಾಮರಾ)ದಲ್ಲಿ ಹೇಗೆ ಹಿಡಿದಿಡುತ್ತೀರಿ ?'' ಎಂದು ಕುತೂಹಲದಿಂದ ಹರೆಯದವನೊಬ್ಬ ವಿಚಾರಿಸಿದ. ಬ್ಯಾಟರಿ ಸೆಲ್ ಹೊರಗೆಳೆದು ತೋರಿಸಿ, ಅವು ಹೇಗೆ ಕೆಲಸ ಮಾಡುತ್ತವೆ ಎಂದು ಅವರಿಗೆ ಅರಿವಾಗುವಂತೆ ವಿವರಿಸಿದೆ. ''ನೀವೆಲ್ಲ ಬೀಡಿ ಸೇದುವಾಗ ಉಕ್ಕಿಗೆ ಬೆಣಚುಗಲ್ಲು ಹೊಡೆದು ಕಿಡಿ ಹಾರಿಸುವುದಿಲ್ಲವೇ ? ಅದೇ ಸಿದ್ಧಾಂತ ಇಲ್ಲಿಯೂ ಬಳಸಲಾಗಿದೆ'' ಎಂದಾಗ ಅರ್ಥವಾದವರಂತೆ ಗೋಣುಹಾಕಿದರು. ಆ ಯುವಕನಿಂದಲೇ ಫ್ಲಾಶ್‌ನ ಗುಂಡಿ ಅದುಮಿಸಿದಾಗ ಹೊರಹೊಮ್ಮಿದ ಮಿಂಚಿನಿಂದ ಎಲ್ಲರೂ ಸಂತೋಷ ಗೊಂಡರು. ''ಬಾಬುಗಳ ಸಹಾಯಕನಾಗಿ ಅವನ ಊರಿಗೆ ಹೋಗುತ್ತಿ ಏನಯ್ಯಾ ?'' ಎಂದು ಕೊತವಾಲನು ಕೇಳಿದಾಗ, ತಾನೇನೋ ಅಪೂರ್ವವಾದದ್ದನ್ನು ಮಾಡಿದ್ದೇನೆ ಎಂಬ ಅಭಿಮಾನದಿಂದ ಎದೆ ಉಬ್ಬಿಸಿಕೊಂಡ. ಅವರೆಲ್ಲರ ಛಾಯಾಚಿತ್ರ ತೆಗೆಯುವುದರಲ್ಲಿ ನಾವೆಲ್ಲ ಆತ್ಮೀಯರಾಗಿಬಿಟ್ಟಿದ್ದೆವು. ಅವರಂತೆ 'ತುಂಬಾ'* ದಿಂದ ನೀರು ಕುಡಿಯುವ ಯತ್ನದಲ್ಲಿ ಬಟ್ಟೆಗಳನ್ನೆಲ್ಲ ನೀರು ಚೆಲ್ಲಿ ಒದ್ದೆ ಮಾಡಿಕೊಂಡಾಗ ಹೆಂಗಳೆಯರು ತುಂಡು ಸೀರೆಯ ಸೆರಗಿನಿಂದ ಮುಖ ಮುಚ್ಚಿಕೊಂಡು ಮುಸಿಮುಸಿ ನಕ್ಕರು.

---

* ಪೊಳ್ಳು ಮಾಡಿ ಒಣಗಿಸಿದ ಸೋರೆಕಾಯಿ

ದೊನ್ನೆಯಿಂದ ಹಾಲಿಲ್ಲದ ಬೆಲ್ಲದ ಚಹಾ ಸವಿಯುತ್ತಾ, ''ಸರಕಾರ ಸಕಲ ಸವಲತ್ತುಗಳನ್ನು ಆದಿವಾಸಿಗಳಿಗೆ ಕೊಡಮಾಡಿರುವಾಗ, ನೀವೆಲ್ಲ ಕಾಡಿನ ಮರೆಯಲ್ಲಿ ಮಾಯವಾಗಿ ಕಷ್ಟಮಯ ಜೀವನ ನಡೆಸುವದರಲ್ಲಿ ಪುರುಷಾರ್ಥವೇನು ?'' ಎಂದು ಆತಂಕದಿಂದ ವಿಚಾರಿಸಿದಾಗ, ''ಬಾಬು ನಾವು ಕಾಡಿನ ಮಕ್ಕಳು. ಕಾಡುಕೋಣ, ಕಾಡುಹಂದಿ, ಕರಡಿಗಳಿಗೆ ಕಾಡು ತ್ಯಜಿಸಿ ನಾಡಿನಲ್ಲಿ ಸುಖವಾಗಿರಲು ಸಾಧ್ಯವೇ ? ಅನಾದಿಕಾಲದಿಂದಲೂ ನಾವೆಲ್ಲ ಈ ಗುಡ್ಡ ಬೆಟ್ಟ, ನದಿ ಕೊಳ್ಳ, ಪಶು ಪಕ್ಷಿಯೊಂದಿಗೆ ಒಂದಾಗಿ ಬಾಳಿದ್ದೇವೆ. ಮೀನಿಗೆ ನೀರು ಬಿಟ್ಟು ಬದುಕುಂಟೆ ? ಜಗದಲಪುರದಲ್ಲಿ ಅರಮನೆಯಲ್ಲಿ ಇರುವಂತೆ ಮಾಡುತ್ತೇನೆಂದರೂ ನಾವು ಮಾತ್ರ ಈ ಕಾಡಿನಿಂದ ಹೊರಬರಲು ಸಿದ್ಧರಿಲ್ಲ. ನನ್ನ ಈ ಕಿರಿಯ ಮಗ ಹುಟ್ಟಿದಾಗ ನಮ್ಮವರೆಲ್ಲ ಛೋಟೆ ಡೊಂಗರ, ನಾರಾಯಣಪುರಗಳ ಅಸುಪಾಸು (ಅಕ್ಕಪಕ್ಕ)ದಲ್ಲಿ ಬೀಡುಬಿಟ್ಟಿದ್ದೆವು. ಆದರೆ ಅಲ್ಲಿ ರಸ್ತೆಗಳಾದವು. ಕಾರು, ಜೀಪುಗಳು ಓಡಾಡಲಾರಂಭಿಸಿದವು. ದಿನಂಪ್ರತಿ ಬೇರೆ ಬೇರೆ ಅಧಿಕಾರಿಗಳ ಕಿರುಕುಳ ಪ್ರಾರಂಭವಾಯಿತು. ನಿರುಪಾಯವಾಗಿ ಈ ತಾಣಕ್ಕೆ ಬಂದೆವು. ನೀವು ಸರಕಾರವೆಂದು ಮೊದಲು ಭ್ರಮಿಸಿದ್ದೆ'' ಎಂದು ತನ್ನ ಬೆಪ್ಪುತನ ನೆನೆಸಿಕೊಂಡು ನಕ್ಕ. ''ಕಾನೂನಿನ ಪ್ರಕಾರ ವರ್ಷಕ್ಕೊಮ್ಮೆ ಕರ ಕೇಳಿದರೆ ಹೇಗಾದರೂ ಕೊಡಬಹುದು. ಅದುಬಿಟ್ಟು ಪ್ರತಿವಾರವೂ ಬಂದು ಕಾಳು-ಕಡಿ, ಕುಕ್ಕುಟ, ಹುಲಿ-ಹುಲ್ಲೆಗಳ ಚರ್ಮ, ಕೋಡು, ಕೋರೆಹಲ್ಲು, ಜೇನುತುಪ್ಪ, ಮದ್ಯ ಮೊದಲಾದವನ್ನು ಜಬರ್ದಸ್ತಿಯಿಂದ ಕೇಳಿದರೆ ನಾವು ಎಲ್ಲಿಂದ ಕೊಡುವದು ? ನಾವು ಕಡುಬಡವರು ಬಾಬು...'' ಎನ್ನುತ್ತಿದ್ದಂತೆ ಅವನ ಕಣ್ಣುಗಳು ತೇವವಾಗಿದ್ದವು.

''ಈಗ ನೀವು ಆಯ್ದುಕೊಂಡ ತಾಣದಲ್ಲಿಯೇ ಕೃಷಿ ಮಾಡಿಕೊಂಡು ಆದಾಯ ಹೆಚ್ಚಿಸಿ ಕೊಳ್ಳಬಹುದಲ್ಲ ?'' ಎಂದಾಗ ಬಾಬೂಜಿ ಅದಕ್ಕಾಗಿ ದನಕರುಗಳು ಅತ್ಯವಶ್ಯ. ಕಾಡೆತ್ತುಗಳು ಪ್ರೇಮಿಯನ್ನು ಸೇರುವದಕ್ಕಾಗಿ ಆಗಾಗ ನಮ್ಮ ದೊಡ್ಡಿಗಳ ಮೇಲೆ ಹಲ್ಲೆ ನಡೆಸುತ್ತವೆ. ಅವುಗಳ ಸಹವಾಸದಲ್ಲಿ ನಮ್ಮ ಹಸುಗಳು ಹಾಲು ಹಿಂಡಲು ನಿರಾಕರಿಸಿಬಿಡುತ್ತವೆ... ದನದ ಮಾಂಸಕ್ಕೆ ಆಸೆಪಟ್ಟು ಹೆಬ್ಬುಲಿಗಳು ಆಗಾಗ ಆಕ್ರಮಣ ನಡೆಸುತ್ತವೆ... ಕೆಲವೊಮ್ಮೆ ನರಭಕ್ಷಕ ಹುಲಿಗಳ ಕಾಟ ಹೆಚ್ಚಾದಾಗ ನಾವೇ ವಾಸಸ್ಥಾನ ಬದಲಿಸಿಕೊಳ್ಳಬೇಕಾಗುತ್ತದೆ. ಕೃಷಿಗಾಗಿ ಎತ್ತುಗಳನ್ನು ಸಾಕಿದರಂತೂ ನಮ್ಮ ಸರ್ವನಾಶವಾಗುವದು ಖಂಡಿತ'' ಎಂದು ತನ್ನ ತೀರ್ಪು ಕೊಟ್ಟೇಬಿಟ್ಟ. ''ಸ್ಥಾಯಿ ಕೃಷಿ ಬಿಟ್ಟರೆ ಬಿಡಿ. ಸರಕಾರ ಕೊಡಮಾಡುವ ಶಿಕ್ಷಣ, ಔಷಧೋಪಚಾರ ಗಳನ್ನಾದರೂ ಸ್ವೀಕರಿಸಬಹುದಲ್ಲ ?'' ಎಂದು ಕೆಣಕಿದೆ.

''ಮಗನಿಗೆ ತಂದೆ, ಮಗಳಿಗೆ ತಾಯಿಗಿಂತ ದೊಡ್ಡ ಗುರುಗಳು ಯಾರಾದರೂ ಇದ್ದಾರೆಯೇ ? ಬೇಟೆಯಾಡುವದು, ಮೀನು ಹಿಡಿಯುವದು, ಕಟ್ಟಿಗೆ ತರುವದು, ಗುಡಿಸಲು ಕಟ್ಟುವದು, ಪೆಂಡಾ (ಕಾಡಿನ) ಕೃಷಿ ಮಾಡುವದು, ಮಹುವಾ ಮದ್ಯ ಮಾಡುವದು, ವಾದ್ಯ ನುಡಿಸುವದು, ನರ್ತಿಸುವದು ಎಲ್ಲವನ್ನೂ ನಮ್ಮ ಎಳೆಯರಿಗೆ ಚಾಚೂ ತಪ್ಪದೆ ಕಲಿಸುತ್ತೇವೆ. ಇನ್ನಿತರರಂತೆ ನಾವೂ ಬೆನ್ನು ಮುರಿ ದುಡಿಯುತ್ತೇವೆ. ಅಡಿಗೆ ಮಾಡಿ ಉಣ್ಣುತ್ತೇವೆ. ಸುಖವಾಗಿ ನಿದ್ರಿಸುತ್ತೇವೆ. ಮದುವೆಯಾಗಿ ಮಕ್ಕಳನ್ನು ಪಡೆಯುತ್ತೇವೆ. ಶಾಲಾ ಶಿಕ್ಷಣವಿಲ್ಲದಿದ್ದರೂ ಜೀವನದಲ್ಲಿ ಯಾವ ಕೊರತೆಯನ್ನೂ ಮಾಡಿಕೊಂಡಿಲ್ಲ. ಕಾಡಿನ ಮಕ್ಕಳು ಗಟ್ಟಿಮುಟ್ಟಾಗಿದ್ದರೆ ಮಾತ್ರ ನಮಗೆ ಬದುಕು. ಸಣ್ಣ-ಪುಟ್ಟ ಆರೋಗ್ಯದ ಸಮಸ್ಯೆಗಳಿದ್ದರೆ ನಾವೇ ಗಿಡಮೂಲಿಕೆ, ತೊಗಟೆ, ಬೇರು ಪರ್ಣಗಳನ್ನು ಬಳಸಿ ಔಷಧೋಪಚಾರ ಮಾಡಿಕೊಳ್ಳುತ್ತೇವೆ. ಹೆಚ್ಚಿನ ಕಾಯಿಲೆಯಾದರೆ ಅದು ಭೂತ-ಪ್ರೇತಗಳ ಬಾಧೆಯಿಂದಾಗಿ. ಅದಕ್ಕೆ ಪರಿಹಾರ ಸೂಚಿಸಲು

ನಮ್ಮ ಮಂತ್ರವಾದಿ ಇದ್ದೇ ಇರುವ. ಮಕ್ಕಳ ಮನೋರಂಜನೆಗೆ ಘೋಟುಲಗಳು ಇದ್ದೇ ಇವೆ.''
ಕಾಡಿನ ಸಂತೃಪ್ತ ಜೀವನದ ವಿವರ ನೀಡಿ ಕೊತವಾಲನು ನೆಮ್ಮದಿಯ ನಗು ನಕ್ಕ.

''ಕೊತವಾಲನೇ ಕಾಡಿನ ಸರ್ವಾಧಿಕಾರಿಯಂತೆ ನಿಜವೇ?'' ಎಂದು ಛೇಡಿಸಿದಾಗ, ''ಹೌದೂSS ! ಕೊತವಾಲನೇ ಕಾಡಿನಿಂದ ಹೊರೆ ಹೊರೆ ಕಟ್ಟಿಗೆ ಹೊತ್ತು ತಂದದ್ದನ್ನು ನೀವೇ ನೋಡಿದ್ದಿರಲ್ಲ? ನಮ್ಮ ಸಮಾಜದಲ್ಲಿ ಮೇಲು-ಕೀಳೆಂಬ ಭಾವನೆಯಿಲ್ಲ. ಎಲ್ಲರೂ ಬೆನ್ನು ಮುರಿ ದುಡಿದು ಬಂದ ಫಲವನ್ನು ಸಮನಾಗಿ ಹಂಚಿಕೊಳ್ಳುತ್ತೇವೆ. ಕಾಡು ಕಡಿಯುವದು, ಬೇಟೆಯಾಡುವದು, ಹಬ್ಬ ಆಚರಿಸುವದು, ಹಳ್ಳಿಗಳನ್ನು ಸ್ಥಳಾಂತರಿಸಿ ಗುಳೆಹೋಗುವದು ಎಲ್ಲವೂ ಸಾಮೂಹಿಕವಾಗಿಯೇ ಆಚರಿಸುತ್ತೇವೆ. ಇವೆಲ್ಲವುಗಳ ಮೇಲುವಿಚಾರಣೆಯನ್ನು ಹಿರಿಯ ಅನುಭವಿ ಕೊತವಾಲನಿಗೆ ಒಪ್ಪಿಸಿರುತ್ತಾರೆ. ನಮ್ಮಲ್ಲಿ ಗುಂಪು-ಕಲಹ, ವೈಮನಸ್ಸು ಇಲ್ಲವೇ ಇಲ್ಲ. ಬಿಸಿರಕ್ತದ ತರುಣರಲ್ಲಿ ಒಮ್ಮೊಮ್ಮೆ ಚಕಮಕಿಗಳು ಆಗುವುದುಂಟು. ಆಗ ಹಳ್ಳಿಯ ಹಿರಿಯರು ವಿಚಾರಣೆ ನಡೆಸಿಕೊಟ್ಟ ತೀರ್ಮಾನವನ್ನು ಎಲ್ಲರೂ ಅಂಗೀಕರಿಸುತ್ತಾರೆ. ಸತ್ಯವನ್ನು ಸುಳ್ಳಾಗಿಯೂ, ಸುಳ್ಳನ್ನು ಸತ್ಯವೆಂದೂ ಸಾಧಿಸಲು ಸಾಧ್ಯಮಾಡುವ ಕೋರ್ಟು ಕಚೇರಿಗಳಲ್ಲಿ ತಮಗೆ ವಿಶ್ವಾಸವಿಲ್ಲ'' ಎಂದು ಕೆಚ್ಚೆದೆಯಿಂದ ಸಾರಿದ ಕೊತವಾಲನು ಒಂದೇ ಸವನೆ ಮಾತನಾಡಿದ್ದರಿಂದ ಕೆಮ್ಮಲಾರಂಭಿಸಿದ. ಪಕ್ಕದಲ್ಲಿದ್ದ ಎಳೆಯನು, ಎಲೆಯೊಂದನ್ನು ಸುರುಳಿ ಮಾಡಿ, ಅದಕ್ಕೆ ತಂಬಾಕು ಸೇರಿಸಿ ಉರಿ ಹಚ್ಚಿ ತಾನು ಒಂದು ದಮ್ಮು ಎಳೆದು, ಹಿರಿಯನ ಕೈಗೆ ಕೊಟ್ಟ. ಅವನು ಬೇಕಷ್ಟು ಸೇದಿ ಇನ್ನೊಬ್ಬನಿಗೆ ಕೊಟ್ಟ. ಒಂದೇ ಕಾಡಿನ ಚುಟ್ಟವನ್ನು ಎಲ್ಲರೂ ಬಳಸುವ ಪರಿಪಾಠ ಮೋಜೆನಿಸಿತು.

''ನಿಮ್ಮ ಸಮಾಜದಲ್ಲಿ ಆತ್ಮಹತ್ಯೆ, ಖೂನಿಯಂಥ ಅಪರಾಧಗಳು ನಡೆಯುವದಿಲ್ಲವಂತೆ! ನಿಜವೇ ?''

''ಇಲ್ಲವೇ ಇಲ್ಲವೆಂದು ಯಾವ ಬಾಯಿಂದ ಹೇಳಲಿ? ಸ್ತ್ರೀ ಪುರುಷರು ಅನೈತಿಕವಾಗಿ ನಡೆದುಕೊಂಡಾಗ ಹೀಗಾಗುವುದುಂಟು. ನಾವು ಎಷ್ಟೇ ಯತ್ನಿಸಿದರೂ ಸುದ್ದಿ, ಪೊಲೀಸರಿಗೆ ತಿಳಿಯದೇ ಇರುವದಿಲ್ಲ. ಅವರು ತಾವು ಬರುವ ತನಕ ಶವವನ್ನು ಹಾಗೆ ಇಡಬೇಕೆಂದು ಸಂದೇಶ ಕಳಿಸುತ್ತಾರೆ. ಆಮೆಯ ವೇಗದಲ್ಲಿ ಅವರು ಬಂದಾಗ ಇಡೀ ಹಳ್ಳಿ, ಹೆಣ ಕೊಳೆತ ದುರ್ನಾತದಿಂದ ತುಂಬಿರುತ್ತದೆ.

ಇದರಿಂದ ಗ್ರಾಮದೇವತೆ ಮುನಿದು ಎಲ್ಲ ತರದ ಪಿಡುಗುಗಳು ಕಾಣಿಸಿಕೊಳ್ಳುತ್ತವೆ. ಮಂತ್ರವಾದಿಯ ಆದೇಶದಂತೆ ದೇವಿಯನ್ನು ಸಮಾಧಾನಗೊಳಿಸಲು ಕುರಿ, ಕೋಣ, ಹಂದಿ, ಮದ್ಯಗಳಿಗಾಗಿ ನಮ್ಮ ಸರ್ವಸ್ವವನ್ನು ಒತ್ತೆಯಿಡಬೇಕು. ಸಾಲಕ್ಕಾಗಿ ಸಾಹುಕಾರನ ಬಳಿ ಹೋದಾಕ್ಷಣ ನಮ್ಮ ಸುಲಿಗೆ ಪ್ರಾರಂಭವಾಗುತ್ತದೆ. ಬರೇ ನೂರು ರೂಪಾಯಿಯ ಸಾಲ ಕೂಡ ಹತ್ತು ವರ್ಷಗಳಲ್ಲಿ ಬಡ್ಡಿ ಸಮೇತ ಸಂದಾಯ ಮಾಡಲಾಗುವದಿಲ್ಲ. ಕೆಲವೊಮ್ಮೆ ಅಜ್ಜಮಾಡಿದ ಸಾಲವನ್ನು ಮೊಮ್ಮಗನಿಂದಲೂ ತೀರಿಸಲಾಗುವದಿಲ್ಲ. ಅಲ್ಲದೆ ಬನಿಯಾ ಸಾಹುಕಾರ, ಪೊಲೀಸರಿಂದ ಬೇರೆ ಅವಮಾನ ಮಾಡಿಸುತ್ತೇನೆಂದು ಬೆದರಿಸುತ್ತಲೇ ಇರುತ್ತಾನೆ. ಹುಲಿ-ಕರಡಿಗಳಿಗೆ ಅಂಜದ ನಾವು ಸಾಲವೆಂದರೆ ಬೆಚ್ಚಿ ಬೀಳುತ್ತೇವೆ'' ಎಂದು ನಿಟ್ಟುಸಿರು ಹಾಕಿದ.

ಚರ್ಚೆ ಅತಿ ಗಹನವಾದ್ದರಿಂದ ಸೇರಿದ್ದವರೆಲ್ಲರೂ ಜೋಲುಮುಖ ಹಾಕಿ ಕುಳಿತಿದ್ದರು. ಅವರಲ್ಲಿ ಚೈತನ್ಯ ಹುಟ್ಟಿಸಲೆಂದು, ''ನೋಡಿ ಕೊತವಾಲರೇ! ಪಟ್ಟಣದ ನನ್ನ ಪತ್ನಿ ಮುದುಕಿಯಾಗಿಬಿಟ್ಟಿದ್ದಾಳೆ! ನಿಂನಿಮ್ಮ ಪತ್ನಿಯರೆಲ್ಲ ಪ್ರೇಮಿಗಳಾಗಿ ಇರುತ್ತಾರೆಂದು ಕೇಳಿದ್ದೇನೆ. ಆದ್ದರಿಂದ ನಿಮ್ಮಲ್ಲಿಯ ಹದಿವಯಸ್ಸಿನ ಹುಡುಗಿಯೊಬ್ಬಳನ್ನು ವರಿಸಲು ಅಪ್ಪಣೆ

ಕೊಡುವಿರಾ ?'' ಎಂದು ವಿಚಾರಿಸಿದಾಗ ಎಲ್ಲರೂ ಜೋರಾಗಿ ನಕ್ಕರು. ಅನತಿ ದೂರದಲ್ಲಿ ಕೊರ್ಸಾ (ಗಂಜಿ ಮಾಡಲು ಬಳಸುವ ಧಾನ್ಯ) ಕಾಳನ್ನು ಆರಿಸುತ್ತ ಕುಳಿತ ಕೊತವಾಲನ ಚಿಕ್ಕ ವಯಸ್ಸಿನ ಮೊಮ್ಮಗಳು, ತನ್ನತ್ತ ಆಗಂತುಕನ ಮನಸ್ಸು ಹರಿದಿರಬೇಕೆಂದು ಕಾಲಿಗೆ ಬುದ್ಧಿ ಹೇಳಿದಳು. ಅವಳನ್ನು ಹಿಂಬಾಲಿಸಿದ ತರುಣನೋರ್ವ ಅವಳನ್ನು ಹಿಡಿದು ತಂದು ''ಇವಳನ್ನೇ ಕರೆದೊಯ್ಯಿರಿ ಬಾಬು. ಪಟ್ಟಣವೆಂದರೆ ಈಕೆಗೆ ಪಂಚಪ್ರಾಣ'' ಎಂದು ಸಾರಿದ. ಅವಳು ನಾಚುತ್ತ ನಿಂತಿದ್ದಳು. ''ನೋಡಮ್ಮ , ನಮ್ಮ ಊರಲ್ಲಿ ಕಾರು, ರೇಲು ಇದೆ, ಸಿನೇಮಾ, ಪೇಟೆ ಇದೆ. ನೀರು ಹರಿಯುವ ನಲ್ಲಿ, ತಿರುಗುವ ಪಂಖ...'' ಎಂದಾಗ ನಡುವೆಯೇ ''ಘೋಟುಲ್ ಇದೆಯೇ ?'' ಎಂದು ಕೇಳಿದಾಗ ದಿಗಿಲಾಯಿತು. ''ಘೋಟುಲ್ ಇಲ್ಲದ ಊರು ನನಗೆ ಬೇಡ'' ಎಂದು ಆಕೆ ದೃಢವಾಗಿ ಉತ್ತರಿಸಿದಾಗ, ಹುಡುಗಿಯ ದಿಟ್ಟತನವನ್ನು ಮೆಚ್ಚಲೇಬೇಕಾಯಿತು.

ಸುರಾಪಾನಕ್ಕೆಂದು ಕೊತವಾಲನಿಗೆ ಕಾಸುಕೊಟ್ಟು ಹೊರಟು ನಿಂತಾಗ, ಆಗಂತುಕ ಸೂಚಿಸಿದ ಮದುವೆ ಬರೀ ಹಾಸ್ಯವೆಂದು ಕಿಶೋರಿಗೆ ನೋವಾಗಿರಬೇಕು ಉಳಿದ ಹೆಂಗಳೆಯರೊಡನೆ ಕಣ್ಮರೆಯಾಗುವ ತನಕ ನೋಡುತ್ತ ನಿಂತಿದ್ದಳು. ಆ ವೃದ್ಧನ ವಾದಸರಣಿಯಿಂದ ತೃಪ್ತಿಯ ಜೀವನವೆಂದರೆ ಏನು ? ಎಂಬ ಪ್ರಶ್ನೆ ತಲೆ ಎತ್ತಿ ನಿಂತಿತು. ಪಟ್ಟಣದವರು ಬಳಸುವ ಯಾವ ಆಧುನಿಕ ಸಲಕರಣೆಗಳೂ ಈ ಆದಿವಾಸಿಗಳಿಗೆ ಲಭ್ಯವಿಲ್ಲ. ಆದರೆ ಅವರದೇ ಆದ ನೆಮ್ಮದಿಯ ಜೀವನ ನಡೆಸಲು ನಿಸರ್ಗ ಏನೇನೂ ಕೊರತೆ ಮಾಡಿಲ್ಲ. ಅಮೆರಿಕನ್ನರಂತೆ ಧನ ಸಂಪಾದನೆಯೇ ಸುಖದ ಹೆದ್ದಾರಿ ಎಂಬ ಸೂತ್ರವನ್ನು ನೆಚ್ಚಿಕೊಳ್ಳುವುದಕ್ಕಿಂತ ಹಣದ ಅವಶ್ಯಕತೆಯೇ ಇಲ್ಲದ ಈ ಆದಿವಾಸಿಗಳ ಆದರ್ಶವನ್ನು ನಾವೇಕೆ ಬಳಸಬಾರದು ? ಈ ಮಾರ್ಗವನ್ನು ನಮ್ಮದಾಗಿಸಿದರೆ ಅಸಂಖ್ಯಾತ ಪಟ್ಟಣಿಗರ, ಸಿರಿವಂತರ ಅಸಂತೊಷಕ್ಕೆ ಆಸ್ಪದವೇ ಇರುತ್ತಿರಲಿಲ್ಲ ಎಂದು ಅನಿಸದೇ ಇರಲಿಲ್ಲ.

# 5. ಕಾಣದ ಕ್ಯಾಮರಾ



ಚಿತ್ರಕಾರನು ತನ್ನ ಕಲಾಕೃತಿ, ಛಾಯಾಚಿತ್ರದೊಂದಿಗೆ ಸ್ಪರ್ಧಿಸಬೇಕೆಂದು ಸಕಲ ಯತ್ನ ಮಾಡುವಂತೆ ಛಾಯಾಚಿತ್ರಕಾರನು ಕ್ಯಾಮರಾ ಸೆರೆ ಹಿಡಿದ ಚಿತ್ರವು ಸುಂದರ ಕಲಾಕೃತಿಯಾಗಬೇಕೆಂದು ಕನಸು ಕಾಣುತ್ತಿರುತ್ತಾನೆ. ಇದನ್ನು ಸಾಧಿಸುವದಕ್ಕಾಗಿ ಲಭ್ಯವಿರುವ ಸಾಧನಗಳು ಅಸಂಖ್ಯಾತ. ಆದರೆ ಅವುಗಳಿಗಿಂತ ಕ್ಯಾಮರಾ ಹೊತ್ತವನ ಕಲಾಭಿರುಚಿ, ಪರಿಶ್ರಮ, ಅನುಭವ ಮತ್ತು ಶಿಸ್ತುಗಳು ಮಾತ್ರ ಅತ್ಯುತ್ತಮ ಛಾಯಾಚಿತ್ರಗಳನ್ನು ಕೊಡಬಲ್ಲವು. ಉತ್ತಮ ಛಾಯಾಚಿತ್ರಕ್ಕೆ ಯಾವದೇ ಮುನ್ನುಡಿ, ಹಿನ್ನುಡಿ ಬೇಕಾಗಿಯೇ ಇಲ್ಲ. ಗ್ರಂಥವು ತಾನು ಹೊತ್ತ ಅಕ್ಷರಗಳ ಜೋಡಣೆಯಿಂದ ಓದುಗನೊಂದಿಗೆ ಸಂಪರ್ಕ ಬೆಳೆಸಿದರೆ, ಛಾಯಾಚಿತ್ರವು ನೆಳಲು, ಬೆಳಕುಗಳ ಚಮತ್ಕಾರವನ್ನು ಒಳಗೊಂಡು ವೀಕ್ಷಕನ ಅಂತರಾಳವನ್ನು ತಟ್ಟುತ್ತದೆ. ಆದರೆ ಹಣದ ಹಪಾಪಿಯ ಸ್ಟುಡಿಯೋದವರು ಜನರ ಅಭಿರುಚಿಯನ್ನು ಕೆಡಿಸುವದರಲ್ಲಿ ಯಶಸ್ವಿಯಾಗಿದ್ದಾರೆ. ಕಪ್ಪು ಕಾಗೆಯಂಥವಳನ್ನು ಗೌರವರ್ಣದ ಹಂಸೆಯನ್ನಾಗಿ ಪರಿವರ್ತಿಸಿದರೆ, ಅದು ಉತ್ತಮ ಛಾಯಾಚಿತ್ರವೆಂದು ಸಕಲರಿಂದ ತಲೆದೂಗಿಸಿಕೊಳ್ಳುತ್ತದೆ. ವ್ಯಕ್ತಿಗೂ ಚಿತ್ರಕ್ಕೂ ಸಾಮ್ಯವಿರಬೇಕೆಂದು ಯಾವ ಕಡ್ಡಾಯವೂ ಇಲ್ಲ! ಮಾರವಾಡಿ ಮನೋಭಾವದ ಛಾಯಾಗ್ರಹಣ-ಸಾಮಗ್ರಿಯ ಉತ್ಪಾದಕರು ಅತ್ಯಂತ ಸುಲಭವಾಗಿ ನಡೆಸುವ ಕ್ಯಾಮರಾ ತಯಾರಿಸಿ,

ಜನಸಾಮಾನ್ಯರು. ಉತ್ತಮ ಛಾಯಾಚಿತ್ರಗಳೆಂದರೇನು ಎಂಬುದನ್ನು ಮರೆಯುವಂತೆ ಮಾಡುವದರಲ್ಲಿ ಯಶಸ್ವಿಯಾಗಿದ್ದಾರೆ. ಅವರದು ಎಲ್ಲ ರೋಗಗಳಿಗೂ ಒಂದೇ ರಾಮಬಾಣದ ಔಷಧಿ. ಸ್ವಚಾಲಿತ ಕ್ಯಾಮರಾ ಯಂತ್ರಗಳಿಂದ ವರ್ಣಚಿತ್ರಗಳು ಹಪ್ಪಳ ಲಟ್ಟಿಸಿದಂತೆ ಹೊರಬರಲಾರಂಭಿಸಿದ ನಂತರವಂತೂ ಸಕಲರೂ ಛಾಯಾಚಿತ್ರಕಾರರಾಗಿ ಬಿಟ್ಟಿದ್ದಾರೆ!

ಅರಳುವ ಹೂ, ಹಾರುವ ಹಕ್ಕಿ, ನಮ್ಮವಳಲ್ಲದ ಹೆಣ್ಣಿನ ಛಾಯಾಗ್ರಹಣಕ್ಕಾಗಿ ಎಷ್ಟೊಂದು ಪರಿಶ್ರಮ ಪಡಬೇಕೆಂಬುದು ಯತ್ನಿಸಿದಾಗಲೇ ತಿಳಿಯಬೇಕು. ಬಸ್ತರದ ಆದಿವಾಸಿಗಳು ಪರರನ್ನು ಕಂಡರೇ ಕಾಲಿಗೆ ಬುದ್ಧಿ ಹೇಳುವವರು. ಕೈಯಲ್ಲಿದ್ದ ಕ್ಯಾಮರಾ ಕಂಡರೆ, ಕೋವಿ ಎಂದು ಭೀತರಾಗಿ ಕ್ಷಣಾರ್ಧದಲ್ಲಿ ಅದೃಶ್ಯರಾಗಿಬಿಡುವದು ಸಾಮಾನ್ಯ. ಅವರ ಮುಖ್ಯಸ್ಥ (ಮಾಝಿ) ಇಲ್ಲವೇ ಪೊಲೀಸ ಅಧಿಕಾರಿಯ ವರ್ಚಸ್ಸು ಬಳಸಿ ಅಸ್ವಾಭಾವಿಕ ಛಾಯಾಚಿತ್ರ ಸೆರೆ ಹಿಡಿಯುವುದರಲ್ಲಿ ವಿಶ್ವಾಸವಿಡದ್ದರಿಂದ ಅರಿಯದಂತೆ ಕ್ಲಿಕ್ಕಿಸುವದನ್ನು ಕರಗತ ಮಾಡಿಕೊಳ್ಳಲೇ ಬೇಕಾಯಿತು. ವಿವಿಧ ಪತ್ರಿಕೆಗಳ ಛಾಯಾಚಿತ್ರಕಾರರು ಓದುಗರ ಆಸಕ್ತಿ ಕೆರಳಿಸುವದಕ್ಕಾಗಿಯೇ ಆದಿವಾಸಿಗಳನ್ನು ವಿಶೇಷ ಭಂಗಿಗಳಲ್ಲಿ ನಿಲ್ಲಿಸಿ ಚಿತ್ರೀಕರಿಸುತ್ತಿರುತ್ತಾರೆ. ಅವರು ಎಂದೂ ಧರಿಸದ ಉಡುಪಿನಲ್ಲಿ ಸಲ್ಲದ ಭಂಗಿಗಳಲ್ಲಿ ನಿಲ್ಲಿಸಿ, ಕೂಡ್ರಿಸಿ ಕ್ಲಿಕ್ಕಿಸುವರು. ಹೆಂಗಳೆಯರು ಸಹಕರಿಸಿದರಂತೂ ಇವರ ಕಲ್ಪನಾಲೋಕ ಗರಿಬಿಚ್ಚಿ ನರ್ತಿಸುತ್ತದೆ. ಮಿತವಾದ ಬಟ್ಟೆ ಇರಬೇಕೆಂದು ಸರ್ವರೂ ಅಪೇಕ್ಷಿಸಿದರೂ ಕೆಲವರಾದರೂ ಅರೆನಗ್ನ, ಕಾಮಪ್ರಚೋದಕ ಭಂಗಿಗಳಿಗಾಗಿ ಪಟ್ಟುಹಿಡಿಯುತ್ತಾರೆ. ನಗ್ನತೆ ಮರೆಸಲು ಪರ್ಣಗಳನ್ನಷ್ಟೇ ಬಳಸಲು ನಿರ್ದೇಶನ ನೀಡಿದವರೂ ಇಲ್ಲದಿಲ್ಲ. ಆ ಬಡಪಾಯಿಗಳು ಏನು ಮಾಡಿಯಾರು? ಜೊತೆಯಲ್ಲಿ ಅಧಿಕಾರಿಗಳನ್ನು, ಆದಿವಾಸಿಗಳು ಅಂಜಿ ನಡೆಯುವವರನ್ನು, ಕರೆತರುವುದರಿಂದ ಕ್ಯಾಮರಾ ಧಾರಿಗಳದ್ದೇ ಮೇಲುಗೈಯಾಗುತ್ತದೆ. ಹೊರಗಿನವರಾರೂ ಬಾರದ ಕಾಡಿನೊಳಗಿನ ಜನಕ್ಕೆ ನಗ್ನತೆ, ಅರೆನಗ್ನತೆಗಳು ಅವಮಾನಕಾರಿಯೇನಲ್ಲ. ಆದರೆ ಅಂಥವರ ಸ್ವಾಭಾವಿಕ ಛಾಯಾಗ್ರಹಣ ಮಾಡುವದಕ್ಕೂ, ಬೆದರಿಸಿ ವಸ್ತ್ರಾಪಹರಣ ಮಾಡಿಸಿ ಮಾಡೆಲ್‌ನಂತೆ ಬಳಸುವದಕ್ಕೂ ಆಕಾಶ-ಪಾತಾಳಗಳ ಅಂತರವಿದೆ.

ಆದಿವಾಸಿಗಳನ್ನು ಹುಡುಕಿಕೊಂಡು ಪ್ರವಾಸಿಗರು ಬಸ್ತರಕ್ಕೆ ಬರುತ್ತಲೇ ಇರುವದರಿಂದ ನಾರಾಯಣಪುರದ ಹೊರವಲಯದಲ್ಲಿ ಘಡಾಬಂಗಾಲ ಹಳ್ಳಿಯಲ್ಲಿ ವ್ಯಾಪಾರಿ ಆದಿವಾಸಿ ಗಳನ್ನು ಸ್ಥಾಪಿಸಲಾಗಿದೆ. ಉದಕಮಂಡಲದ ಬೆಟ್ಟದ ಮೇಲೆ ತೋಡರು ಪ್ರವಾಸಿಗಳಿಂದ ದೋಚಿಕೊಂಡ ಹಣದ ಮೇಲೆಯೇ ಜೀವನ ನಡೆಸುವಂತೆ ಈ ಮೂಲ ಬುಡಕಟ್ಟಿನವರು ತಮ್ಮ ಮೂಲವನ್ನೇ ಮರೆತು ವಿಕೃತವಾದ ಆದಿವಾಸಿ ಪೋಷಾಕು ಧರಿಸಿ ಛಾಯಾಚಿತ್ರಕಾರರಿಗೆ ವಿವಿಧ ಭಂಗಿಗಳನ್ನು ಪೂರೈಸಿ ತಮ್ಮ ಉದರ ನಿರ್ವಹಣೆ ಮಾಡಿಕೊಳ್ಳುತ್ತಿದ್ದಾರೆ.

ಸಕಲ ಆದಿವಾಸಿಗಳ ಪಂಗಡಗಳಿಗೂ ಸಂತೆ, ಜಾತ್ರೆ, ನೃತ್ಯಕೂಟ, ದಸರಾಗಳೆಂದರೆ ಪಂಚಪ್ರಾಣ. ದೂರದೂರದ ಹಳ್ಳಿಗಳಿಂದ ಕಾಡು-ಮೇಡು ದಾಟಿ ಬರುತ್ತಾರೆ. ಅಂಥ ಸ್ಥಳಗಳಲ್ಲಿ ಸುಲಭವಾಗಿ ಅವರ ಛಾಯಾಗ್ರಹಣ ಮಾಡಬಹುದಾದರೂ ಅಲ್ಲಿ ಬರುವ ಪಟ್ಟಣಿಗರಿಂದ ಸಂರಕ್ಷಿಸಿಕೊಳ್ಳಲು ಹೆಚ್ಚಿನ ಬಟ್ಟೆಗಳಿಂದ ಮೈ ಮುಚ್ಚಿಕೊಳ್ಳುವದರಿಂದ ನೈಜ ಛಾಯಾಚಿತ್ರಕ್ಕೆಳಸುವವನಿಗೆ ಅವು ತ್ಯಾಜ್ಯ. ಪಶು-ಪಕ್ಷಿಗಳ ಛಾಯಾಚಿತ್ರಕಾರನು ಅವುಗಳ ವಾಸಸ್ಥಾನ, ಚಲನವಲನ, ಮರಿಗಳ ಲಾಲನೆ-ಪಾಲನೆ, ಪ್ರೇಮಿಗಳು ಕೂಡುವ ಸ್ಥಳಗಳನ್ನು ಅಭ್ಯಸಿಸುವಂತೆ, ದಟ್ಟ ಕಾಡುಗಳಲ್ಲಿ ವಾಸಿಸುವ ಈ ಆದಿವಾಸಿಗಳ ಜೀವನ ಕ್ರಮವನ್ನು ಅರಿತುಕೊಂಡ ನಂತರವೇ ಅವರನ್ನು ಚಿತ್ರಿಸುವ ಸಾಹಸಕ್ಕೆ ಮುಂದಾಗಬೇಕಾಯಿತು.

ದೂರದರ್ಶಕ ಜೋಡಣೆಯ ಕ್ಯಾಮರಾ ಉತ್ತಮವೆನಿಸಿದರೂ ಅದಕ್ಕೆ ತ್ರಿಪಾದಿ ಸ್ಟ್ಯಾಂಡ್ ಅತ್ಯವಶ್ಯವಿದ್ದುದರಿಂದ ಅದನ್ನು ಬಳಸುವಂತೆಯೇ ಇರಲಿಲ್ಲ. 'ಎಕ್‌ಝಿಕ್ಟಾ' ಕ್ಯಾಮರಾಕ್ಕೆ ಸೊಂಟದ ಎತ್ತರದಿಂದಲೇ ವ್ಯಕ್ತಿಗಳನ್ನು ಚಿತ್ರಿಸುವ ಏರ್ಪಾಟು ಇದ್ದುದರಿಂದ ಮತ್ತು ಅದನ್ನು ಕಣ್ಣಿಗೆ ಹಚ್ಚಿ ಆದಿವಾಸಿಗಳನ್ನು ಗೊಂದಲಕ್ಕೀಡುಮಾಡುವ ಪ್ರಮೇಯವೇ ಇಲ್ಲದ್ದರಿಂದ ಅದನ್ನೇ ಬಳಸಲಾಯಿತು. ನಾರಾಯಣಪುರದ ಕೆರೆಯ ದಂಡೆಯ ಮೇಲಿನ ಕಾಲುದಾರಿಯಲ್ಲಿ ಒಬ್ಬೊಬ್ಬರಾಗಿ ಹಾದುಹೋಗಬೇಕಾಗಿದ್ದುದರಿಂದ ಸೂರ್ಯನಿಗೆ ಬೆನ್ನು ಮಾಡಿ, ಪ್ರಖರವಾದ ಬಿಸಿಲಿನಲ್ಲಿ ಛಾಯಾಗ್ರಹಣ ಪ್ರಾರಂಭಿಸಿದ್ದರಿಂದ ಸ್ಫುಡಿಯೋದ ಸವಲತ್ತು ಸಿಕ್ಕಂತಾಯಿತು. ಬಹುಸಂಖ್ಯಾತರು ಈ ಒಬ್ಬಂಟಿಗ ಏನು ಮಾಡುತ್ತಿದ್ದಾನೆ ಎಂದು ಅರಿಯುವ ಗೋಜಿಗೆ ಹೋಗಲಿಲ್ಲ. ರಸಿಕರು, ಪ್ರೇಮಿಗಾಗಿ ಕಾದಿರಬಹುದು ಎಂದುಕೊಂಡರೆ ಹಳಬರು, ಮಲಮೂತ್ರ ವಿಸರ್ಜನೆಗಾಗಿ ಅವಕಾಶ ಹುಡುಕುತ್ತಿರಬೇಕು ಎಂದುಕೊಂಡಿರಬೇಕು. ನಾಗರಿಕತೆಯ ಸಂಪರ್ಕ ತಟ್ಟದ ಓರ್ಛಾದ ಸಂತೆಯ ದಿನ, ದಟ್ಟಕಾಡಿನ ಮಹುವಾದಾ ಮರದ ನೆರಳಿನಲ್ಲಿ ನಿಂತು, ಪೂರ್ವನಿಶ್ಚಿತ ಸ್ಥಳಕ್ಕೆ ಆದಿವಾಸಿಗಳು ಬರುತ್ತಲೇ ಕ್ಯಾಮರಾ ಕ್ಲಿಕ್ಕಿಸಲಾರಂಭಿಸಿತು. ಛೋಟೆ ಡೊಂಗರ ಹಳ್ಳಿಯಲ್ಲಿ ಸ್ಥಳೀಯ ಮಕ್ಕಳ ಗೆಳೆತನ ಬೆಳೆಸಿ, ಅವರನ್ನು ಎದುರಿಗೆ ನಿಲ್ಲಿಸಿ ಇತರ ದಾರಿ ಹೋಕರನ್ನು ಫಿಲ್ಮಿನಲ್ಲಿ ಸೆರೆ ಹಿಡಿಯಲಾಯಿತು. ಕ್ಲಿಕ್ಕಿಸಿ ತೋರಬೆರಳಿಗೆ ನೋವಾಗು ವಂತಾದಾಗ, ಜೊತೆಯಲ್ಲಿತಂದ ಫಿಲ್ಮ್ ಮುಗಿಸಿದಾಗಲೇ ಅಪೂರ್ವ ಸಾಧನೆಯ ಸಮೃದ್ಧಿ.

ಗಾಳಿಯಾಡದ ಬೆಳಕಿಲ್ಲದ ಕತ್ತಲು ಕೋಣೆಯಲ್ಲಿ ಶಾಂತಚಿತ್ತದಿಂದ ಕುಳಿತು ಫಿಲ್ಮ್‌ಗಳನ್ನು ರಾಸಾಯನಿಕದ ಕ್ರಿಯೆಗೆ ಒಳಪಡಿಸಿದಾಗ, ಪರಿಣಾಮಗಳಿಗೆ ಕಾತುರತೆಯಿಂದ ಕಾಯುವಾಗ, ಕಲ್ಪನೆ ಕೈಲಾಸ ಶಿಖರಕ್ಕೇರಿರುತ್ತದೆ... ಆ ಮುರಿಯ ಕನ್ಯೆ ಚೆನ್ನಾಗಿ ಮೂಡಿಬಂದಿದ್ದರೆ... ಮಾರಿಯರ ಸುರಾಪಾನ ದೃಶ್ಯ ಸುಂದರವಾಗಿತ್ತು. ಹೂವಿನ ಬದಲಾಗಿ ಗಿರಿಗಿಟ್ಲೆಯನ್ನೆ ಮುಡಿದ ಆ ನೃತ್ಯಗಾತಿ ಇನ್ನೊಮ್ಮೆ ಸಿಗುವದು ಸಾಧ್ಯವೆ ಇಲ್ಲ... ಇತ್ಯಾದಿ. ಶುಭ್ರನೀರಿನಲ್ಲಿ ತೊಳೆದು ಬೆಳಕಿನಲ್ಲಿ ನೆಗೆಟಿವ್ ನೋಡಿದಾಗ ಆಗುವ ಆನಂದ ವರ್ಣನಾತೀತ. ಹುಲ್ಲೆಯಂತಹ ಹುಡುಗಿಯರನ್ನು ನೋಡುತ್ತಿದ್ದಂತೆ ಅವರನ್ನು ಕ್ಯಾಮರಾದಲ್ಲಿ ಬಂಧಿಸಿಡಲು ಯತ್ನಿಸಿದ ಘಟನೆ ನೆನಪಿಗೆ ಬಂದಿತು. ಛೋಟೆ ಡೊಂಗರದಿಂದ ಭಾನುಪ್ರತಾಪಪುರಕ್ಕೆ ಹೊರಟಾಗ ಬಸ್ ಚಾಲಕನು ಬೀಡಿಕಟ್ಟು, ಬೆಂಕಿಪೊಟ್ಟಣ ಖರೀದಿಸುವದಕ್ಕಾಗಿ ತಾಡೋಕಿ ಹಳ್ಳಿಯ ಸಂತೆಯ ಬಳಿ ವಾಹನ ನಿಲ್ಲಿಸಿದ. ಅಲ್ಲಿ ಸೇರಿದ ಆದಿವಾಸಿಗಳ ಅಲಂಕಾರ ನೋಡುತ್ತಿದ್ದಂತೆ, ಕ್ಯಾಮರಾ ದೊಂದಿಗೆ ಕೆಳಗೆ ಇಳಿದೇಬಿಟ್ಟೆ. ಅನತಿ ದೂರದಲ್ಲಿ ಕಾಡಿನ ಕಾಲುದಾರಿಯ ಬಳಿಯ ಪೊದೆಗಳ ಬಳಿ ಹೊಂಚುಹಾಕಿ ನಿಂತೆ. ಮೂವರು ಹುಡುಗಿಯರು ತಮ್ಮ ಘೋಟುಲದ ನೃತ್ಯಾಲಂಕಾರ ಗಳೊಂದಿಗೆ ನಗುತ್ತ ಕೆಲೆಯುತ್ತ ಬರಲಾರಂಭಿಸಿದ್ದರು. ಎಣ್ಣೆ ಹಾಕಿ ಮಾಟವಾಗಿ ಬಾಚಿಕೊಂಡ ಕೇಶರಾಶಿಯನ್ನು ಹತ್ತಾರು ಬಾಚಣಿಗೆಗಳಿಂದ ಅಲಂಕರಿಸಿಕೊಂಡಿದ್ದರು. ಕೆಂಪು, ಹಳದಿ ರಿಬ್ಬನ್ ಗಳನ್ನು ಹೂವಿನಂತೆ ಕಟ್ಟಿಕೊಂಡು ಕವಡೆಸರಗಳನ್ನು ನೇತುಬಿಟ್ಟಿದ್ದರು. ಕೊರಳ ತುಂಬ ಹಸಿರು, ನೀಲಿ, ಕೆಂಪು ಬಿಂಗಿ ಮಣಿಗಳ ಸರಗಳು, ಬರಿದು ಎಂದು ತೋರುವ ಅಂಗಾಂಗಗಳ ಭಾಗದ ಮೇಲೆ ಹಚ್ಚೆಹಾಕಿಸಿದ್ದರು. ಕೈ ತುಂಬ ಬಳೆಗಳು, ಕೆಂಪು, ಕೇಸರಿ ಬಣ್ಣದ ರಬ್ಬಾದ ತುಂಡು ಸೀರೆಗಳು, ಕಾಲುಗಳಿಗೆ ಕಡಗ, ಸುತ್ತುಂಗುರಗಳು ಕ್ಯಾಮರಾದಿಂದ ಅವರನ್ನು ನೋಡುತ್ತಿದ್ದಂತೆ ಸ್ವಪ್ನಲೋಕದ ಸುಂದರಿಯರಂತೆ ಕಂಡು ಅವರಿಗೆ ಅರಿವಾಗುವದರೊಳಗಾಗಿ ಹತ್ತಾರು ಸಲ ಕ್ಲಿಕ್ಕಿಸಿದ್ದಾಯಿತು. ಅಪರಿಚಿತನೊಬ್ಬನನ್ನು ಕಂಡಾಕ್ಷಣ ಹುಲಿಯನ್ನು ಕಂಡ ಹುಲ್ಲೆಯಂತೆ ನಾಗಾಲೋಟ ಹಾಕಿದರು. ಹಿಂಬಾಲಿಸಿ ಬಂದು ಇನ್ನೊಮ್ಮೆ ಛಾಯಾಗ್ರಹಣ ಮಾಡಿಯಾನು!

ಎಂದು ಹೆದರಿ ಮಂಡಿಯಲ್ಲಿ ಮುಖ ಅಡಗಿಸಿಕೊಂಡು ಕುಳಿತ ಶೀವಿ ಕಂಡಾಗ ಮಹಾತ್ಮಾ ಗಾಂಧಿಯವರ ಮೂರು ಕೋತಿಗಳು ನೆನಪಿಗೆ ಬಾರದಿರಲಿಲ್ಲ. ಡ್ರೈವರನು ಸಾಮಾನು ಗಳೊಂದಿಗೆ ಬಸ್ ಹೊರಡಿಸಿ ಬಿಟ್ಟಿರಬೇಕೆಂದು ಲಗುಬಗೆಯಿಂದ ಹಿಂತಿರುಗಿದರೆ, ಅವನಿನ್ನೂ ಚುಟ್ಟ ಸೇದುತ್ತಾ ಸಂತೆಗೆ ಬಂದ ಹಳೇ ಗೆಳತಿಯೊಂದಿಗೆ ನಗೆ ಚಾಟಿಕೆಯಲ್ಲಿ ತೊಡಗಿದ್ದ!

ಭಾಂಕೇರ ಹಳ್ಳಿಯ ಮುಖ್ಯಸ್ಥ ಭಿಕಾರ ಪೊಹಡು ಆದರದಿಂದ ಬರಮಾಡಿಕೊಂಡು, ಕೊರಡು ತುಂಡಿನ ಮೇಲೆ ಕೂಡ್ರಿಸಿ, ಬೆಲ್ಲದ ಚಹವನ್ನು ದೊನ್ನೆಯಲ್ಲಿ ಪೂರೈಸಿದ. ಕೊರಳಿನಲ್ಲಿ ಇಳಿಬಿದ್ದಿದ್ದ ಕ್ಯಾಮರಾ ದರ್ಶನ ಮಾತ್ರದಿಂದ ಭೀತಿಗೊಂಡ ಪತ್ನಿ ಹೊರಗೋಡಿದರೂ ಕುತೂಹಲ ತಡೆಯಲಾರದೇ ಎಳೆ ಬಿಸಿಲಲ್ಲಿ ಬಿದಿರಿನ ಚಪ್ಪರಕ್ಕೆ ಆತುಕೊಂಡು, ಕೆನ್ನೆಗೆ ಕೈ ತಗಲಿಸಿ, ಒಂಟಿಕಾಲಮೇಲೆ ನಿಂತಳು. ಛಾಯಾಚಿತ್ರಕ್ಕೆ ವಿವರವಾಗಿ ನಿರ್ದೇಶನ ಕೊಟ್ಟರೂ ಅವಳು ಇಂಥ ಭಂಗಿಯಲ್ಲಿ ನಿಲ್ಲುವದು ಅಸಾಧ್ಯವೆನಿಸಿದ್ದರಿಂದ, ಹೇಳಿಸಿ ಬಿದ್ದಂತಹ ಬಿಸಿಲು ಇದ್ದುದರಿಂದ ಪ್ರತಿಯೊಂದು ಚಹಾ ಗುಟುಕು ಉದರದಲ್ಲಿ ಇಳಿ ಬಿಟ್ಟಾಗೊಮ್ಮೆ ಕ್ಲಿಕ್ಕಿಸಿದೆ. ತೊಗಟೆಯ ಹಗ್ಗದಿಂದ ಮಾಡಿನಿಂದ ಇಳಿಬಿಟ್ಟ ಬಿದಿರಿನ ತೊಟ್ಟಿಲಿನಲ್ಲಿ ಮಲಗಿಸಿದ್ದ ಮಗು ಅಳಲಾರಂಭಿಸಿದ್ದರಿಂದ, ತಾಯಿ ಧಾವಿಸಿ ಬಂದು ಹಾಲುಣಿಸಲಾರಂಭಿಸಿದಳು. ಆಗ ಆಗಂತುಕನ ಹತ್ತಿರ ಕ್ಯಾಮರಾ ಇದ್ದುದನ್ನು ಅವಳೂ ಮರೆತಂತೆ ಇತ್ತು. ಹದಿವಯಸ್ಸಿನ ಅವಳ ನಾದಿನಿ ಸೆರೆ ಮಾಡಲು ಬಳಸುವ 'ಮಡಿಯಾ' ಧಾನ್ಯಗಳನ್ನು ಚಾಪೆಯ ಮೇಲೆ ಹರವುತ್ತಿದ್ದಳು. ಕಾಳು ಎಂತಹದೆಂದು ಪರೀಕ್ಷಿಸಲು ಯತ್ನಿಸಿದಾಗ ಕಣ್ಮರೆಯಾಗಿಯೇಬಿಟ್ಟಳು. ಭಿಕಾರನಿಂದ ಎಷ್ಟು ಹೇಳಿಸಿದರೂ ಅವಳು ಬರಲೇ ಇಲ್ಲ. ಪತಿಯೊಂದಿಗೆ ಪತ್ನಿಯ ಛಾಯಾಚಿತ್ರ ತೆಗೆಯಲೇ ? ಎಂದಾಗ ಆವರೆಗೆ ಸುಮ್ಮನಿದ್ದ ಪತ್ನಿಯೂ ನಾಪತ್ತೆಯಾಗಿಬಿಟ್ಟಳು.

ಚಮೇಲಿಹಳ್ಳಿಯ ಘೋಟುಲ್ ನೋಡಲು ಹೊರಟಾಗ ಚೋಳಶೈಲಿಯ ಕಂಚಿನ ವಿಗ್ರಹವನ್ನು ಹೋಲುವ ಚೆಲುವೆ ಎದುರಾಗಿ ಬರಲಾರಂಭಿಸಿದ್ದಳು. ತುಂಡು ಸೀರೆ ಉಟ್ಟ ಅಲ್ಪವಸನೆ. ನೀರು ತುಂಬಿದ ತುಂಬಾ ಕೈಯಲ್ಲಿ ಹೊತ್ತು ಕೆಚ್ಚೆದೆಯ ನಡೆಯಿಂದ ವೇಗವಾಗಿ ಹೊರಟವಳ ಛಾಯಾಗ್ರಹಣ ಮಾಡಬೇಕೆಂದು ಕ್ಷಣಾರ್ಧದಲ್ಲಿ ಅನಿಸಿಬಿಟ್ಟಿತು. ಜಲಬಾಧೆಗೆ ಹೋಗುವವನಂತೆ, ಕಾಲುದಾರಿಯಿಂದ ದೂರ ಸರಿದು ಕ್ಲಿಕ್ ಅನಿಸಿದಾಗ ದೊಡ್ಡ ಸಾಹಸ ಮಾಡಿದಂತೆ ಅನಿಸಿತು. ಆಗ ಅದೊಂದು ಅಪೂರ್ವ ಛಾಯಾಚಿತ್ರವಾಗಲಿದೆ! ಎಂದು ಅನಿಸಿರಲಿಲ್ಲ. ಘೋಟುಲದ ಆವಾರದಲ್ಲಿ ಹುಡುಗ-ಹುಡುಗಿಯರು ನರ್ತಿಸುತ್ತಿರುವಾಗ ನವಯುವತಿಯೋರ್ವಳು ತನ್ನ ಹಸುಳೆಯನ್ನು ಹೊತ್ತು ಬೆರಗಾಗಿ, ಬೊಗಸೆಗಣ್ಣುಗಳಿಂದ ನೋಡುತ್ತ ಬೇಲಿಯ ಹೊರಗೆ ನಿಂತ ಶೀವಿ ಖಜುರಾಹೋದ ಸುರಸುಂದರಿಯನ್ನು ನೆನಪಿಗೆ ತರುವಂತೆ ಇತ್ತು. ಸರ್ವಾಂಗಸುಂದರ ಅಲಂಕಾರ ಮಾಡಿಕೊಂಡ ನರ್ತಕಿಯರನ್ನು ಅಲಕ್ಷಿಸಿ ಬೆಚ್ಚುಪಿನಂತೆ ನಿಂತವಳ ಛಾಯಾಚಿತ್ರ ತೆಗೆಯುವದರಲ್ಲಿ ಈತನಿಗೆ ಏನು ಆಸಕ್ತಿ? ಎಂದು ಮಾಝಿ ಅರಿಯಲಾರದೇ ತೊಳಲಾಡಿದ. ಬಲ ಹೆಗಲಿನಿಂದ ಎಡ ಸೊಂಟದ ತನಕ ಹರಿಯಬಿಟ್ಟ ಬಲೆಯ ಜೋಳಿಗೆಯಲ್ಲಿ ಮಗುವನ್ನು ಹೊತ್ತು ಕೈಬೀಸಿ ನಡೆಯಲು ಸಾಧ್ಯವಾಗುವದು, ಹಸಿವಾದಾಗೊಮ್ಮೆ ಮಗುವಿಗೆ ತಾಯ ಹಾಲು ಎಟಕುವಂಥ ಪದ್ಧತಿ ಬಹಳ ಸರಳ ಮತ್ತು ಅನುಕೂಲವಾದದ್ದು ಎಂದು ಹಿರಿಯನಿಗೆ ಹೇಳಿದಾಗ ಸಕಲವೂ ತಿಳಿದವನಂತೆ ಗೋಣುಹಾಕಿದ್ದ. ನಂತರ ಆ ಮುಗ್ಧ, ಅಲ್ಲಿಂದ ಹಾದು ಹೋಗುವ ಪ್ರತಿ ತಾಯಿ ಮಗುವನ್ನು ನಿಲ್ಲಿಸಿ ಛಾಯಾಚಿತ್ರಣ ಮಾಡಲು ಸೂಚಿಸಿದ! ಹಳ್ಳಿಯ ಮುಖಂಡನಾದ್ದರಿಂದ ಆತನ ಮಾತಿಗೆ ನಿರಾಕರಿಸದೆ 'ಛಕ್' ಎಂದು ಫ್ಲ್ಯಾಶ್ ಹಾಕಿದೆ. ಆಗಂತುಕನೊಬ್ಬ ತನ್ನ ಮಾತಿಗೆ ಬೆಲೆ

ಕೊಡುತ್ತಾನೆಂದು ಖುಷಿಯೊಳಗಿದ್ದ ಮಾರ್ಖಿಗೆ, ಕ್ಯಾಮರಾ ಓಡಿಸದೆ ಬೆಳಕು ಚೆಲ್ಲುವದು ಸಾಧ್ಯವಿದೆ ಎಂಬುದು ಹೇಗೆ ತಿಳಿಯಬೇಕು ?

ದೊಡ್ಡ ಊರಿನಲ್ಲಿ ಸುಗ್ಗಿಯ ನೃತ್ಯಕೂಟಗಳು ಮೂರು ನಾಲ್ಕು ದಿನ ನಡೆಯುವದರಿಂದ ಆದಿವಾಸಿಗಳೆಲ್ಲ ಅದರ ಪಕ್ಕದ ಕಾಡುಗಳಲ್ಲಿ ಠಾಣ್ಯ ಹಾಕಿರುತ್ತಾರೆ. ತುಂಡು ಸೀರೆಗಳನ್ನು ಸೊಂಟಕ್ಕೆ ಸುತ್ತಿ ಬರಿಮೈಯಲ್ಲಿ ಕೆರೆಗೆ ಹೊರಟ ಸೋದರಿಯರ ಚಿತ್ರ ಸೆರೆಹಿಡಿಯಬೇಕೆಂಬ ಛಲ ಮೂಡಿತು. ಅವರು ಹೋದ ದಾರಿಯಲ್ಲಿಯೇ ಹಿಂದಿರುಗುತ್ತಾರೆಂಬುದು ಖಾತ್ರಿ. ದೂರದಿಂದ, ಅನತಿ ದೂರದಿಂದ, ಹತ್ತಿರದಿಂದ ಕ್ಲಿಕ್ಕಿಸಲು ಸಾಧ್ಯವಾಗುವಂತೆ ಬೆಳಕು ಸರಿಯಾಗಿ ಬೀಳುವ ಸ್ಥಳದ ಬಳಿಯ ಬಂಡೆಗಲ್ಲೊಂದರ ಬಳಿ ಕಾದೆ. ತೀರ ಹತ್ತಿರ ಬಂದಾಗ ನನ್ನ ಉಪಸ್ಥಿತಿಯ ಅರಿವಾಗಿ, ಹಿಂತಿರುಗಿ ನೋಡಿ, ಬೇರೆ ಯಾರೂ ಇಲ್ಲದ್ದು ಅರಿವಾಗಿ, ಆಗಂತುಕನ ಇಂಗಿತ ಅರಿತು ಪಲಾಯನ ಮಾಡಿಯೇಬಿಟ್ಟರು. ಹಳ್ಳಿಯ ಗೆಳತಿಯರಿಬ್ಬರು ಕಾಡಿನ ಹಣ್ಣುಗಳನ್ನು ದೊನ್ನೆಗಳಲ್ಲಿಟ್ಟು ಮಾರುತ್ತಿದ್ದುದರಿಂದ ಚಿತ್ರ ತೆಗೆಯಲು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಕಿವಿಯ ಮೇಲೆ ಅರೆಸೇದಿದ ಬೀಡಿ, ಗೊಂಡೆಹೂಗಳಿಂದ ಅಲಂಕರಿಸಿದ ಪಗಡಿ, ಕೊರಳಿಗೆ ಅಸಂಖ್ಯಾತ ಹಾರಗಳು ಮತ್ತು ಅಜ್ಜ ಬಿಟ್ಟು ಹೋದ ಜಾಕೀಟು ಧರಿಸಿದ ಕಾಡಿನ ಯುವಕನ ಭಾವಚಿತ್ರ ತೆಗೆದಾಗ ಅವನಿಗೆ ಇದೆಲ್ಲ ಏನು ಎಂದು ಅರಿವಾಗದಿದ್ದರೂ ಅವನ ಬೆಪ್ಪುತನಕ್ಕೆ ಪಕ್ಕದಲ್ಲಿ ನಿಂತ ನವತರುಣಿಯೋರ್ವಳು ಮನಸ್ವೀ ನಕ್ಕಳು.

ಕಲಾಚಕ್ಷುವನ್ನು ಸದಾ ಜಾಗೃತಾವಸ್ಥೆಯಲ್ಲಿಯೇ ಇಟ್ಟುಕೊಂಡರೆ, ಕಲಾಕಾರನು ಕಲ್ಪನೆಯಿಂದ ನಿರ್ಮಿಸುವಂತಹ ಸನ್ನಿವೇಶಗಳು ಛಾಯಾಚಿತ್ರಕಾರನಿಗೂ ಲಭಿಸಬಲ್ಲವು. ಬಾರಸೂರಿಗೆ ಹೋಗಲು ವಾಹನಕ್ಕಾಗಿ ಬಹಳ ಹೊತ್ತು ಕಾದು ನಿಂತಾಗ, ಕಾಲುಗಳನ್ನೇ ನಂಬಿದ ಆದಿವಾಸಿಗಳು ತಮ್ಮ ಸರ್ವಸ್ವವನ್ನೂ ಹೊತ್ತು ಹೊರಟಿದ್ದರು. ಅವರ ಊರಾವದು ? ಹೆಸರೇನು ? ಎಲ್ಲಿಂದ ಬಂದರು ? ಎಲ್ಲಿ ಹೋಗಲಿರುವರು ? ಎಂಬ ಯಾವ ಮಾಹಿತಿಯೂ ಇರದಿದ್ದರೂ ಅದೇಕೋ ಕ್ಯಾಮರಾ ಅವರತ್ತ ತಿರುಗಿ ಕ್ಲಿಕ್ ಎನ್ನುತ್ತಲೇ ಇತ್ತು. ಅವರ ಛಾಯೆ ಸದಾಕಾಲ ತನ್ನ ಬಳಿ ಇರುವಂತೆ ನೋಡಿಕೊಂಡಿತು. ಯುವ ಮುರಿಯನೊಬ್ಬನು ಸಂತೆಗೆ ಹೊರಟ ಠೀವಿ ಅತ್ಯಾಕರ್ಷಕವಾಗಿತ್ತು. ಕಿರಿಕಚ್ಚೆ ತೊಟ್ಟಿದ್ದರೂ ಭುಜದ ಮೇಲಿಂದ ಶಾಲನ್ನು ಇಳಿಬಿಡಲು ಮರೆತಿರಲಿಲ್ಲ. ಬಿಗಿಯಾಗಿ ಬಿಗಿದುಕೊಂಡ ಕೈವಸ್ತ್ರವೇ ಅವನ ರುಮಾಲು. ಬಿಲ್ಲನ್ನೇ ಭುಜಕ್ಕೆ ಏರಿಸಿ, ಒಂದು ಅಂಚಿನಲ್ಲಿ 'ಲಾಂದಾ' (ಹೆಂಡ) ತುಂಬಿದ ತುಂಬಾಗಳ ಜೊತೆ ಹಲವಾರು ಬಾಣಗಳು, ಇನ್ನೊಂದು ತುದಿಯಿಂದ ಇಳಿಬಿಟ್ಟ ಬಿದಿರುಬುಟ್ಟಿಗಳಲ್ಲಿ ನಿತ್ಯೋಪಯೋಗದ ಸಾಮಾನುಗಳು, ಜೊತೆಗೆ ಕೈಕೊಡಲಿ. ಎದುರಿನಿಂದ ಬಂದಾತನ ಕೆಲ ಛಾಯಾಚಿತ್ರಗಳನ್ನು ತೆಗೆಯುವದರಲ್ಲಿ ಅವನು ಸಾಕಷ್ಟು ದೂರ ನಡೆದೇಬಿಟ್ಟಿದ್ದ.

ಆಧುನಿಕರೆನಿಸಿಕೊಳ್ಳುವವರ ಸಂಪರ್ಕದಲ್ಲಿ ಬಂದ ಕೆಲ ಆದಿವಾಸಿಗಳ ಛಾಯಾಗ್ರಹಣದ ಬಗ್ಗೆಯೂ ಹೇಳಬೇಕು. ತಮ್ಮ ಛಾಯಾಚಿತ್ರ ಪಡೆಯಲು ಉತ್ಸುಕರಾದ ಇಬ್ಬರು, ಬಾಣ ಮತ್ತು ಕೈಕೊಡಲಿ ಕೊಡಲು ಬಂದಿದ್ದರು. ಇದಕ್ಕೂ ಹೃದಯಸ್ಪರ್ಶಿ ಘಟನೆಯೆಂದರೆ ಚಿಕ್ಕ ಹುಡುಗಿಯೊಬ್ಬಳು ತನ್ನ ಚಿತ್ರ ಪಡೆಯಲು ಐದು ಪೈಸಾ ಕೊಡಲು ಬಂದದ್ದು. ಅವಳಿಗೊಂದು ಪ್ರತಿ ಕೊಡಲಾಗಲಿಲ್ಲವಲ್ಲ ಎಂದು ಇಂದಿಗೂ ಕಳವಳವಾಗುತ್ತಿರುತ್ತದೆ. ಮುಂದೆ ಎಂದಾದರೂ ಬಸ್ತರಕ್ಕೆ ಭೇಟಿಕೊಡುವ ಅವಕಾಶ ದೊರೆತರೆ, 'ಪೋಲ್‌ರೊಯ್ಡ್' ಕ್ಯಾಮರಾ ಒಯ್ಯ ಬೇಕೆಂದಿರುವೆ. ಅಂದರೆ ತಕ್ಷಣ ಅವರಿಗೊಂದು ಪ್ರತಿ ಮಾಡಿ ಕೊಡಲು ಸಹಾಯಕವಾಗುತ್ತದೆ. ಆ ಅವಕಾಶ ಎಂದು ಬರುತ್ತದೋ ಎಂದು ಮಾತ್ರ ಹೇಳಲಾಗುವದಿಲ್ಲ.

# 6. ಜಗದಲಪುರದ ಸಂತೆ



ಅಬುಜಮಾಡ ಬೆಟ್ಟಕ್ಕೆ ಬಾಗಿಲಿನಂತಿರುವ ಭೋಟೆ ಡೊಂಗರದಿಂದ ನಾರಾಯಣಪುರ, ಕೊಂಡೆಗಾಂವ ಮಾರ್ಗವಾಗಿ ಬಸ್ತರ ಜಿಲ್ಲೆಯ ಮುಖ್ಯ ಕೇಂದ್ರವಾದ ಜಗದಲಪುರಕ್ಕೆ ಸಂತೆಯ ದಿನವೇ ಮುಟ್ಟುವಂತೆ ಆದದ್ದರಿಂದ ಲಾಭವೇ ಆಯಿತು. ನೋಡಿದಲ್ಲೆಲ್ಲ ಹಬ್ಬದ ಸಡಗರ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಬೀಡುಬಿಟ್ಟವರು ನಸುಕಿನಲ್ಲಿ ಎದ್ದು ಮಡದಿ ಮಕ್ಕಳಿಗೆಲ್ಲ ಸಿದ್ಧವಾಗಲು ಆಜ್ಞೆ ವಿಧಿಸಿ, ಮಾರಬೇಕಾದ ಸರಕುಗಳನ್ನು ಹೊರಲು ಎಲ್ಲರಿಗೂ ಹಂಚಿಹಾಕಿ, ತಿಂಡಿ-ತೀರ್ಥಗಳನ್ನೂ ಹೊತ್ತು ಕಾಲನ್ನೇ ರೈಲಾಗಿ ಮಾಡಿ, ಕಲ್ಲು ಮುಳ್ಳುಗಳನ್ನು ಲೆಕ್ಕಿಸದೇ

ಕಿರಿದಾದ ದಾರಿಗಳನ್ನೆಲ್ಲ ಹಿಂದೆಹಾಕಿ, ಮುಂದೆ ಓಡಿದಂತೆ ನಡೆಯುವರು. ನಾಲ್ಕು ವರ್ಷದ ಮಗು ದಣಿದಾಗ ತಾಯಿಯ ಬಗಲಲ್ಲಿ ಆಗಲೇ ಕೂಸೊಂದು ಇದ್ದುದರಿಂದ, ಅದನ್ನೆತ್ತಿಕೊಂಡು 'ತುಂಬಾ' ಅಥವಾ ಪೊಳ್ಳು ಮಾಡಿದ ಸೋರೆಕಾಯಿ ಹೂಜೆ ಇಟ್ಟ ಬುಟ್ಟಿಗೆ ಸೇರಿಸುತ್ತಾನೆ. ಈ ಎಳೆ ಆದಿವಾಸಿ ಮಗು, ಬುಟ್ಟಿಯಲ್ಲಿ ಸವಾರಿ ಮಾಡುತ್ತ ಪಿಳಿಪಿಳಿ ಕಣ್ಣು ಬಿಡುತ್ತ ಪರಿಸರದ ಪರಿಚಯ ಮಾಡಿಕೊಳ್ಳುತ್ತಿರುತ್ತದೆ. ಮಾರಲು ತಂದ ಕೋಳಿಗಳನ್ನು ಇಳಿಬಿಟ್ಟ ಭುಜದ ಮೇಲೆಯೇ ಪುಟ್ಟ ಬಾಲಕನು ಆರೂಢನಾಗಿ ಹೋಗುವದನ್ನು ಕಂಡಾಗ ಕಣ್ಣಿಗೆ ಹಬ್ಬವಾಗುತ್ತದೆ.

ಆ ಆದಿವಾಸಿಗಳು ಸಂತೆಗೆ ಹಾಯ್ದುಹೋಗುವ ಆಯಕಟ್ಟಿನ ಸ್ಥಳದಲ್ಲಿ ಸ್ಥಾಪಿತರಾದರೆ ಕಲಾಕಾರ, ಛಾಯಾಚಿತ್ರಕಾರರಿಗೆ ಸುಗ್ಗಿಯಿದ್ದಂತೆಯೇ! ತಲೆಗೆ ಗಂಡಸರು ಚೋಟುದ್ದದ ರುಮಾಲು ಸುತ್ತಿದರೂ ಅದಕ್ಕೆ ನಾಲ್ಕೂ ಕಡೆಗೆ ಗೊಂಡೆ ಹೂ ಚುಚ್ಚಿರುತ್ತಾರೆ. ಕಿವಿಯಿಂದ ನಾಲ್ಕು ಐದು ತಾಮ್ರದ ಉಂಗುರುಗಳು ನೇತುಬಿದ್ದಿರುತ್ತವೆ. ಭುಜದಿಂದ ಕಿರಿದೊಂದು ಶಾಲನ್ನು ಇಳಿಬಿಟ್ಟಿರುತ್ತಾರೆ. ಸೊಂಟಕ್ಕೆ ಮುಂಗಚ್ಚೆಯ ಕಿರಿಧೋತರ. ಮಾಂಸಖಂಡಗಳು ತುಂಬಿಕೊಂಡ ಕಿರಿಯರು, ಬಣ್ಣದಲ್ಲಿ ಕಂದಾದರೂ ಹೊಳಪಿನಲ್ಲಿ ಕನ್ನಡಿಯನ್ನು ಹೋಲುತ್ತಾರೆ. ಬಿಲ್ಲನ್ನೇ ಕೋಲಾಗಿ ಮಾಡಿಕೊಂಡು ವಿವಿಧ ಸಾಮಾನು ಸೇರಿದ ಬೆತ್ತದ ಬುಟ್ಟಿಯನ್ನು ತೂಗು ಹಾಕುತ್ತಾರೆ. ಜೊತೆಯಲ್ಲಿ ನಾಲ್ಕಾರು ಬಾಣಗಳೂ ಇರುತ್ತವೆ. ಹೊತ್ತ ಭಾರ, ಬಿಸಿಲಿನ ತಾಪ, ನಡೆದುಬಂದ ದಣಿವಿನಿಂದಾಗಿ ಮೈಯೆಲ್ಲ ಬೆವರುತ್ತಿರುತ್ತದೆ. ಕಪ್ಪು ಮಿಂಚುವ ಮೈಮೇಲೆ ಬೆವರ ಹನಿಗಳು ಮುತ್ತಿನಂತೆ ಹೊಳೆಯುತ್ತಿರುತ್ತವೆ. ಸಾವಿರಾರು ರೂಪಾಯಿ ಬೆಲೆಬಾಳುವ ಮುತ್ತಿನ ಆಭರಣಗಳನ್ನು ಧರಿಸುವ ನಗರದ ಚೆಲುವೆಯರಿಗಿಂತ ನೂರು ಪಾಲು ಈ ಕಿರಿಯರು ಸುಂದರವಾಗಿ ಕಂಡರು. ಕ್ಷಣಾರ್ಧದಲ್ಲಿ ಒಬ್ಬ ಆಕರ್ಷಕ ತರುಣ ಎದುರಾದಾಗ ಕ್ಯಾಮರಾ ಕ್ಲಿಕ್ ಎಂದಿತು. ಇದರಿಂದ ಅವನಿಗಾದ ಆನಂದಕ್ಕೆ ಕೊನೆ ಮೊದಲಿಲ್ಲ. ಹೊತ್ತ ಭಾರವನ್ನು ನೆಲಕ್ಕಿಳಿಸಿ, ಜೋರಾಗಿ ಉಸಿರಾಡುತ್ತ, ''ಬಾಬೂಜಿ, ನಾನು ತೀರ ಬಡವ. ಒಂದು ಕವಡಿ ಕಾಸೂ ನನ್ನ ಬಳಿ ಇಲ್ಲ. ಒಂದು ಬಾಣ ನಿಮಗೆ ಕೊಟ್ಟುಬಿಡುತ್ತೇನೆ. ದಯವಿಟ್ಟು ನನ್ನ ಭಾವಚಿತ್ರದ ಒಂದು ಪ್ರತಿಯನ್ನು ಕೊಟ್ಟುಬಿಡಿ'' ಎಂದು ದೈನ್ಯತೆಯಿಂದ ಬೇಡಿಕೊಂಡ. ಈ ಚಿಕ್ಕ ಆಸೆಯನ್ನೂ ಈಡೇರಿಸುವ ಸ್ಥಿತಿಯಲ್ಲಿ ಇಲ್ಲವಲ್ಲ! ಎಂದು ಚಡಪಡಿಸಿದೆ. ಅವನ ಹೆಸರು, ಊರು, ವಿಳಾಸಗಳನ್ನು ವಿಚಾರಿಸಿದಾಗ ಹೇಳಲು ತಿಳಿಯದೇ ''ಅಷ್ಟೊಂದು ತೊಂದರೆ ಪಟ್ಟುಕೊಳ್ಳಬೇಡಿ ಬಾಬುಜಿ'' ಎಂದು ನಡೆದೇಬಿಟ್ಟ. ಆ ಭಾವಚಿತ್ರ ನೋಡಿದಾಗ ಅವನ ಮುಗ್ಧತೆ ಮತ್ತೆ ಮತ್ತೆ ನೆನಪಾಗುತ್ತದೆ.

ಯುವ ಗೃಹಿಣಿಯೊಬ್ಬಳು, ಹಿಂದೆ ಬಿದ್ದ ಮಗಳಿಗಾಗಿ ನೆರಳಿನಲ್ಲಿ ಕಾದು ನಿಂತಿದ್ದಳು. ಆಕೆ ತನ್ನ ಸರ್ವಸ್ವವನ್ನೂ ಜೊತೆಗೆ ಹೊತ್ತು ಹೊರಟಂತೆ ಇತ್ತು. ತಲೆಯ ಮೇಲೆ ಹೊತ್ತ ಬುಟ್ಟಿಯಲ್ಲಿ ಆಡಿನ ಮರಿಯೊಂದು ಹಾಯಾಗಿ ಮಲಗಿತ್ತು. ಬಲಭುಜದಿಂದ ಸೊಂಟದ ಎಡಕ್ಕೆ ಬರುವಂತೆ ಕಟ್ಟಿಕೊಂಡ ಬುಟ್ಟಿಯಲ್ಲಿ ಮಗು ಕುಳಿತು ಸತತವಾಗಿ ತಾಯಿಯ ಹಾಲು ಹೀರುತ್ತಿತ್ತು. ಎಳೆಗೈ ಎದೆಯುಬ್ಬನ್ನೇ ಆಟಿಗೆಯಂತೆ ಹಿಡಿದಿತ್ತು. ನೀರು ಮತ್ತು ಲಾಂದಾ ಹೆಂಡವನ್ನು ತುಂಬಿದ ತುಂಬಾಗಳು ಬಲಭುಜದಿಂದ ನೇತುಬಿದ್ದಿದ್ದವು. ಮರಿಯನ್ನು ಕಾಣಲು ಆತುರಗೊಂಡ ತಾಯಿ ಆಡನ್ನು ಬಲಗೈಯಿಂದ ನಿಯಂತ್ರಿಸುತ್ತಿದ್ದಳು. ಕೊನೆಗೊಮ್ಮೆ ನಡೆದುಬಂದ ಮಗಳು ದಣಿದು ಅಳಲಾರಂಭಿಸಿದಾಗ, ಅವಳನ್ನು ಇನ್ನೊಂದು ಸೊಂಟಕ್ಕೇರಿಸಿ ಯುವಗೃಹಿಣಿ, ಗೂಡ್ಸ್ ಗಾಡಿಯಂತೆ ಹೊರಟೇಬಿಟ್ಟಳು. ಪೊರಕೆಯನ್ನು ಖರೀದಿಸಿ ಮನೆಗೊಯ್ಯಲು ಆಟೋ ಬಳಸುವ ಬೆಂಗಳೂರು ಗೃಹಿಣಿ ಕಣ್ಣಮುಂದೆ ಸುಳಿದು ಮಾಯವಾದಳು. ಇಂಥ ಆದಿವಾಸಿಗಳ

ನೆರವಿಗೆ ಹೋಗೆಂದು ಪರೋಪಕಾರಿ ಬುದ್ಧಿ ಸೂಚಿಸಿದರೂ, ಹಾಗೆ ಮಾಡದಿರಲು ವ್ಯಾವಹಾರಿಕ ವಿವೇಕ ಎಚ್ಚರಿಸಿತು. ಈ ಮೂಲ ಬುಡಕಟ್ಟಿನ ಜನರು ತೀರ ಬಡವರಾದರೂ ಅಷ್ಟೇ ಅಭಿಮಾನಿಗಳೆಂಬುದು ಅನುಭವದ ಮಾತು. ಸಹಾಯವನ್ನು ಅವರು ನಿರಾಕರಿಸುವರಷ್ಟೇ ಅಲ್ಲ, ತೀರ ಅಪರಿಚಿತರನ್ನು ಸಂಶಯದಿಂದಲೇ ಕಾಣುವದು ಪರಿಪಾಠ. ಹೀಗಾಗಿ ಈ ಎಳೆ ಮಾತೆಯ ಅಸಹಾಯಕ ಸ್ಥಿತಿಯ ಛಾಯಾಚಿತ್ರವನ್ನಷ್ಟೇ ಸೆರೆಹಿಡಿದು ಸುಮ್ಮನಿರಬೇಕಾಯಿತು.

ಆದಿವಾಸಿಗಳು ಭಾರವನ್ನು ಹೊರುವ ಯಾವ ಯಾವ ಬಗೆಗಳನ್ನು ಬಳಸುತ್ತಾರೆಂದು ಖಚಿತವಾಗಿ ಹೇಳಬರುವಂತಿಲ್ಲ. ತಲೆ ಇಲ್ಲವೇ ಬೆನ್ನು ಹೆಚ್ಚಿನ ಭಾರ ಹೊರುತ್ತದೆ, ಎಂಬ ನಗರದವರ ನಿರ್ಣಯದಲ್ಲಿ ಅವರಿಗೆ ವಿಶ್ವಾಸವಿದ್ದಂತಿಲ್ಲ. ಹಾಗಾಗಿ ತಮ್ಮ ಅನುಕೂಲದಂತೆ, ಸರಿ ಕಂಡಂತೆ ಸಾಮಾನು ಸಾಗಿಸುವದರಿಂದ ವೈವಿಧ್ಯಮಯವಾಗಿ ಕಾಣುತ್ತಾರೆ. ಎಳೆಯನು ಉರುವಲು ಕಟ್ಟಿಗೆಯನ್ನು ಬಿದಿರು ತುಂಡಿಗೆ ಸಿಕ್ಕಿಸಿ ಹೆಗಲ ಮೇಲೆ ಹೊತ್ತರೆ, ನಡುವಯಸ್ಕನು ಕಟ್ಟಿಗೆಯನ್ನು ಜೋಡಿಬುಟ್ಟಿಗಳಲ್ಲಿ ತುಂಬಿ ಭುಜದ ಮೇಲಿಂದ ಇಳಿ ಬಿಟ್ಟಿರುತ್ತಾನೆ. ಹಿರಿಯನೊಬ್ಬ ಬಿಲ್ಲಿನ ಒಂದು ಬದಿಯಿಂದ ಕಟ್ಟಿಗೆ ಹೊರೆಯನ್ನು ಇನ್ನೊಂದು ತುದಿಯಿಂದ ಸೋರೆ ಕಾಯಿಯನ್ನು ತೂಗುಹಾಕಿ ಕೈಬೀಸಿ ನಡೆಯುತ್ತಿದ್ದ. ಹುಲ್ಲನ್ನು ಕಲಾತ್ಮಕವಾಗಿ ಒಟ್ಟಿ ಹೇಗೆ ಮಾರಬಹುದೆಂದು ವ್ಯಾಪಾರಿಗಳು ಇವರಿಂದ ಕಲಿಯಬೇಕು. ಚಕ್ಕಡಿ, ಟ್ರಕ್‌ಗಳಲ್ಲಿ ಜಡಿದು ತುಂಬಿ ರಸ್ತೆಯಲ್ಲಿ ಜೀರುತ್ತ ಹೋಗುವುದು ಇವರಿಗೆ ಗೊತ್ತಿಲ್ಲ. ಹುಲ್ಲನ್ನು ಒಂದೇ ಉದ್ದಳತೆಯಲ್ಲಿ ಕೊಯ್ದು, ಅಗರಬತ್ತಿಗಳಂತೆ ವರ್ತುಲಾಕಾರದ ಬಂಡಲ್ ಕಟ್ಟಿ, ಒಂದರ ಮೇಲೊಂದು ಜೋಡಿಸಿ, ಬಿಲ್ಲಿನಿಂದ ಜೋಲು ಬಿಟ್ಟು, ಸಂತೆಯಲ್ಲಿ ಮಾರಲು ಹೊರಟ ನೆಂದರೆ, ಆ ಅಚ್ಚುಕಟ್ಟುತನವನ್ನು ಎಂಥವರೂ ಮೆಚ್ಚಬೇಕು. ಮಣ್ಣಿನ ಮಡಕೆಗಳನ್ನು ನಾರಿನ ಹಗ್ಗದ ಬಲೆಗಳಲ್ಲಿ ಸೇರಿಸಿ, ಇದೇ ರೀತಿಯಿಂದ ಸಾಗಿಸುವರು. ಬಿದಿರಿನ ಬುಟ್ಟಿ- ಚಾಪೆಗಳನ್ನು ಮಾರುವವನು ಸಣ್ಣ ತೇರೊಂದನ್ನು ಹೊತ್ತಂತೆ ಭಾಸವಾಗುತ್ತದೆ. ಕೆಲವನ್ನು ಸೊಂಟಕ್ಕೂ ಬಿಗಿದುಕೊಂಡಿರುತ್ತಾರೆ. ಬಾಲ್ಯದಲ್ಲಿ ಚುರಮುರಿ (ಬೆಂಗಳೂರಿನ ಪುರಿ) ಚೀಲಗಳನ್ನು ಹೊರುವವ ಮಹಾಗಟ್ಟಿಗನಿರಬೇಕೆಂದುಕೊಳ್ಳುತ್ತಿದ್ದುದು ನೆನಪಾಯಿತು.

ಈ ಹೆಂಗಳೆಯರ ವೇಷಭೂಷಣ, ಆಭರಣ, ಅಲಂಕಾರಗಳ ವೈವಿಧ್ಯ ಮಹಿಳಾ ಕಾಲೇಜಿನ ಫ್ಯಾನ್ಸಿ ಡ್ರೆಸ್ ಸ್ಪರ್ಧೆಯಲ್ಲೂ ನೋಡಲು ಸಿಗದು! ರಸಿಕರನ್ನು, ಕಾಮುಕರನ್ನು ಆಕರ್ಷಿಸದೇ ತುಂಡು ಸೀರೆಯಲ್ಲಿ ನೆಲದ ಮೇಲೆ ಕೂಡ್ರುವದು ಅಸಾಧ್ಯ ಕೆಲಸವೆಂಬುದನ್ನು ಅನುಭವದಿಂದ ಅರಿತದ್ದರಿಂದ ತೀರ ಹಗುರಾದ ಕಾಲುಮಣೆಯನ್ನು ಹೆಚ್ಚಿನವರು ಹೊತ್ತಿದ್ದರು. ಕೆಲವರು ಸಿಂಬಿಗೆಯಂತೆ ತಲೆಯಮೇಲಿಟ್ಟುಕೊಂಡು ಗೋಪುರದಂತೆ ಅದರ ಮೇಲೆ ಸಾಮಾನುಗಳನ್ನು ಹೇರಿ ನಡೆದರೆ, ಇನ್ನೂ ಕೆಲವರು ಭಾರವಾದ ಸಾಮಾನುಗಳನ್ನು ಕೆಳಗೆ ಇಟ್ಟು ಕಾಲುಮಣೆ ಯನ್ನು ತುತ್ತತುದಿಯಲ್ಲಿ ತಿರುವುಮುರುವಾಗಿ ಇಟ್ಟುಕೊಂಡಿದ್ದರು. ಕೇಶಾಲಂಕಾರಗಳಲ್ಲಿ ಯಾರಿಗಾದರೂ ಡಾಕ್ಟರೇಟು ಮಾಡುವದಿದ್ದರೆ ಇಲ್ಲಿಗೆ ಬರಬೇಕು. ಎಡಮುಡಿ, ಬಲಮುಡಿ, ಮೇಲಮುಡಿ, ಕೃತಕಮುಡಿ, ಜಡೆಮುಡಿಗಳೆಲ್ಲ ಇಲ್ಲಿದ್ದವು. ಕೆಲವರು ಕೇಶರಾಶಿಯನ್ನೇ ಗಂಟುಹಾಕಿ ಬಿಗಿದುಕೊಂಡರೆ, ಹಲವರು ನಾರು, ರಿಬ್ಬನ್‌ಗಳಿಂದ ಸುತ್ತಿಕೊಂಡಿದ್ದರು. ಮುಳ್ಳು, ಪಿನ್ ವಿವಿಧ ತರದ ಹಣಿಗೆಗಳನ್ನು ಧಾರಾಳವಾಗಿ ಬಳಸಿದ್ದರು. ಸಿಕ್ಕವರು ದಾಸಾಳ ಮತ್ತು ಗೊಂಡೆ ಹೂಗಳನ್ನು ಮುಡಿದರೆ ಇನ್ನಿತರರು ಹಳದಿ, ಕೆಂಪು ರಿಬ್ಬನ್‌ಗಳನ್ನೇ ಹೂವಿನಾಕಾರದಲ್ಲಿ ಹೆಣೆದು ಅಲಂಕರಿಸಿಕೊಂಡಿದ್ದರು. ಕಿವಿಗೆ ಬೆಳ್ಳಿ, ಬಂಗಾರ, ಹಿತ್ತಾಳೆ, ಎಲ್ಯುಮಿನಿಯಂ ಇಲ್ಲವೇ ಮಣಿಗಳಿಂದ ತಯಾರಿಸಿದ ಲೋಲಾಕು, ಬೆಂಡೋಲೆ,

ಕುಚಕುಗಳನ್ನು ತೊಟ್ಟಿದ್ದರು. ಮೂಗುತಿಗಳನ್ನು ಎಡ, ಬಲ ಇಲ್ಲವೇ ಮೂಗಿನ ಮಧ್ಯೆ ಚುಚ್ಚಿಕೊಂಡಿದ್ದರು. ಅವುಗಳ ಸಂಖ್ಯೆ, ಸ್ಥಾನ, ಆಕಾರಗಳೆಲ್ಲ ಆದಿವಾಸಿಗಳ ವಿವಿಧ ಬಣಗಳ ವರ್ಗೀಕರಣಕ್ಕೆ ಸುಲಭ ಉಪಾಯವಂತೆ !

ಕೈಯ ಬಳೆಗಳಂತೆ ಕಾಲಿನ ಕಡಗಗಳನ್ನು ಬೆಳ್ಳಿಯಲ್ಲಿ ಮಾಡುವದೇ ರೂಢಿ. ಆದರೆ ಬೆಳ್ಳಿಯ ಬೆಲೆ ಗಗನಕ್ಕೆ ಏರಿದ್ದರಿಂದ ಎಲ್ಯೂಮಿನಿಯಂ ಬಳಸುವದು ಸರ್ವಸಾಮಾನ್ಯವಾಗಿದೆ. ಅವುಗಳ ಆಕಾರ, ಭಾರ, ರಚನೆ, ಕುಸುರಿ ಕೆಲಸದ ವೈವಿಧ್ಯಗಳನ್ನು ನೋಡಿದಾಗಲೇ ಅರಿವಾಗಬೇಕು. ಸಾಧಾರಣವಾಗಿ ಎಲ್ಲರೂ ಹಸಿರು, ನೀಲಿ, ಗುಲಾಬಿ, ಕೆಂಪು ಬಣ್ಣದ ತುಂಡು ಸೀರೆಗಳನ್ನು ಉಡುತ್ತಾರೆ. ಆದರೆ ಒಂದು ವರ್ಗದ ಆದಿವಾಸಿಗಳು ಮಾತ್ರ ಶ್ವೇತವರ್ಣದ ಬೆಲೆಬಾಳುವ ಆದರೆ ಇತರರಂತೆ ಕಿರಿಯಗಲದ ಸೀರೆಗಳನ್ನೇ ಉಟ್ಟಿದ್ದರು. ಅವನ್ನು ಧರಿಸಿದವರು ಧನಿಕರೆಂದು ಅರಿವಾಗುವಂತಿತ್ತು. ರವಿಕೆಯನ್ನು ಧರಿಸುವ ಪರಿಪಾಠವಿರಲಿಲ್ಲ. ಪಟ್ಟಣದವರ ಕ್ಷ-ಕಿರಣದ ಕಾಮುಕ ಕಣ್ಣುಗಳಿಂದ ರಕ್ಷಿಸಿಕೊಳ್ಳಲು ಕೆಲವರು, ಮೇಲಿನಿಂದ ಟಾವೆಲ್ ಹೊದ್ದಿದ್ದರು. ಆದರೆ ಬಹುಸಂಖ್ಯಾತರು ಕಿರಿ ಸೆರಗಿನ ಆಶ್ರಯ ಪಡೆದಿದ್ದರು. ಆದಿವಾಸಿಗಳಲ್ಲಿ ವಕ್ಷಸ್ಥಳ ಕಾಮಾಂಗವಲ್ಲ. ಆದ್ದರಿಂದಲೋ ಏನೋ ಉಬ್ಬಿದೆ, ಸೆರಗಿನ ಆಶ್ರಯ ಪಡೆಯಲು ನಿರಾಕರಿಸಿ, ಬಿಚ್ಚು ಹೆಡೆಯ ನಾಗನಂತೆ ಆಕರ್ಷಣೆಯ ಕೇಂದ್ರವಾಗಿ ಬಿಡುತ್ತದೆ. ಕುಂಕುಮ ಧರಿಸುವ ಪರಿಪಾಠವಿಲ್ಲ. ಆದರೆ ಮೈತುಂಬ ಹಚ್ಚೆ, ಕೃಷ್ಣವರ್ಣೀಯರಲ್ಲಿ ಹಚ್ಚೆಯ ನಕ್ಷೆ ಸ್ಫುಟವಾಗಿರದಿದ್ದರೂ ತಿಳಿಚರ್ಮದವರ ಮೈಮೇಲಿ ರಂಗೋಲಿ ಹಾಕಿದಂತೆ ಅನಿಸುತ್ತದೆ. ಬಹುಸಂಖ್ಯಾತರು ಕೆನ್ನೆ, ಕಂಠ, ತೋಳುಗಳ ಮೇಲೆ ಹಾಕಿಸಿಕೊಂಡರೂ ಕೆಲವರಾದರೂ ಸ್ತನ, ತೊಡೆಗಳಿಗೂ ಹೆಚ್ಚೆಗೆ ಆಶ್ರಯ ಕೊಟ್ಟಿದ್ದರು. ಸಕಲರೂ ಬರಿಗಾಲಿನಿಂದ ನಡೆಯುವದೇ ರೂಢಿ.

ಸಣ್ಣ ಊರು, ಹಳ್ಳಿಗಳಲ್ಲಿಯೂ ಸಂತೆಗಾಗಿ ಪ್ರತ್ಯೇಕ ಸ್ಥಳ ಕಾದಿರಿಸಿದರೂ, ಜಗದಲಪುರದಲ್ಲಿ ಊರ ಮಧ್ಯದಲ್ಲಿಯೇ ಅದು ಕಂಡಿತು. ತೀರ ವಿರುದ್ಧ ಆಚಾರ, ವಿಚಾರ, ವೇಷಭೂಷಣ, ಸಂಸ್ಕೃತಿಗಳ ಮಿಶ್ರಣದಿಂದಾಗಿ ಆ ಜನಸಮೂಹ ವಿರೋಧಾಭಾಸಗಳ ಕಂತೆಯಾಗಿತ್ತು. ನಿರಾಶ್ರಿತರಾಗಿ ಇಲ್ಲಿ ಬಂದು, ಬಲಿತು ಈಗ ಅಧಿಕಾರ ಚಲಾಯಿಸುವ ಹಂಬಲದಲ್ಲಿದ್ದ ಬಂಗಾಲಿ, ನಾಲಿಗೆಯ ಅಡಿಯಲ್ಲಿ ಹುಡಿ ತಂಬಾಕು ಸೇವಿಸಿ ಲಾಲಾರಸದಿಂದ ಬಾಯಿ ತುಂಬಿಸಿಕೊಂಡ ಬಿಹಾರಿ, ಏಕಪ್ರಕಾರವಾಗಿ ವೀಳ್ಯ ಜಗಿಯುತ್ತಿರುವ ಛತ್ತಿಸಗಡಿ, ಭೋಪಾಲದಲ್ಲಿ ಬೇಳೆ ಬೇಯಿಸಿಕೊಳ್ಳಲಾಗದೇ ಇಲ್ಲಿಗೆ ಬಂದ ಪೊಲೀಸ್ ಅಧಿಕಾರಿ, ಕಚೇರಿಗಳಲ್ಲಿ ಕೆಲಸ ಮಾಡುವ ಕಾರಕೂನರು, ಸ್ಥಳೀಯ ವರ್ತಕರು, ರಕ್ಷಣೆಯ ನೆವದಲ್ಲಿ ಗಸ್ತು ಹೊಡೆಯುವ ಪೊಲೀಸರು, ಕೆಲಸವಿಲ್ಲದೆ ಅಲೆಯುವ ಪೋಲಿಗಳೆಲ್ಲರೂ ಇದ್ದರು. ವಿದೇಶಗಳ ಪ್ರವಾಸಿಗಳು ಮಾತ್ರ ಎಲ್ಲೂ ಇರದ್ದರಿಂದ ಈ ಕ್ಯಾಮರಾಧಾರಿ, ಮೇಲಧಿಕಾರಿಗಳ ಲಕ್ಷ್ಯ ಸೆಳೆದಿರಬೇಕು. ಒಬ್ಬ ಪೊಲೀಸನನ್ನು ಕಳಿಸಿ, ಬಂದಿರುವ ಉದ್ದೇಶ ಕೇಳಿಕೊಂಡು ಬರಲು ತಿಳಿಸಿದ. ಪುಸ್ತಕಕ್ಕಾಗಿ ಮಾಹಿತಿ ಸಂಗ್ರಹಣೆ ಮುಖ್ಯ ಉದ್ದೇಶ, ಎಂದು ಉತ್ತರಿಸಿದರೂ ಅಧಿಕಾರಿಗೆ ತೃಪ್ತಿಯಾಗಲಿಲ್ಲವೆಂದು ತೋರುತ್ತದೆ. ಕೃತಿಯ ಹೆಸರನ್ನೂ ಕೇಳಿಕೊಂಡು ಬರಲು ಓಡಿಸಿದ. ''ಮಧ್ಯಪ್ರದೇಶದ ಮೂಲ ಬುಡಕಟ್ಟಿನ ಜನಾಂಗದವರ ದೈನಂದಿನ, ಸಾಮಾಜಿಕ ಮತ್ತು ಆರ್ಥಿಕ ಜೀವನದ ವಿವರವಾದ ಅಧ್ಯಯನ'' ಎಂದು ಇಂಗ್ಲಿಷಿನಲ್ಲಿ ನಾಮ ಸೂಚಿಸಿದಾಗ ಅದರ ಅರ್ಥವಾಗದಿದ್ದರೂ ತೃಪ್ತಿಯಾಗಿರಬೇಕು. ಅಂತೆಯೇ ನಂತರದ ದಿನಗಳಲ್ಲಿ ಪೂರ್ಣ ಸಹಕಾರ ಮತ್ತು ಸಹಾನುಭೂತಿಗಳು ಸಿಕ್ಕವು !

ಹಿಂದೊಮ್ಮೆ ಅಲೆಮಾರಿ ಜನಾಂಗವಾದ ಮೊಗಲಾಯರ ತಂಡದವರು ಸಣ್ಣ ಊರು, ಹಳ್ಳಿಗಳಲ್ಲಿ ಸುತ್ತಾಡುತ್ತಿದ್ದರು. ಚಾಕು, ಚಶ್ಮಾಗಳನ್ನು ರಸ್ತೆ ಅಂಚಿನಲ್ಲಿ ಮಾರಾಟ ಮಾಡುವದು ಅವರ ವೃತ್ತಿಯಾಗಿದ್ದರೂ ಬೀಡು ಬಿಟ್ಟ ಸ್ಥಳದಲ್ಲಿ, ಕಳವು, ಸುಲಿಗೆ, ಕೆಲವೊಮ್ಮೆ ಕೊಲೆಯಾಗುವದು ಅನುಭವದ ಮಾತು. ಮೊಗಲಾಯಿ ಹೆಂಗಳೆಯರು ರೂಪವತಿಯರು, ಅಂಗಾಂಗಗಳು ಕಟೆದಂತಿದ್ದು, ದೇಹ ಸೌಷ್ಠವ ಎದ್ದುಕಾಣುವಂತಿರುತ್ತಿತ್ತು. ಅಂಥ ರೂಪವತಿಯರನ್ನು ಆ ನಂತರ ಕಂಡದ್ದು ಕಾಶ್ಮೀರದಲ್ಲಿ. ಬಸ್ತರದಲ್ಲೂ ಇವರಷ್ಟೇ ಸುಂದರಿಯರಾದ ''ಸೊಂಡಿ'' ಹೆಂಗಳೆಯರು ಸಂತೆಯಲ್ಲಿ ಸಣ್ಣಪುಟ್ಟ ಸಾಮಾನು ಮಾರುವದರಲ್ಲಿ ಮೈಮರೆತಿದ್ದರು. ಅವರ ವಂಶಜರೆಲ್ಲ ತಾಳೆಸೆರೆಯನ್ನು ಇಳಿಸುವ ವೃತ್ತಿಯನ್ನು ಕೈಗೊಂಡು ತುಂಬ ಧನ ಸಂಪಾದಿಸುತ್ತಾರೆ. ಕೇವಲ ಮೀನು ಮಾರಿ ಆಗರ್ಭ ಶ್ರೀಮಂತರಾದ ಕೋಳಿ ಜನರು ಮುಂಬಯಿಯಲ್ಲಿ ಇದ್ದಾರೆ. ಸೊಂಡಿಯರಂತೆ ಅವರು ಸುಂದರಿಯರಲ್ಲದಿದ್ದರೂ ತುಂಬ ಆಕರ್ಷಕರಾಗಿರುತ್ತಾರೆ. ಸೊಂಡಿ ಅಂಗನೆಯರು ಶುದ್ಧ ಬಂಗಾರದಿಂದ ಮಾಡಿದ ಕಿವಿ, ಕೊರಳು, ಕೈಗಳಿಗೆ ಆಭರಣಗಳನ್ನು ತೊಡುವದರಿಂದ ಇನ್ನಷ್ಟು ಆಕರ್ಷಕವಾಗಿ ತೋರುತ್ತಾರೆ. ಇವರು ಆದಿವಾಸಿಗಳಲ್ಲದಿದ್ದರೂ ಅವರ ನೆರೆಕೆರೆಯಲ್ಲಿ ವಾಸಿಸುವದರಿಂದ ಆಚಾರ- ವಿಚಾರ, ಉಡಿಗೆ-ತೊಡಿಗೆ ಅವರಂತೆಯೇ. ಆದ್ದರಿಂದ ಕ್ಯಾಮರಾ ಕಂಡು ಕಂಗಾಲಾಗಬಹುದು, ಎಂದುಕೊಂಡರೆ ತದ್ವಿರುದ್ಧ! ಹಣ ಎಣಿಸುತ್ತ ಕುಳಿತಿದ್ದವಳಿಗೆ, ಗೆಳತಿಯು, ''ಆ ಬಾಬೂಜಿ ನಿನ್ನ ಭಾವಚಿತ್ರ ತೆಗೆದ'' ಎಂದು ಸಾರಿದಾಗ, ಅವಳು ಸ್ವಾಗತದ ನಗೆ ಬೀರುತ್ತ, ''ಹೋಗಲಿ ಪಾನ್ (ತಾಂಬೂಲ) ತಿನ್ನಿಸು'' ಎಂದಳು. ಪತ್ನಿಗೂ ಎಂದೂ ಪಾನ್ ತಿನ್ನಿಸದವನಿಂದ, ಅಪರಿಚಿತಳೊಬ್ಬಳು ಆ ಸೇವೆ ಬಯಸಿದಾಗ ಗಾಬರಿಯಾಯಿತು. ಕೇವಲ ವೇಶ್ಯಾವಾಟಿಕೆಗಳಲ್ಲಿ ಇಂಥ ಸೇವೆಗೆ ಸ್ವಾಗತವಿದೆ ಎಂದುಕೊಂಡವನಿಗೆ ಈ ಬೇಡಿಕೆ ಅರ್ಥವಾಗಲಿಲ್ಲ, ಇದೊಂದು ಕೃತಜ್ಞತಾಭಾವ ಸೂಚಿಸುವ ವಿಧಾನ ಮಾತ್ರ ಎಂದು ಅರಿವಾದಾಗ, ಬಕ್ಷೀಸ್ ಹಣದಿಂದ ಅಲ್ಲಿರುವ ರಂಭೆಯರು ವೀಳ್ಯ ಜಗಿದು, ಕೆಂದುಟಗಳನ್ನು ಇನ್ನಷ್ಟು ಕೆಂಪು ಮಾಡಿಕೊಂಡರು. ಅನಂತರ ಎಷ್ಟು ಛಾಯಾಗ್ರಹಣ ಮಾಡಿದರೂ ಅವರು ಆಕ್ಷೇಪಿಸಲೇ ಇಲ್ಲ. ಊರ ಹುಡುಗಿಯರು ಇದೇ ಮನೋಭಾವ ತಳೆದಿದ್ದರೆ... ಎನಿಸಿತು.

ಸರ್ಕಸ್ಸಿನ ರಿಂಗ್ ಮಾಸ್ಟರ್‌ನಂತಹ ಆಕರ್ಷಕ ಪೋಷಾಕು ಧರಿಸಿ, ಕೋಟಿಗೆ ನೋಟುಗಳನ್ನು ತಗುಲಿಸಿ, ತಮಟೆಯಂತಹ ಚರ್ಮದ ವಾದ್ಯ ನುಡಿಸುತ್ತ, ಹಾಡುತ್ತ, ಕುಣಿಯುತ್ತಾ ಹೊರಟವನಿಗೆ ಎಲ್ಲರೂ ಕಾಣಿಕೆ ಕೊಟ್ಟರು. ಕೆಲವರು ತಮ್ಮ ಒಂದು ನೋಟನ್ನು ಆತನ ಕೋಟಿಗೆ ಜೋಡಿಸಿದರು. ದೂರದ ಊರಿನಲ್ಲಿ ಹಣದ ಅಭಾವವೆನಿಸಿದಾಗ ಹೀಗೆ ಮಾಡಿದರೆ ಹೇಗಿರುತ್ತದೆ ? ಎಂಬ ವಿಚಾರ ಮಿಂಚಿಹೋಯಿತು. ಇನ್ನೊಂದೆಡೆ ಜನರು ಮುತ್ತಿಕೊಂಡದ್ದನ್ನು ನೋಡಿ, ಏನೋ ಹಾವಾಡಿಗ ಅಥವಾ ಜಾದುಗಾರನಿರಬೇಕೆಂದು ಕೊಂಡರೆ, ಅಲ್ಲಿ ಕಾಡಿನ ಯುವತಿಯರಿಬ್ಬರು ಅರಿಯದ ಹಣ್ಣುಗಳನ್ನು ಹತ್ತು ಪೈಸೆಗೆ ಗುಡ್ಡೆಯಂತೆ ಮಾರುತ್ತಿದ್ದರು. ಜನ ಸೇರಿದ್ದು ಹಣ್ಣಿನ ರುಚಿ ಸವಿಯಲೋ ಅಥವಾ ಹರೆಯದ ಹೆಣ್ಣುಗಳ ದರ್ಶನ ಪಡೆಯಲೆಂದೋ ಎಂಬುದು ತಿಳಿಯದೇ ಮುಂದುವರಿದದ್ದಾಯಿತು. ಜನಜಂಗುಳಿ, ಛಾಯಾಗ್ರಹಣಕ್ಕೆ ಆತಂಕವಷ್ಟೇ ಅಲ್ಲ, ಕ್ಯಾಮರಾದ ಸುರಕ್ಷತೆಗೂ ಸಂಚಕಾರ ! ಎಂದು ತಿಳಿಯಲು ಬಹಳ ಕಾಲ ಹಿಡಿಯಲಿಲ್ಲ, ಅಂಥ ಸನ್ನಿವೇಶದಿಂದ ದೂರ ಇರುವದು ಜಾಣತನ. ಅಂತೆಯೇ ಹಣ್ಣುಗಳೆಲ್ಲ ಮುಗಿದು ಜನಗಳೆಲ್ಲ ಚದುರಿ, ಹೆಂಗಳೆಯರು ಹೊರಡುವದರಲ್ಲಿದ್ದಾಗ, ನಿರಾತಂಕವಾಗಿ ಛಾಯಾಗ್ರಹಣ ಮಾಡುವಂತೆ ಆಯಿತು.

ದೂರದೂರದ ಹಳ್ಳಿಗಳಿಂದ ಬಂದ ಆದಿವಾಸಿಗಳು ತಂತಮ್ಮ ಸರಕುಗಳನ್ನು ಮಾರಿ ಬಂದ ಹಣದಿಂದ ಉಪ್ಪು, ಎಣ್ಣೆ, ಬೆಲ್ಲ, ಖಾರಗಳಂತಹ ಸಾಮಗ್ರಿಗಳೊಂದಿಗೆ ಮಕ್ಕಳಿಗಾಗಿ ಅಗ್ಗದ ಮಿಠಾಯಿ, ಕಡ್ಲೆಪುರಿ, ಸಿಹಿಗೆಣಸು, ಖರೀದಿಸಿ ಹಿಂದಿರುಗುವ ತವಕದಲ್ಲಿರುತ್ತಾರೆ. ಇದರ ಲಾಭ ಪಡೆದು ವ್ಯಾಪಾರಿಗಳು ಅವರು ತಂದ ಸಾಸಿವೆ, ಎಣ್ಣೆಕಾಳು, ಬೀಡಿಯೆಲೆ, ಕಾಡಿನ ಇತರ ಸಾಮಗ್ರಿಗಳನ್ನು ತೀರ ಕಡಿಮೆ ಬೆಲೆಗೆ ಕೊಂಡು, ತಮ್ಮವನ್ನು ಹೆಚ್ಚಿನ ಬೆಲೆಗೆ ಮಾರಿ ಲಾಭ ಮಾಡಿಕೊಳ್ಳುತ್ತಾರೆ. ಆದಿವಾಸಿಗಳ ದಿನದ ಹೆಚ್ಚಿನ ಭಾಗ, ನಡೆಯುವದರಲ್ಲಿ ಕಳೆದು, ಮೂವತ್ತು, ನಲವತ್ತು ರೂಪಾಯಿ ಬೆಲೆಬಾಳುವ ಸಾಮಗ್ರಿಗಳನ್ನು ಐದೇ ರೂಪಾಯಿಗೆ ಮಾರಿ, ಕೇವಲ ಐವತ್ತು ಪೈಸೆಯ ಉಪ್ಪು ಮುಂತಾದ್ದಕ್ಕೆ ಆ ಐದು ರೂಪಾಯಿ ತೆತ್ತು, ಮನೆಗೆ ಹಿಂತಿರುಗುವಂತಾದರೆ, ಅದೆಂತಹ ಅನ್ಯಾಯ! ಬಡವರ ಶೋಷಣೆಯೇ ನಾಗರಿಕತೆಯ ಹೆಗ್ಗುರುತೇ? ಎಂದು ಕಳವಳವಾಯಿತು.

# 7. ಅರಸನಿಲ್ಲದ ಅರಮನೆ



'ಮೋತಿಮಹಲ್' ಎಂದೊಡನೆ ಮೈಸೂರು, ಜೈಪುರಗಳ ಲಲಿತಮಹಲ್, ಚಂದ್ರಮಹಲ್‌ಗಳ ಭವ್ಯ ಅರಮನೆಗಳು ಕಣ್ಣಿಗೆ ಕಟ್ಟಿದವು. ಆದರೆ ಜಗದಲಪುರದಲ್ಲಿ ಊರ ಮಧ್ಯದಲ್ಲೇ ಇರುವ ಈ ಅರಮನೆ ಕಣ್ಣೀರು ಸುರಿಸುತ್ತ ಬಿಕೋ ಎಂದು ನಿಂತಿತ್ತು. ಹೆಬ್ಬಾಗಿಲನ್ನು ಹಾಯ್ದು ಒಳಗೆ ಹೊಕ್ಕರೂ ತಡೆದು ನಿಲ್ಲಿಸುವವರು ಯಾರೂ ಇರಲಿಲ್ಲ. ಅಂತೆಯೇ ದನಕರುಗಳು, ಕತ್ತೆಗಳು ಪಾಳು ಬಿದ್ದ ಹೂದೋಟದಲ್ಲಿ ಹಾಯಾಗಿ ಮೇಯುತ್ತಿದ್ದವು. ಗುಲಾಬಿ, ಮಲ್ಲಿಗೆ, ಸೇವಂತಿಗೆಗಳು ವಿರಾಜಿಸಬೇಕಾಗಿದ್ದಲ್ಲಿ ಮುಳ್ಳು, ಕಾಡು ಗಿಡ-ಗಂಟೆಗಳು ಯಥೇಚ್ಛವಾಗಿ ಬೆಳೆದುನಿಂತಿದ್ದವು. ದೂರದ ಮರದಲ್ಲಿ ಕುಳಿತ ಪಕ್ಷಿಗಳು ಗೋಣು ಅತ್ತಿತ್ತ ತಿರುಗಿಸಿ, ''ಪಾಪ ! ಎಂಥ ಸ್ಥಿತಿ ಬಂತು ರಾಜವಾಡೆಗೆ'' ಎಂದುಕೊಂಡಂತೆ ಕೂಜನವಿಲ್ಲದೇ ಹಾರಿಹೋದವು. ಕುಕ್ಕುಟ ಸಂಸಾರ ಮಾತ್ರ ಅರಸನಿದ್ದರೇನು ? ಇಲ್ಲದಿದ್ದರೇನು ? ತಮಗೆ ಹುಳ ಹುಪ್ಪಡಿ ಆರಿಸುವ ಕೆಲಸ ತಪ್ಪಿದ್ದಲ್ಲವೆಂದು ಮುಂದುವರೆಸಿದವು. ಕತ್ತೆ ಮರಿಯೊಂದು, ''ತನ್ನ ಮುತ್ತಾತನಿಗೆ, ದರವಾನನು ಅರಮನೆಯ ಆವಾರದಲ್ಲಿ ಬರಲು ಬಿಡದ್ದರಿಂದ ಆತನ

ಶಾಪದಿಂದ ಅರಸನ ಗತಿ ಹೀಗಾಯಿತು'' ಎಂದು ಮೆಲುಧ್ವನಿಯಲ್ಲಿ ತನ್ನ ಗೆಳತಿಗೆ ಅರುಹಿ, ಹೊಯ್‌ಕೊ ! ಹೊಯ್‌ಕೊ ! ಎಂದು ಮೋತಿಮಹಲಿನ ಒಂದು ಪ್ರದಕ್ಷಿಣೆ ಹಾಕಿ ಬಂದಿತು. ಕೋತಿಗಳ ಪಡೆ, ಊರವರಿಂದ ಕಲ್ಲು ಹೊಡೆಸಿಕೊಳ್ಳುವದಕ್ಕಿಂತ ಇಲ್ಲಿ ಯಾವ ಗೊಂದಲವೂ ಇಲ್ಲವೆಂದು ಅರಮನೆಯ ಆವಾರದಲ್ಲಿಯೇ ಬೀಡುಬಿಟ್ಟಿದ್ದವು.

ಆದಿವಾಸಿಗಳ ಆದಿಯಂತೆ ಬಸ್ತರ ಅರಸರ ಪೂರ್ವಜರ ಬಗ್ಗೆ ದಂತಕಥೆಗಳಿಗೇನೂ ಬರಗಾಲವಿಲ್ಲ. ಸೂರ್ಯನಿಂದ ಹುಟ್ಟು ಪಡೆದದ್ದರಿಂದ ಸೂರ್ಯವಂಶಿಗಳು ಎಂದು ಒಬ್ಬಾತ ಸಾರಿದರೆ, ಇನ್ನೊಬ್ಬಾತ ಹಸ್ತಿನಾಪುರದ ಪಾಂಡವರ ವಂಶಜರೆಂದು ಹೇಳಿಕೊಂಡು ಅಭಿಮಾನ ಪಟ್ಟ. ಮಹಾಭಾರತ ಯುದ್ಧದಂತಹ ಮಹಾಕಾಳಗದಲ್ಲಿ ಪಾಂಡವರ ಪರವಾಗಿ ಹೋರಾಡಿದ ಅರಸನ ಗರ್ಭವತಿ ರಾಣಿಯೊಬ್ಬಳನ್ನು ಬಿಟ್ಟು ಉಳಿದವರೆಲ್ಲ ವೀರಸ್ವರ್ಗ ಸೇರಿದ್ದರಂತೆ ! ತಮ್ಮ ವಂಶ ನಿರ್ನಾಮವಾದೀತೆಂದು ಅಳುಕಿದ ರಾಣಿ ಹುಟ್ಟಿದ ಮಗನನ್ನು ಬಡಬ್ರಾಹ್ಮಣನೊಬ್ಬನ ಮನೆಯಲ್ಲಿ ಬೆಳೆಯಿಸಲಾರಂಭಿಸಿದಳು. ಇವನು ಮುಂದೆ ಅರಸನಾಗಲಿದ್ದಾನೆ ಎಂದು ಅರಿತ ಅನಾಮಧೇಯ ಒಬ್ಬ ಕುವರಿಯ ರೂಪದಲ್ಲಿ ಅದೇ ಊರಲ್ಲಿ ಜನಿಸಿ ರಾಜಕುವರನೊಡನೆ ಸ್ನೇಹ ಬೆಳೆಸಿದನಂತೆ. ಹತ್ತೊಂಬತ್ತನೇ ವರ್ಷದಲ್ಲಿ ಆತ ಸೈನ್ಯಕಟ್ಟಿ ದಿಗ್ವಿಜಯಕ್ಕೆ ಹೊರಟು ನಿಂತಾಗ, ಗೆಳತಿಯೂ ಜೊತೆಗೆ ಹೊರಟಳು. ಸಣ್ಣಪುಟ್ಟ ಆದಿವಾಸಿಗಳ ರಾಜ್ಯಗಳನ್ನು ಅರಸು ಕುಮಾರ ಗೆದ್ದ ನಂತರ, ಕುಮಾರಿ ತಾನು ಆತ ಗೆದ್ದ ಪ್ರದೇಶವನ್ನೆಲ್ಲ ಅಳೆಯುತ್ತ ಹಿಂದಿನಿಂದ ಬರುತ್ತೇನೆ, ಆದರೆ ಆತ ಮಾತ್ರ ತನ್ನನ್ನು ಶಂಕಿಸಿ ಹಿಂತಿರುಗಿ ನೋಡಬಾರದೆಂದು ಎಚ್ಚರಿಸಿ ಕೆಲಸವನ್ನು ಪ್ರಾರಂಭಿಸಿದಳಂತೆ. ಆದರೆ ದಂತೆವಾಡಾದ ಹತ್ತಿರ ನದಿಯ ತೀರದ ಮಳಲಲ್ಲಿ ಅವಳ ಕಾಲು ಹುಗಿದುಹೋಗಿದ್ದರಿಂದ ಅವಳ ಗೆಜ್ಜೆಯ ಸದ್ದು ನಿಂತಿತು. ರಾಜ ತಿರುಗಿ ನೋಡಿದ. ಅವಳು ಅಲ್ಲಿಯೇ ಶಿಲೆಯಾಗಿ ನಿಂತಳಂತೆ ! ಇಂದಿಗೂ ಅಲ್ಲಿರುವ ಶಿಲಾಮೂರ್ತಿ ಅವಳದೇ ಎಂದು ಜನ ತೋರಿಸುತ್ತಾರೆ. ಆದರೆ ಭಾರತೀಯ ಶಿಲ್ಪಶಾಸ್ತ್ರದ ಬಗ್ಗೆ ಕಿಂಚಿತ್ತಾದರೂ ಆಸಕ್ತಿ ಇರುವವನು ಆ ಮಾತಿನಲ್ಲಿ ಸತ್ಯವಿಲ್ಲವೆಂದು ಕೂಡಲೇ ನಿರ್ಧಾರಕ್ಕೆ ಬಂದುಬಿಡಬಹುದು.

ಅರಮನೆಯ ಗೋಡೆಯಲ್ಲಿ ಸ್ಥಾನೀಯ ಹಿಂದಿಯಲ್ಲಿ ಬರೆದ ಎರಡು ಶಿಲಾಶಾಸನಗಳಿಂದಾಗಿ ಮತ್ತು ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಬಸ್ತರದ ಈ ಅರಸು ಮನೆತನದ ಇತಿಹಾಸ ಇಪ್ಪತ್ತನೇ ಶತಕದ್ದು ಎಂದು ಅರಿಯುವಂತೆ ಆಯಿತು. ರಾಜಮನೆತನ ಹಳೆಯದೇ. ವರಂಗಲ್ ಕಾಕತೀಯ ವಂಶಜನೊಬ್ಬ ಇಲ್ಲಿ ಬಂದು ಸ್ಥಳೀಯ ನಾಗವಂಶದ ಚಿಕ್ಕಪುಟ್ಟ ಆದಿವಾಸಿ ನಾಯಕರನ್ನು ಸೋಲಿಸಿ ತನ್ನ ರಾಜ್ಯ ಸ್ಥಾಪಿಸಿದ. ರುದ್ರ ಪ್ರತಾಪ ಭಾಂಜದೇವನು 1908ರಲ್ಲಿ ಗದ್ದುಗೆ ಏರಿದರೂ ಪ್ರಜೆಗಳು ಅಸಮಾಧಾನದಿಂದ ಬಂಡೆದ್ದರು. ಆತನ ಮಗಳು ಪ್ರಫುಲ್ಲಕುಮಾರಿ ರಾಜ್ಯಾಡಳಿತ ವಹಿಸಿಕೊಂಡು 1936ರವರೆಗೆ ದಕ್ಷ ರೀತಿಯಿಂದ ಪ್ರಜೆಗಳನ್ನು ನಡೆಸಿಕೊಂಡಳು. ಆದರೆ ನಂತರ 1947ರ ತನಕ ಬಂದ ಕೆಲ ಅರಸರು ಅಯೋಗ್ಯರಾಗಿದ್ದರಿಂದ ಕೇವಲ ಹದಿನೆಂಟು ವರ್ಷ ಹರೆಯದ ಪ್ರವೀಣಚಂದ್ರ ಭಾಂಜದೇವನಿಗೆ ಪಟ್ಟಾಭಿಷೇಕ ಮಾಡಿಸಿದರು. ಪ್ರವೀಣಚಂದ್ರ ಕುಶಾಗ್ರಮತಿಯಿದ್ದಂತೆ ಪ್ರಜೆಗಳ ಬಗ್ಗೆ ಹೆಚ್ಚಿನ ವಾತ್ಸಲ್ಯ ತಾಳಿದ್ದ. ಅಲ್ಪಾವಧಿಯಲ್ಲೇ ಆದಿವಾಸಿಗಳ ಹೃದಯ ಗೆದ್ದುಕೊಂಡ. ದೈವಭಕ್ತಿಯಿಂದಾಗಿ, ಅರಸನಿಗಿಂತ ಹೆಚ್ಚಾಗಿ ಧರ್ಮಗುರು ಅನಿಸಿಕೊಂಡ. ದಂತೇಶ್ವರಿಮಾತೆ ಅರಸನ ಮುಖಾಂತರವಾಗಿ ತಮ್ಮೆಲ್ಲರ ಕಲ್ಯಾಣ ನೋಡಿಕೊಳ್ಳುತ್ತಾಳೆ ಎಂದು ಅವರೆಲ್ಲ ದೃಢವಾಗಿ ನಂಬುವಂತಾಯಿತು. ಕೇವಲ ಹದಿಮೂರು ವರ್ಷಗಳ ಆಳ್ವಿಕೆಯಲ್ಲಿ ಸ್ವತಂತ್ರ ಭಾರತದಲ್ಲಿ, ಈ ಪ್ರಭು ವರ್ಚಸ್ವಿ ಮುಖಂಡನೆಂದು ಹೆಸರು ಗಳಿಸಿದ. ಇದರಿಂದಾಗಿ ಕೇಂದ್ರ

ಮತ್ತು ರಾಜ್ಯದ ರಾಜಕಾರಣಿಗಳು ಬಸ್ತರದಿಂದ ಆರಿಸಿಬರಲು ಅವನ ಆಶ್ರಯ ಪಡೆಯದೇ ಬೇರೆ ಮಾರ್ಗವಿರಲಿಲ್ಲ. ಆದರೆ ಆದಿವಾಸಿ ಅರಸನ ಪ್ರಭಾವಕ್ಕೆ ಒಳಪಡುವದು ಜನನಾಯಕರೆನಿಸಿಕೊಂಡವರಿಗೆ ಅವಮಾನವಲ್ಲವೇ ?

ಹಿಂದೆ ಮರಾಠರ ಅಧೀನಕ್ಕೆ ಒಳಪಟ್ಟ ಪ್ರದೇಶ, ಅನಂತರ ಬ್ರಿಟಿಷರ ವರ್ಚಸ್ಸಿಗೆ ಒಳಪಟ್ಟಿತು. 1948ರಲ್ಲಿ ಬಸ್ತರ ಜಿಲ್ಲೆಯನ್ನು ಮಧ್ಯಪ್ರದೇಶದಲ್ಲಿ ಸಮಾವೇಶಗೊಳಿಸಲಾಯಿತು. ಇದರ ಕ್ಷೇತ್ರಫಲ 45 ಸಾವಿರ ಚೌರಸ ಕಿಲೋಮೀಟರ್‌ಗಳಿದ್ದು, ಕೇರಳ ರಾಜ್ಯಕ್ಕಿಂತ ಇದು ವಿಸ್ತಾರವಾಗಿದೆ! ಆದರೆ ಜನಸಂಖ್ಯೆ ಮಾತ್ರ ಕೇವಲ 14 ಲಕ್ಷ. ಹೀಗಾಗಿ ಭಾರತದಲ್ಲೇ ಅತಿ ವಿರಳ ಜನವಸತಿಯ ಪ್ರದೇಶವೆನಿಸಿಕೊಂಡಿದೆ. ರಾಜಧಾನಿ ಜಗದಲಪುರದ ಜನವಸತಿ ಕೂಡ ನಾಲವತ್ತು ಸಾವಿರ ಮಾತ್ರ. ಜನವಸತಿಯ ನೂರಕ್ಕೆ ಎಂಬತ್ತರಷ್ಟು ಆದಿವಾಸಿಗಳೇ ಇದ್ದುದರಿಂದ ಪ್ರವೀಣಚಂದ್ರನ ವರ್ಚಸ್ಸಿನ ಕಲ್ಪನೆ ಬರುವಂತೆ ಇದೆ. ಆ ವರ್ಚಸ್ಸನ್ನು ಕುಗ್ಗಿಸಲು ಅರಸನ ಮೇಲೆ ಸಲ್ಲದ ಆಪಾದನೆ ಮಾಡಿ, ಪದಚ್ಯುತಗೊಳಿಸಿ, ಪಟ್ಟಭದ್ರರ ನಿರ್ಧಾರಗಳಿಗೆ ಸೈಗುಟ್ಟುವ, ಅರಸನ ತಮ್ಮ ವಿಜಯಚಂದ್ರ ಭಾಂಜದೇವನಿಗೆ ಜನವರಿ 1969ರಂದು ಪಟ್ಟದ ಮೇಲೆ ಕೂಡ್ರಿಸಿದರು. ಇದರಿಂದ ರೊಚ್ಚಿಗೆದ್ದ ಆದಿವಾಸಿ ಪ್ರಜೆಗಳು ಹುಯಿಲೆಬ್ಬಿಸಿದಾಗ, ಸರಕಾರವು ಇದಕ್ಕೆಲ್ಲ ಪ್ರವೀಣಚಂದ್ರನೇ ಕಾರಣಕರ್ತನೆಂದು ನಿರ್ಧರಿಸಿ ಬಂಧನದಲ್ಲಿಟ್ಟಿತು. ಇದರಿಂದ ಪರಿಸ್ಥಿತಿ ವಿಕೋಪಕ್ಕೆ ಹೋಗಿದ್ದರಿಂದ, ಬಿಡುಗಡೆ ಮತ್ತೆ ಬಂಧನಗಳ ನಾಟಕ ವಾಡುತ್ತಾ ಸರಕಾರ ಅಸಂದಿಗ್ಧ ಪರಿಸ್ಥಿತಿ ಮುಂದುವರೆಸಿತು. ಕೊನೆಗೆ ಈ ತಲೆನೋವಿನಿಂದ ಶಾಶ್ವತ ಮುಕ್ತಿ ಪಡೆಯಲೋಸುಗ ಅಸಂತುಷ್ಟ ಆದಿವಾಸಿಗಳ ತಂಡದ ಮೇಲೆ ಗೋಳಿಬಾರ ಮಾಡಿದಾಗ, ಅದನ್ನು ತಡೆಗಟ್ಟಲು ಬಂದ ಪ್ರವೀಣಚಂದ್ರನಿಗೆ ಗುಂಡಿನೇಟು ಬಿತ್ತು. ಆಕಸ್ಮಿಕವಾಗಿ ರಾಜ ಮೃತನಾದನೆಂದು ಸಾಧಿಸಲೆತ್ನಿಸಿದರೂ ಕ್ಷೋಭೆ, ಬಲು ಬೇಗ ಹರಡಿ, ಅಲ್ಲಿ ಪ್ರಜೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪೊಲೀಸರನ್ನು ಇಡಬೇಕಾಯಿತು. ಕೆಲಕಾಲದ ನಂತರ ವಿಜಯಚಂದ್ರನೂ ಮೃತಪಟ್ಟನು.

ಪ್ರವೀಣಚಂದ್ರನ ರಾಣಿ ವೇದವತಿದೇವಿಗೆ ಮಕ್ಕಳಿಲ್ಲ. ವಿಜಯಚಂದ್ರನ ಹೆಂಡತಿ ಹಿತೇಂದ್ರದೇವಿಗೆ ಮೂವರು ಪುತ್ರರು. ರಾಜ್ಯ ಕಾರಭಾರವನ್ನು ಮಧ್ಯಪ್ರದೇಶ ಸರಕಾರ ವಹಿಸಿಕೊಂಡ ನಂತರ ಅರಸೊತ್ತಿಗೆಯ ಆಸ್ತಿ ತನಗೆ ಬರಬೇಕು ಎಂದು ವೇದವತಿ ಮೊಕದ್ದಮೆ ಹೂಡಿದಳು. ಪ್ರವೀಣಚಂದ್ರನನ್ನು ಅನ್ಯಾಯವಾಗಿ, ಪದಚ್ಯುತ ಮಾಡಿದ್ದರಿಂದ ಮತ್ತು ಆದಿವಾಸಿ ಮುಖಂಡರು, ನೀಲಿ ರುಮಾಲಿನ ಮಾಝಿಗಳು ವಿಜಯಚಂದ್ರನ ನಾಯಕತ್ವ ಎಂದೂ ಸ್ವೀಕರಿಸದೇ ಇದ್ದುದರಿಂದ ಸರಕಾರದ ವಶದಲ್ಲಿ ಇದ್ದ ಧನ, ಒಡವೆ, ಕಾಗದ ಪತ್ರಗಳು ತುಂಬಿದ ಹತ್ತು ಪೆಟ್ಟಿಗೆಗಳನ್ನು ತನಗೆ ಒಪ್ಪಿಸಬೇಕು ಎಂಬುದು ಅವಳ ವಾದ. ವಿಜಯಚಂದ್ರನು ಮರಣದವರೆಗೆ ಅರಸನಾಗಿದ್ದರಿಂದ ಮತ್ತು ಅವನ ಮಗ ಪಟ್ಟಕ್ಕೆ ಬಾಧ್ಯಸ್ಥನಾಗಿದ್ದರಿಂದ ಆ ಸೊತ್ತೆಲ್ಲ ತನ್ನದಾಗಬೇಕೆಂದೂ ಹಿತೇಂದ್ರದೇವಿಯ ವಾದ. ಮಂಗನ ನ್ಯಾಯವೆಂಬಂತೆ ಸರಕಾರ ಅದನ್ನು ತನ್ನ ಟ್ರೆಝುರಿಗೆ ಸೇರಿಸಿ ತೆಪ್ಪಗೆ ಕುಳಿತಿದೆ. ಅಷ್ಟೇ ಅಲ್ಲದೆ ಬೆಲೆ ಬಾಳುವ ಸಾಮಾನುಗಳಿರುವ ಅರಮನೆಯ ಭಾಗವನ್ನು ಮೊಹರು ಹಾಕಿ ಮುಚ್ಚಿಬಿಟ್ಟಿತು. ಒಂದು ದಶಕದ ನಂತರ ಅದನ್ನು ತೆರವು ಮಾಡಿದಾಗ ಒಳಗಿರುವ ವಸ್ತುಗಳ ಅವಸ್ಥೆಯನ್ನು ಕಣ್ಣಾರೆ ಕಂಡಾಗ ಕಣ್ಣು ತೇವವಾಗದೇ ಇರದು.

ಅರಸನಿಲ್ಲದ ಅರಮನೆ ನೋಡುವಾಗೆಲ್ಲ ಅದರ ಗತವೈಭವ ಕಣ್ಣೆದುರು ಸುಳಿದಂತಾಯಿತು. ಮುರಿದು ನಿಂತ ಅಶ್ವರಥ ಮೂಕವಾಗಿ ರೋದಿಸುತ್ತಿತ್ತು. ಶ್ವೇತವರ್ಣದ

ಜೋಡಿ ಕುದುರೆಗಳು ಎಳೆಯುವ ವಾಹನದಲ್ಲಿ ಅರಸ-ಅರಸಿಯರು ಆಸೀನರಾಗಿ ವಿಶೇಷ ಸಂದರ್ಭಗಳಲ್ಲಿ ಜಗದಲಪುರದ ಬೀದಿಗಳಲ್ಲಿ ಸಂಚರಿಸುತ್ತಿದ್ದಾಗ ದರ್ಶನಕ್ಕಾಗಿ ಜನ ರಸ್ತೆಯ ಅಂಚಿಗೆ ಧಾವಿಸಿ ಬರುತ್ತಿದ್ದಿರಬೇಕು. ಇಂಗ್ಲೆಂಡಿನಲ್ಲಿ ಸಿದ್ಧವಾದ ಹಂಸವರ್ಣೀಯ ರೋಲ್ಸರಾಯ್ ಕಾರು ಮೈಯೆಲ್ಲ ಜಂಗು ತುಂಬಿಸಿಕೊಂಡು ನಿಂತಿದೆ. ಅಂತಹ ಕಾರೊಂದು ಭಾರತದಲ್ಲಿ ಹಳೇ ವೈಭವಯುತ ಕಾಲದ್ದು ಇನ್ನೊಂದು ಸಹಸಾ ನೋಡಲು ಸಿಗಲಿಕ್ಕಿಲ್ಲ. (ಇಂಥ ಐತಿಹಾಸಿಕ ಕಾರೊಂದಿದೆ ಎಂದು ತಿಳಿಸಿದರೆ ಆ ಕಂಪನಿಯೇ ಮೂರು ಲಕ್ಷ ರೂಪಾಯಿ ಕೊಟ್ಟು ಕೊಳ್ಳುತ್ತಿತ್ತೋ ಏನೋ! ಆದರೆ ಸದಾ ಅಡಚಣೆಯಲ್ಲಿರುವ ರಾಜಮನೆತನದವರು ನಂತರ ಕೇವಲ ಮೂವತ್ತು ಸಾವಿರಕ್ಕೆ ಮಾರಿದರೆಂದು ಅರಿತು ನೋವಾಯಿತು.) ಗುಡ್ಡಗಾಡಿನಲ್ಲಿ ಬೀಡು ಬಿಟ್ಟ ಆದಿವಾಸಿಗಳ ಬೇಟೆಗೆ ಬಳಸುತ್ತಿರಬಹುದಾದ ಜೀಪೊಂದು ಕಾಲು ಮುರಿದುಕೊಂಡು ಬಿಕೋ ಎಂದು ನಿಂತಿತ್ತು. ಗೋಡೆಗಳನ್ನು ಅಲಂಕರಿಸಿದ ಹರಿಣ, ಸಾಂಭರ್, ಕಾಡುಹಂದಿಗಳ ಶಿರಗಳೆಲ್ಲ ಮೂಕವೇದನೆಯಲ್ಲಿ ಮುಳುಗಿದ್ದವು. ಅರಸನು ಬೇಟೆಯಾಡಿ ನಮ್ಮನ್ನು ಆಲಂಕಾರಿಕ ಸಾಧನವಾಗಿ ಬಳಸಿ ಈಗ ಧೂಳಿನ ಪಾಲು ಮಾಡುವದಕ್ಕಿಂತ ನಮ್ಮಷ್ಟಕ್ಕೆ ಅರಣ್ಯದಲ್ಲಿ ಬಿಟ್ಟು ಮಣ್ಣು ಪಾಲು ಮಾಡಿದರೆ ಉತ್ತಮವಾಗಿತ್ತು, ಎನ್ನುವಂತಿತ್ತು ಅವುಗಳ ದೀನ ಸ್ಥಿತಿ.

ಹತ್ತಾರು ಹೆಂಗಳೆಯರು, ಒಡೆದುಹೋದ ಬಾಗಿಲಿಗೆ ಜೋಡಿಸಿದ ಗಾಜಿನ ಒಳಗಿನಿಂದ ತಮ್ಮ ದೊರೆಗಳ ಕುಟುಂಬದವರೇನಾದರೂ ಕಾಣುತ್ತಾರೆಯೇ? ಎಂದು ಹಣಕಿ ನೋಡಿ ಕಾಣದಾಗಲು ನಿರಾಶೆಗೊಂಡರು. ಅರಸು ಮಕ್ಕಳನ್ನು ತೋರಿಸುತ್ತೇನೆಂದು ದೂರದ ಹಳ್ಳಿಗಳಿಂದ ಕರೆತಂದ ಮಕ್ಕಳಿಗೆ ಮಾತೆಯರು ಈಗ ಇಲ್ಲಿ ಯಾರೂ ಇಲ್ಲವೆಂದು ಹೇಳಿದಾಗ ಅಳಲಾರಂಭಿಸಿದರು. ಒಂದು ಕೋಣೆಯಲ್ಲಿ ವರಲೆಗೆ ಆಹುತಿಯಾಗಿ, ನೀರಿನಲ್ಲಿ ತೊಯ್ದು, ತಿಪ್ಪೆಯಾಗಿ ಬಿದ್ದಿದ್ದ ರಾಜರ ಗ್ರಂಥ ಭಂಡಾರವಿತ್ತು. ಎಷ್ಟೋ ಅಪೂರ್ವ ಗ್ರಂಥಗಳು ಯಾರ ಪಾಲಿಗೂ ಇಲ್ಲದೇ ಸಮಾಧಿ ಹೊಂದಿದ್ದವು. ಪಕ್ಕದ ಭವ್ಯವಾದ ಕೊಠಡಿ ಅರಸರ ದಿವಾನ್-ಈ-ಖಾಸ್ ಇದ್ದಿರಬೇಕು. ಅಲ್ಲಿರುವ ಮೆತ್ತಗಿನ ಆಸನದಲ್ಲಿ ಕುಳಿತು ಎಂಥ ಮಹಾನ್ ವಿಚಾರ ವಿಮರ್ಶೆಗಳು ನಡೆದಿದ್ದವೋ ಏನೋ! ಶಯ್ಯಾಗಾರಗಳ ಗಾಜುಗಳೆಲ್ಲ ಒಡೆದು ಹೋಗಿದ್ದರಿಂದ ಮಳೆ ನೀರೆಲ್ಲ ಒಳಗೆ ಸೇರಿರಬೇಕು. ಹತ್ತು ವರ್ಷಗಳಲ್ಲೆ ಕೊಠಡಿಗಳ ಸ್ಥಿತಿ ಹೀಗಾಗಬೇಕಿದ್ದರೆ ಒಳಗಿರುವ ಮಂಚ, ಹಾಸಿಗೆ, ದಿಂಬುಗಳ ಅವಸ್ಥೆ ಹೇಗಿರಬಹುದೆಂದು ಕಲ್ಪಿಸಿಕೊಂಡಾಗಲೇ ನೋವಾದಾಗ, ಅದನ್ನೆಲ್ಲ ಕಣ್ಣಾರೆ ಕಾಣುವಂತಾದಾಗ ಕಣ್ಣೀರು ತಡೆದು ಕೊಳ್ಳುವದು ಕಷ್ಟದ್ದಾಯಿತು. ರಾಜಪ್ರಣಯ, ಸರಸ-ಸಲ್ಲಾಪಗಳನ್ನು ವೀಕ್ಷಿಸಿದ ಕೊಠಡಿಗೆ ಜೀವವಿದ್ದರೆ ಅದೆಷ್ಟು ನೋವಿನ ಕಥೆಗಳನ್ನು ಹೇಳುತ್ತಿತ್ತೋ!

ಅರಮನೆಯ ಈ ಭಾಗ, ಅವನ ವಂಶಜರ ವಾಸಕ್ಕೆ ಬಿಟ್ಟಿರಬೇಕು. ಅಂತೆಯೇ ಇದ್ದುದರಲ್ಲಿಯೇ ಸ್ವಚ್ಛವಾಗಿದೆ. ಪ್ರವೀಣಚಂದ್ರ ಭಾಂಜದೇವನ ಹತ್ತಾರು ಚಿತ್ರಗಳನ್ನು ತೂಗು ಹಾಕಿದ್ದಾರೆ. ಭವ್ಯವಾದ ಒಂದು ತೈಲಚಿತ್ರಕ್ಕೆ ಯಾರೋ ಹೂಹಾರ ತೊಡಿಸಿದ್ದಾರೆ. ಪಕ್ಕದಲ್ಲಿದ್ದ ವೇದವತಿ ರಾಣಿಯ ಚಿತ್ರ ಆಕರ್ಷಕವಾಗಿದೆ. ಪತ್ನಿಯ ಸಂತೋಷಕ್ಕೋಸ್ಕರ ಧಾರಾಳವಾಗಿ ಖರ್ಚು ಮಾಡಿ ಪ್ರವೀಣಚಂದ್ರನು ಅದನ್ನು ಮಾಡಿಸಿರಬೇಕು ಎಂದು ನೋಡಿದಾಕ್ಷಣ ಅನಿಸಿತು. ಅರಸನಿಲ್ಲದ ಅರಮನೆಯಲ್ಲಿ ಕೆಲಸದ ಗೊಂಡತಿಯೇ ತಾನು ಅರಸಿಯಂತೆ ನಡೆದು ಕೊಳ್ಳುವದು ಮೋಜಿನದೆನಿಸಿತು. ಛಾಯಾಚಿತ್ರ ತೆಗೆಯಬೇಕೆಂದಾಗ ಅದೆಲ್ಲ ನಡೆಯುವದಿಲ್ಲ ಎಂದು ಠೀವಿಯಿಂದ ಹೇಳಿದಾಗ, ಜೀವನದ ವಿರೋಧಾಭಾಸಗಳ ಪರಿಚಯವಾಯಿತು. ಕೊನೆಗೆ ಹಿತೇಂದ್ರದೇವಿಯನ್ನೇ ಕಂಡು ಮಾತನಾಡಿಸಿದಾಗ, "ನಮ್ಮ ವಿರುದ್ಧ ಪ್ರಚಾರಕ್ಕೆ

ಬಳಸದಿದ್ದರಾಯಿತು. ಛಾಯಾಗ್ರಹಣಕ್ಕೆ ಯಾವ ಆಕ್ಷೇಪವೂ ಇಲ್ಲ... ಈಗಾಗಲೇ ನಾವು ಸಾಕಷ್ಟು ಕಷ್ಟಪಟ್ಟಿದ್ದೇವೆ. ಹೆಚ್ಚಿನವನ್ನು ಬರಮಾಡಿಕೊಳ್ಳುವ ಮನಸ್ಸಿಲ್ಲ'' ಎಂದು ನಗಲು ಯತ್ನಿಸಿದಳು. ನಂತರ ಅವಳ ಭಾವಚಿತ್ರ ತೆಗೆಯುವಾಗ ಅದೇ ಗೊಂಡತಿ ತಾನೂ ಛಾಯಾಚಿತ್ರದಲ್ಲಿ ಬರುವಂತೆ ದೊಡ್ಡ ಬೀಸಣಿಕೆ ಹಿಡಿದು ಗಾಳಿ ಬೀಸುತ್ತಿರುವಂತೆ ನಿಂತದ್ದು ತಮಾಷೆಯಾಗಿತ್ತು. ಆದರೆ ಇದರಿಂದಾಗಿ ತೀರ ಸಾಮಾನ್ಯ ರೂಪ, ಬಣ್ಣಗಳಿದ್ದ ಹಿತೇಂದ್ರ ದೇವಿ ಮಾಜಿ ಅರಸಿ ಎಂದು ಕೆಲಮಟ್ಟಿಗೆ ಅನಿಸುವಂತಾಯಿತು.

ಬಸ್ತರದ ದಸರಾ ದಿನಗಳಲ್ಲಿ ಅರಮನೆಯ ಆಕರ್ಷಣೆ ಜೋರಾಗಿರುತ್ತದೆ. ದೂರದೂರದ ಗುಡ್ಡಗಾಡುಗಳ ಹಳ್ಳಿಗಳಿಂದ ದಸರಾಕ್ಕೆ ಸೇರುವ ಆದಿವಾಸಿಗಳೆಲ್ಲ ತಮ್ಮ ಗೌರವ ತೋರಲು ಪ್ರವೀಣ ಚಂದ್ರನ ನಿವಾಸಕ್ಕೆ ಭೇಟಿಕೊಡದೆ ಹಿಂದಿರುಗುವದಿಲ್ಲ. ಆಗ ಅವರಿಗೆ ಅಲ್ಲಿಯ ಪ್ರತಿಯೊಂದು ವಸ್ತುವೂ ಪವಿತ್ರವೆನಿಸುತ್ತದೆ. ಅದೊಂದು ದೇಗುಲವೆಂಬಂತೆ ಅರಮನೆಯ ಆವಾರದಲ್ಲಿ ಎಲ್ಲಿ ಹೋದರೂ ಭಯಭಕ್ತಿಯಿಂದ ಕೈಜೋಡಿಸಿ ನೋಡುತ್ತ ನಿಂತಿರುತ್ತಾರೆ. ಇದಕ್ಕೂ ಮೊದಲು ಅರಮನೆಯನ್ನು ನೋಡಿದವರು ಜೊತೆಗಿದ್ದರೆ ಅಂಥವರು ಪೂರೈಸುವ ಮಾಹಿತಿ, ಕಟ್ಟುಕಥೆಗಳು ಅವರಿಗೆ ಕರ್ಣಮಧುರವಾಗಿರುತ್ತವೆ. ಪ್ರವೀಣಚಂದ್ರರ ರಾಜ್ಯ ಕಾರಭಾರವನ್ನು ನೋಡಿದ ಹಿರಿಯರಿದ್ದರಂತೂ ಅವರು ಪೂರೈಸುವ ವಿವರಗಳು ಚಲಚ್ಚಿತ್ರ ತಯಾರಕರಿಗೆ ಹೆಚ್ಚಿನ ಸಹಾಯ ನೀಡುವಂತಿದ್ದವು. ಒಬ್ಬಾತ, ''ಆಗ ನಾನಿನ್ನೂ ಕುಡಿಮೀಸೆಯ ಯುವಕ. ರಾಜ್ಯ ಸರಕಾರ, ನಮ್ಮ ಅರಸರಿಗೆ ಮಾಡುತ್ತಿರುವ ಅನ್ಯಾಯವನ್ನು ಕುರಿತು ಹಿರಿಯರಿಂದ ಅರಿತು, ರಕ್ತ ಕುದಿಯುತ್ತಿತ್ತು. ದೊರೆಗಾಗಿ ನಾವು ಏನು ಮಾಡಲೂ ಸಿದ್ಧರಿದ್ದೆವು. ಮನೆ, ಮಾರು ಬಿಟ್ಟು, ಬಿಲ್ಲು ಬಾಣ ಹೊತ್ತು ಅರಮನೆಯ ಆವರಣದಲ್ಲಿಯೇ ಬೀಡು ಬಿಟ್ಟಿದ್ದೆವು. ಅರಸನನ್ನು ಬಂಧಿಸಿ ಜೈಲಿನಲ್ಲಿರಿಸಿದಾಗ ಅಪಮಾನದ ಸೇಡು ತೀರಿಸಲು ಸಿದ್ಧರಿದ್ದೆವು. ಆದರೆ ಹಾಗೆ ಮಾಡದಿರಲು ದೊರೆಗಳೇ ಆದೇಶ ನೀಡಿದರು... ದಂತೇಶ್ವರಿ ಮಾತೆಯಲ್ಲಿ ಅರಸರಿಗೆ ಮೀರಿದ ವಿಶ್ವಾಸ. ನ್ಯಾಯನಿಷ್ಠರಾಗಿ ನಡೆದುಕೊಳ್ಳುವ ಆದಿವಾಸಿ ಗಳಿಗೆ ಮತ್ತು ಅವರ ಅರಸರಿಗೆ ಆಕೆ ಎಂದೂ ಬಿಟ್ಟುಕೊಡಲಾರಳು! ಆದರೆ ಈ ಪೊಲೀಸರ ದುಷ್ಕೃತ್ಯಗಳೋ! ಕಲ್ಪನೆಗೆ ಹೊರತಾದವು. ಆದ್ದರಿಂದ ಮಾತೆಯೂ ಕಣ್ಣು ಮುಚ್ಚಿಕೊಂಡು ಕುಳಿತಿರಬೇಕು... ಒಂದೇ ಕ್ಷಣದಲ್ಲಿ ಚಾಂಡಾಲರು ಎಲ್ಲ ನೆಲಸಮ ಮಾಡಿದರು. ಪೊಲೀಸರನ್ನು ಎದುರಿಸಲು ನಮ್ಮವರೆಲ್ಲ ಅರಮನೆಯ ಎದುರಿನಲ್ಲಿ ಬಿಲ್ಲು ಬಾಣಗಳೊಂದಿಗೆ ಸಜ್ಜಾಗಿ ನಿಂತಿದ್ದೆವು. ಆದರೆ ರಕ್ತಪಾತವಾಗಬಾರದೆಂದು ಮಹಾರಾಜರು ನಮಗೆ ಸುಮ್ಮನಿರುವಂತೆ ಹೇಳಿ ಸಂಧಾನ ಮಾಡಿಸಲು ಅರಮನೆಯ ಹೊರಗೆ ಬಂದರು. ಇದೇ ಹೊತ್ತಿಗೆ ರಾಕ್ಷಸ ಪೊಲೀಸರು ದೊರೆಗೆ ಗುಂಡಿಕ್ಕಿ ಆಹುತಿ ತೆಗೆದುಕೊಂಡರು...'' ಮುದುಕನ ಗಂಟಲು ಕಟ್ಟಿಕೊಂಡಾಗ ನೆರೆದ ಇತರರೂ ಕಣ್ಣೊರೆಸಿಕೊಂಡರು.

# 8. ಬಸ್ತರ ದಸರಾ



ವಿಜಯನಗರದ ವೈಭವದ ದಿನಗಳಲ್ಲಿ ಮಹಾನವಮಿ ಉತ್ಸವ, ಮೈಸೂರು ಮಹಾರಾಜರ ದಸರಾದಷ್ಟೇ ಖ್ಯಾತಿ ಪಡೆದದ್ದು ಬಸ್ತರ ದಸರಾ. ಹದಿನಾರು ದಿನಗಳ ಈ ಸಮಾರಂಭಕ್ಕೆ ಜಿಲ್ಲೆಯ ಮೂಲೆ ಮೂಲೆಗಳಿಂದ ಆದಿವಾಸಿಗಳು ಗಂಟು ಮೂಟೆ ಕಟ್ಟಿ ಬರಲಾರಂಭಿಸಿದರು. ಅಂದಿನ ದಿನಗಳಲ್ಲಿ ಜಗದಲಪುರ ಊರನ್ನು ಅವರಿಗೇ ಒಪ್ಪಿಸಿಬಿಟ್ಟಂತೆ ಭಾಸವಾಗುತ್ತದೆ. ಭವ್ಯವಾದ ಕಲೆಕ್ಟರೇಟ ಮತ್ತು ಅದರ ಪರಿಸರ ಅವರ ವಾಸಕ್ಕಾಗಿ ತೆರವು ಮಾಡುತ್ತಾರೆ. ಹೊತ್ತು ತಂದ ಸಾಮಗ್ರಿಗಳನ್ನೆಲ್ಲ ಹರವಿ, ಮೂರು ಕಲ್ಲಿನ ಒಲೆ ಹೂಡಿ, ಅಡಿಗೆಯನ್ನು ಪ್ರಾರಂಭಿಸಿಯೇ ಬಿಡುತ್ತಾರೆ. ಅವರ ವಾಸಸ್ಥಾನ ಈ ಬೈಲಿಗಿಂತ ತೀರ ಭಿನ್ನವಾಗಿರದ್ದರಿಂದ ಅಕ್ಟೋಬರಿನ ತಂಗಾಳಿಯಲ್ಲಿಯೂ ನೆಮ್ಮದಿಯಿಂದ ವಾಸಿಸುತ್ತಾರೆ. ಎಲ್ಲಕ್ಕೂ ಮೊದಲು ಬಂದವರು ಕಟ್ಟಡದೊಳಗೂ, ಅನಂತರ ಬಂದವರು ಜಗಲಿಯ ಮೇಲೂ, ಕೊನೆಯಲ್ಲಿ ಬಂದವರಿಗೆ ಬಯಲು ಸಿಕ್ಕರೂ ಅವರಲ್ಲಿ ಯಾವ ವೈಮನಸ್ಸು ಜಗಳಗಳಿಲ್ಲದೇ ತಮ್ಮ ಪಾಲಿಗೆ

ತಾವಿರುತ್ತಾರೆ. ಹಣ ಕೊಟ್ಟು, ನಿತ್ಯಬಳಕೆಯ ಸಾಮಾನುಕೊಳ್ಳುವದು ಅಸಾಧ್ಯವಾದ್ದರಿಂದ, ಹಳ್ಳಿಯಲ್ಲೇ ಬಳಸುವದನ್ನೇ ಇಲ್ಲಿಗೆ ತಂದು ಜೀವಿಸುವದರಿಂದ ಒಂದು ದೃಷ್ಟಿಯಿಂದ 16 ದಿನಗಳ ದಸರಾ ಎಂದರೆ ಇಡೀ ಕುಟುಂಬಕ್ಕೆ ರಜಾ ದಿನಗಳು ಇದ್ದಂತೆ.

'ಡಮ್ ಡಮ್ ಡಮಾಕಽಽ' ಎಂದು ಹೊರಹೊಮ್ಮುವ ನಾದದ ಮೂಲವನ್ನು ಸಂಶೋಧಿಸಲು ಹೊರಟಾಗ ತಹಸೀಲದಾರರ ಆಫೀಸಿಗೆ ಮುಟ್ಟುವಂತಾಯಿತು. ಅಲ್ಲೊಂದು ಬೇರೆಯೇ ಜಗತ್ತು ಕಾಣುವಂತಾಯಿತು. ಹರೆಯದ ಆದಿವಾಸಿಗಳ ಮಂಗಳವಾದ್ಯದ ಮೇಳ ನುಡಿಸುವ ದಪ್ಪಡ, ಢೋಲ್, ಮೋಹರಿಗಳ ಇಂಪು, ಕಾಡಿನ ಹಕ್ಕಿಗಳ ಇಂಚರ ನೆನಪಿಗೆ ತರುವಂತಿತ್ತು. ಕೆಂಪು ರುಮಾಲು ಸುತ್ತಿಕೊಂಡಿದ್ದ 'ಮಾಂಝಿ'ಗಳು ಸಮಾರಂಭದ ಯಜಮಾನರಂತೆ ತರಾತುರಿಯಿಂದ ಒಳ ಹೊರಗೆ ಓಡಾಡುತ್ತಿದ್ದರು. ಅಲಂಕಾರದಲ್ಲಿ ಸ್ತ್ರೀಯರನ್ನೂ ನಾಚಿಸುವ ಕಾಡಿನ ಕುವರರು ಉದ್ದ ಕೂದಲುಗಳಿಗೆ ಹೆಚ್ಚಾಗಿಯೇ ಎಣ್ಣೆ ಲೇಪಿಸಿಕೊಂಡು, ಮಧ್ಯೆ ಬೈತಲೆ ತೆಗೆದು, ಬಾಚಿ ಗಂಟು ಹಾಕಿ ಹಣಿಗೆಗಳನ್ನು ಸಿಕ್ಕಿಸಿ, ಚಟುವಟಿಕೆಗಳನ್ನು ಏಕಚಿತ್ತದಿಂದ ವೀಕ್ಷಿಸುತ್ತಿದ್ದರು. ಹೊರಾಂಗಣದಲ್ಲಿ ಬಿದಿರುಗಳನ್ನು ಏಣಿಯಂತೆ ಜೋಡಿಸಿ ನಿರ್ಮಿಸಿದ ಮಂಚಲಕ್ಕೆ ಹಣತೆಗಳನ್ನು ಗೋಮಲದಿಂದ ಜೋಡಿಸಿ, ಅದಕ್ಕೆ ಮಾವಿನ ಎಲೆಯಿಂದ ಔಡಲ ಎಣ್ಣೆಯನ್ನು ಸುರುವಿ ದೀಪ ಉರಿಸುವ ವಿಧಾನಕ್ಕೆ ತಲೆದೂಗಬೇಕಾಯಿತು. ಎಣ್ಣೆಯಲ್ಲಿ ನೆನೆಹಾಕಿದ ಬೆರಣಿಗಳನ್ನು ಉರಿಸಿ ಹಿಲಾಲುಗಳು ಸಿದ್ಧವಾದವು.

ಈ ಉತ್ಸವಕ್ಕೂ ತಹಸೀಲದಾರರಿಗೂ ಎಲ್ಲಿಯ ಸಂಬಂಧವೆಂದು ವಿಚಾರಿಸಿದಾಗ, ತಾಲೂಕ ಅಧಿಕಾರಿ, ಕೆ. ಎಸ್. ಶ್ರೀವಾಸ್ತವರು, "ಹಿಂದೆ ಇದೆಲ್ಲ ಮಹಾರಾಜರ ಮೇಲ್ ವಿಚಾರಣೆಯಲ್ಲಿ ನಡೆಯುತ್ತಿದ್ದವು. ಈಗ ಅವರ ಜವಾಬ್ದಾರಿಗಳನ್ನೆಲ್ಲ ರಾಜ್ಯ ಸರಕಾರ ವಹಿಸಿಕೊಂಡಿದ್ದರಿಂದ ಇದೆಲ್ಲ ನಮ್ಮ ತಲೆಗೆ ಕಟ್ಟಿದ್ದಾರೆ. ಎಲ್ಲವೂ ಸುಸೂತ್ರವಾಗಿ ನಡೆಯಬೇಕಾದರೆ ಜಿಲ್ಲಾ ಅಧಿಕಾರಿ, ತಾಲೂಕ ಅಧಿಕಾರಿಗಳು ಸೇರಿ ಆದಿವಾಸಿಗಳ ಮುಖಂಡರಾದ ಮಾಝಿ, ಪೈಕ್ ನಾಯಕ್, ಪಟೇಲ್, ಪೂಜಾರಿಗಳ ಸಭೆ ಕರೆದು ಎಲ್ಲ ವಿವರಗಳನ್ನು ಚರ್ಚಿಸಬೇಕಾಗುತ್ತದೆ. ನಂತರ ಆದಿವಾಸಿಗಳ ತಂಡದವರಿಗೆ ದಸರಾಕ್ಕೆ ಆಮಂತ್ರಣ ಕಳಿಸಬೇಕಾಗುತ್ತದೆ. ಆಮಂತ್ರಿತರಿಗೆ ಅವರ ಸ್ಥಾನಮಾನಗಳಿಗನುಸರಿಸಿ, ಅಕ್ಕಿ, ಉಪ್ಪು, ಅರಿಶಿನ, ಎಣ್ಣೆಗಳನ್ನು ಪ್ರತಿದಿನ ಸರಬರಾಜು ಮಾಡಬೇಕು. ಈ ಜನರು ತಮಗೆ ಸಲ್ಲ ಬೇಕಾದ ಗೌರವಕ್ಕೆ ಕೊಡುವ ಮಹತ್ವ ಬೇರಾವದಕ್ಕೂ ಕೊಡುವದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು. ಇಂಥ ಸಂದರ್ಭಗಳಲ್ಲಿ ಅಧಿಕಾರಿಗಳು ತಮ್ಮನ್ನು ಅವಮಾನಿಸುವದಕ್ಕಾಗಿಯೇ ಅಲಕ್ಷಿಸಿದ್ದಾರೆಂದು ಪರಿಗಣಿಸುವದು ತೀರಾ ಸಾಮಾನ್ಯ. ಅವರ ಈ ಅಸಮಾಧಾನ ಯಾವ ರೂಪ ತಾಳಬಹುದು ಎಂದು ಹೇಳಲು ಖಂಡಿತ ಬರುವದಿಲ್ಲ. ದೊಂಬಿಗಳು ಏಳಬಹುದು. ಕೊಲೆ ಸುಲಿಗೆಗಳು ಆಗಬಹುದು. ಆದ್ದರಿಂದ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಎಲ್ಲ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ. ಅಲ್ಲದೇ ಅವರ ಅಂತರಾಳ ಅರಿಯುವದಕ್ಕಾಗಿ ನಮ್ಮವರನ್ನು ನೇಮಿಸಬೇಕಾಗುತ್ತದೆ. ಬಿಕ್ಕಟ್ಟಿನ ಪ್ರಸಂಗಗಳಿಗಾಗಿ ಪೊಲೀಸ್ ಬಂದೋಬಸ್ತಿಯನ್ನು ಇಟ್ಟೇ ತೀರಬೇಕು" ಎಂದು ಮೆಲುದನಿಯಲ್ಲಿ ವಿವರಿಸುತ್ತಿದ್ದಾಗ ಮೊಕಾದಮನು ಒಳಬಂದು ಮೆರವಣಿಗೆ ಹೊರಡುವದರಲ್ಲಿ ಇದೆ ಎಂದು ಬರಲು ಆಮಂತ್ರಿಸಿದ.

ಹಿಂದೊಮ್ಮೆ ಮಹಾರಾಜರು ನೂರಾಏಳು ಕಿಲೋಮೀಟರಿನ ದೂರದ ದಂತೆವಾಡಕ್ಕೆ ಹೋಗಿಯೇ, ದಂತೇಶ್ವರಿ ದೇವಿಯ ವಿಗ್ರಹವನ್ನು ದಸರಾ ಉತ್ಸವಕ್ಕಾಗಿ ಜಗದಲಪುರಕ್ಕೆ ಬರಮಾಡಿಕೊಳ್ಳಲಾಗುತ್ತಿತ್ತು. ಆದರೆ ಇಂದು ರಾಜಸನಿಲ್ಲದ್ದರಿಂದ ರಾಜಪುರೋಹಿತರೆ

ಮೆರವಣಿಗೆಯಲ್ಲಿ ಹೋಗಿ ಊರ ಹೊರಗಿನಿಂದ ದಂತೇಶ್ವರಿಯನ್ನು ಬರಮಾಡಿಕೊಳ್ಳುತ್ತಾರೆ. ದಾರಿಯುದ್ದಕ್ಕೂ ಆದಿವಾಸಿ ತಂಡಗಳು ಕಿಕ್ಕಿರಿದು ತುಂಬಿದ್ದವು. ಮೆರವಣಿಗೆಯಲ್ಲಿ ಸೇರ್ಪಡೆಯಾದ 'ಕ್ಯಾಮರಾ' ಅವರಿಗೆ ಹೊಸ ಆಕರ್ಷಣೆಯಾಗಿತ್ತು. ಆದಿವಾಸಿಗಳ ವಾದ್ಯ ಮೇಳ, ದೀಪಗಳ ಸಾಲು, ಗರ್ನಾಲ್ ಗರ್ಜನೆ, ಹಿಲಾಲ ಬೆಳಕಿನಲ್ಲಿ ಹೊರಟಾಗ, ಮದುಮಗ ನಾದಾಗಲೂ ಈ ಗೌರವ, ಪುರಸ್ಕಾರಗಳು ಸಿಕ್ಕಿರಲಿಲ್ಲವೆಂದು ನೆನೆಸಿಕೊಳ್ಳುವಂತಾಯಿತು. ದೇವಿಗೆ ಸ್ವಾಗತ ಕೋರಿ ಪೂಜೆ ಪುನಸ್ಕಾರಗಳನ್ನು ಸಲ್ಲಿಸುತ್ತಿದ್ದಾಗ ಅತ್ಯಾಕರ್ಷಕ ಆದಿವಾಸಿ ಕುವರಿಯರ ಭಾವಚಿತ್ರ ಸೆರೆಹಿಡಿದಾಗ, ಕಣ್ಣುಗಳೆಲ್ಲ ಅತ್ತ ಕೇಂದ್ರೀಕರಣವಾದವು. ಮೆರವಣಿಗೆ ಹಿಂದಿರುಗುವಾಗ ಪ್ರೇಕ್ಷಕರೆಲ್ಲ ಅದರಲ್ಲಿ ಸೇರ್ಪಡೆಯಾದ್ದರಿಂದ ನೂಕುನುಗ್ಗಲುಗಳು ಅತೀ ಹೆಚ್ಚಾದವು. ಆ ಸಹಸ್ರಾರು ಜನರಲ್ಲಿ ಏಕಮಾತ್ರ ಕ್ಯಾಮರಾಧಾರಿಯನ್ನು ಪೊಲೀಸರು ದಂತೇಶ್ವರಿ ಮಾತೆಯ ಎದುರಿಗೇ ಬಿಟ್ಟದ್ದರಿಂದ ಕ್ಯಾಮರಾದ ವರ್ಚಸ್ಸು ಅರಿವಾಯಿತು. ಅದರ ಲಾಭ ಪಡೆದು ಅತ್ಯಂತ ಅಪರೂಪ ಅನಿಸಿದ ಛಾಯಾಚಿತ್ರ ಸಂಗ್ರಹಿಸುವಂತಾಯಿತು.

ಅರಮನೆಯ ಎದುರಿನ ಮೈದಾನದಲ್ಲಿ ದಸರಾ ಉತ್ಸವಕ್ಕಾಗಿ ತೇರೊಂದು ತಲೆ ಎತ್ತುತ್ತಿತ್ತು. ಹಿಂದಿನ ವರ್ಷಗಳಲ್ಲಿಯ ಯಾವ ಸಾಮಗ್ರಿ ಬಳಸದೇ ಪ್ರತಿವರ್ಷವೂ ಹೊಚ್ಚ ಹೊಸ ತೇರು ಮಾಡುವ ಜವಾಬ್ದಾರಿ ಆದಿವಾಸಿಗಳದಂತೆ ! ಬೆಲೆ ಬಾಳುವ ಸಾಲ್, ಸಾಗುವಾನಿ ನಾಟುಗಳು ಬಂದವು, ಕತ್ತಿ ಕೊಡಲಿಗಳನ್ನು ಹರಿತ ಮಾಡಲು ಮೊಳೆ, ಕೀಲುಗಳನ್ನು ಉತ್ಪಾದಿಸಲು ಕಮ್ಮಾರರು ಅಲ್ಲಲ್ಲಿ ಸ್ಥಾಪಿತರಾದರು. ನೂರಾರು ಆದಿವಾಸಿಗಳ ಸಹಕಾರದಿಂದ ತೇರು ನಿರ್ಮಾಣದ ಕೆಲಸದಲ್ಲಿ ತೊಡಗಿದ್ದು ಪ್ರಶಂಸಾರ್ಹವಾದರೂ ತೇರು ನಿರ್ಮಾಣಕ್ಕಾಗಿ ಬೇಕಾಗುವ ಬಡಗಿತನದ ಜಾಣ್ಮೆ ಸಾಲದು ! ಎನಿಸಿತು. ಮೊಳ, ಮಾರು, ಮುಷ್ಟಿಗಳ ಅಳತೆಯಿಂದ ಕೊರಡು ಕೊಯ್ದು ಜೋಡಿಸಲು ಯತ್ನಿಸಿದಾಗ ಅದು ಕಿರಿದಾಯ್ತು ಎಂದು ಅರಿತು ತಿರುಗಿ ಇನ್ನೊಂದು ಹಲಗೆ ಬಳಸುವದು ನಡೆದಿತ್ತು. ಒಂದು ತೇರಿನ ನಿರ್ಮಾಣಕ್ಕಾಗಿ ಹತ್ತಕ್ಕಾಗುವಷ್ಟಾದರೂ ಬೆಲೆ ಬಾಳುವ ಕಟ್ಟಿಗೆ ಕೆಡಿಸಿರಬೇಕು. ಹಸಿ ಕಟ್ಟಿಗೆ, ಆಕಾರ, ಅಳತೆಗಳಿಲ್ಲದ ಮೊಳೆ, ಇವುಗಳಿಂದ ರಚಿತವಾದ ತೇರು ತಲೆಯ ಮೇಲೆಯೇ ಬೀಳಬಹುದೆಂದು ಕೆಳಗಿನಿಂದ ನೋಡುವವರಿಗೆ ಅನಿಸುವಂತಿತ್ತು. ಆದರೆ ಆದಿವಾಸಿಗಳು ಮಾತ್ರ ಇದೆಲ್ಲಾ ದಂತೇಶ್ವರಿಯ ಸೇವೆ ಎಂದು ಪರಿಗಣಿಸಿ ಕೋತಿಯಂತೆ ತುತ್ತತುದಿ ಸೇರಲು ಹಿಂದೆ ಮುಂದೆ ನೋಡುವದಿಲ್ಲ. ಬಿದ್ದು ಕಾಲು ಮುರಿದುಕೊಂಡರೂ ದೇವಿಗೆ ತನ್ನ ಕೆಲಸ ಮನಸ್ಸಿಗೆ ಬಂದಿಲ್ಲವೆಂದು ಮೂಕವೇದನೆ ಸಹಿಸುವ ಜನ ಅವರು.

ಪೆಡಂಭೂತದಂತೆ ಅಳತೆ ಮೀರಿದ ತೇರಿಗೆ ಸಕಲ ಅಲಂಕಾರದೊಡನೆ ಮೂರು ನಾರಿನ ಹಗ್ಗಗಳನ್ನು ಜೋಡಿಸಿ ನೂರಾರು ಆದಿವಾಸಿಗಳು ಕೇವಲ ಶಕ್ತಿ ಒಂದರಿಂದಲೇ ಅದನ್ನು ಚಲಿಸುವಂತೆ ಮಾಡಲು ಯತ್ನಿಸಿದಾಗ ಚಚ್ಚೌಕ ಗಾಲಿಗಳು ಸಂಪು ಹೂಡಿ ನಿಂತಲ್ಲಿಯೇ ನಿಂತುಬಿಟ್ಟವು. ಅವುಗಳಿಗೆ ಎಣ್ಣೆ ಸವರಿ ಪುಸಲಾಯಿಸಿ ತಿರುಗಿ ಹೇ ! ಹೇ ! ಹೇಽಽ ಎಂದು ಹೆಚ್ಚಿನ ಶಕ್ತಿಯಿಂದ ಎಳೆದಾಗ ಒಂದು ಹಗ್ಗವೇ ಹರಿದು ಆದಿವಾಸಿಗಳು ನೆಲಕ್ಕುರುಳಿದರು ! ದಂತೇಶ್ವರಿ ಮುನಿಯಲು ಕಾರಣವನ್ನು ಪೂಜಾರಿಯಿಂದ ವಿಚಾರಿಸಿ ಕುರಿ-ಕೋಣಗಳ ಹರಕೆ ಹೊತ್ತು ಬಡಿಗನಿಂದ ಚಕ್ರಗಳಿಗೆ ಗೋಲಾಕಾರ ಮಾಡಿಸಿ ಹೊಸ ಹಗ್ಗ ಜೋಡಿಸುವಷ್ಟರಲ್ಲಿ ಒಂದು ತಾಸಾದರೂ ಜಾರಿಕೊಂಡಿರಬೇಕು. ಇನ್ನೇನು, ತೇರನ್ನು ಎಳೆಯಬೇಕು ಅನ್ನುವಷ್ಟರಲ್ಲಿ ಪೊಲೀಸ್ ಪಡೆಯವರು ಮೈಮೇಲೆ ದೇವತೆ ಬಂದವರಂತೆ ಬೆತ್ತಪ್ರಹಾರ ಮಾಡಿದ್ದರಿಂದ ಜನರು ಚೆಲ್ಲಾಪಿಲ್ಲಿಯಾಗಿ ಓಡುವಾಗ ಹಲವರು ಮುಗ್ಗರಿಸಿಬಿದ್ದರು. ''ಎಂತಹ ನಿರ್ದಯಿಗಳು !''

ಎಂದುಕೊಳ್ಳುತ್ತಿದ್ದಂತೆ ಚಲಿಸಲಾರಂಭಿಸಿದ ತೇರು ರಸ್ತೆ ಅಂಚಿನಲ್ಲಿ ನಿಂತ ಎಲ್ಲ ಅಂಗಡಿಗಳನ್ನೂ ಪಾತಾಳಕ್ಕೆ ಕಳಿಸುತ್ತ ಓಡಲಾರಂಭಿಸಿತು. ಭಾರಿ ಶಿಲೆಯೊಂದು ಅದನ್ನು ತಡೆಹಿಡಿಯದಿದ್ದರೆ ಏನಾಗುತ್ತಿತ್ತು ಎಂದು ಹೇಳುವದು ಕಷ್ಟ. ಪೊಲೀಸಿನವರು ಜನರನ್ನು ಓಡಿಸದಿದ್ದರೆ ಎಷ್ಟು ಪ್ರೇಕ್ಷಕರು ನರಬಲಿಗಳಾಗುತ್ತಿದ್ದರು! ಎಂದು ಕಲ್ಪಿಸಿಯೇ ರಕ್ತ ಬಿಸಿಯಾಯಿತು.

ಹಳ್ಳಿಗಳಲ್ಲಿಯ ವಿವಾಹಗಳಲ್ಲಿ ಮದುಮಗಳನ್ನು ಹುಲ್ಲಿನ ಹೊರೆಗಳ ಅಡಿಯಲ್ಲಿ, ಹಿತ್ತಲಲ್ಲಿ, ಹೊಲಗಳಲ್ಲಿ ಅಡಗಿಸಿಟ್ಟು ಮದುಮಗನನ್ನು ಹುಡುಕಲು ಹಚ್ಚುವ ಪರಿಪಾಠವಿದೆ. ಆದರೆ ನೆರೆದ ನೂರಾರು ಜನರೆದುರು ಮದುಮಗಳನ್ನು ಅಷ್ಟೊಂದು ದಕ್ಷ ರೀತಿಯಿಂದ ಕಾಣಮಾಡಲಾಗದ್ದರಿಂದ ತನ್ನ ಪತ್ನಿಯನ್ನು ನವವಿವಾಹಿತ, ಹೆಚ್ಚು ತೊಂದರೆ ಇಲ್ಲದೆ ಸಂಶೋಧಿಸುವ. ಆದರೆ ಆದಿವಾಸಿಗಳು ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಸಹಸ್ರಾರು ಕಣ್ಣುಗಳ ಎದುರಿನಲ್ಲಿಯೇ ದೆವ್ವದಂತಹ ತೇರನ್ನು ಕುಮ್ಡುಡಾ ಕೋಟದ ಕಾಡಿನಲ್ಲಿ ಅಡಗಿಸಿಡುವ ಯತ್ನ ನಡೆಸಿದರು! ಮತ್ತು ಮರುದಿನ ಅದನ್ನು ಪತ್ತೆಹಚ್ಚಿ ತಿರುಗಿ ಕರೆದು ತರುವ ನಾಟಕವಾಡಿದರು! ಈ ತೇರಿನ ಪತ್ತೆಗಾಗಿ ಸಾವಿರಾರು ಪ್ರೇಕ್ಷಕರು ಕಾಡಿನಲ್ಲಿ ಸೇರಿರುತ್ತಾರೆ. ಹಲವಾರು ಜನರು ದೂರ ದೂರದಿಂದ ಚಕ್ಕಡಿಗಳಲ್ಲಿ ಬಂದಿರುತ್ತಾರೆ. ಬೇರೆ ಬೇರೆ ಹಳ್ಳಿಯ ವಾದ್ಯ ತಂಡಗಳು ತಮ್ಮೂರಿನ ಧ್ವಜಗಳನ್ನು ಗಗನದಲ್ಲಿ ಹಾರಿಸುತ್ತ, ಭಾರವಾದ ನಗಾರಿಗಳನ್ನೂ ಹೊತ್ತು, ಬಾರಿಸುತ್ತ ಬಂದಿರುತ್ತಾರೆ. ಜೊತೆಯಲ್ಲಿ ತಮ್ಮೂರಿನ ದೇವತೆಯನ್ನು ಮೇಣೆಗಳಲ್ಲಿ ಮೆರವಣಿಗೆ ತೆಗೆಯುತ್ತಾರೆ. ಸರತಿಯ ಪ್ರಕಾರ ದೇವತೆಗಳನ್ನು ಹೊತ್ತವರಿಗೆ ಭಾರ ಬಂದು ಆವೇಶದಿಂದ ಕುಣಿಯುತ್ತಾರೆ. ದಣಿದು ಹಣ್ಣಾದಾಗ ಅವರ ಕಾಲಿಗೆ ನೀರೆರೆದು ಪ್ರಸಾದ, ತಿಂಡಿಗಳನ್ನು ಕೊಟ್ಟು ವಿರಮಿಸಲು ಹೇಳುತ್ತಾರೆ.

ಇದೇ ಸಮಯದಲ್ಲಿ ಬಂಗಾಲಿಗಳ ಕಾಲಿ ಪೂಜಾ ಬರುತ್ತದೆ. ಭಾರತದಿಂದ ಪಾಕಿಸ್ತಾನ ವಿಂಗಡಿಸಿದ ನಂತರ ಪೂರ್ವ ಪಾಕಿಸ್ತಾನ (ಈಗ ಬಾಂಗ್ಲಾದೇಶ)ದ ನಿರಾಶ್ರಿತರು ಗಂಟು ಮೂಟೆ ಕಟ್ಟಿಕೊಂಡು ಪಶ್ಚಿಮ ಬಂಗಾಲದಲ್ಲಿ ಬಂದಿಳಿದರು. ಆದರೆ ಅದಾಗಲೇ ಜನವಸತಿಯಿಂದ ಕಿಕ್ಕಿರಿದು ತುಂಬಿದ ಆ ರಾಜ್ಯಕ್ಕೆ ಈ ಹೊಸಬರನ್ನು ಆಮಂತ್ರಿಸುವ ತ್ರಾಣ ಇದ್ದಿರಲಿಲ್ಲ. ಅಂತೆಯೇ ಅವರನ್ನು ವಿವಿಧ ರಾಜ್ಯಗಳಲ್ಲಿ ಹಂಚಿ ಹಾಕಿದರು. ತೀರ ವಿರಳ ಜನವಸತಿ ಇರುವ ಬಸ್ತರ ಜಿಲ್ಲೆಯಲ್ಲಿ ದಂಡಕಾರಣ್ಯದ ಯೋಜನೆಯಂತೆ ಕೊಂಡೆಗಾಂವ್‌ದಲ್ಲಿ ಅವರಿಗೆ ಆಶ್ರಯ ಕೊಟ್ಟು, ಸಾಗುವಳಿ ಮಾಡಲು ಭೂಮಿ, ದನಕರು, ನೇಗಿಲು, ಬೀಜಗಳನ್ನು ಪೂರೈಸಿದ್ದಲ್ಲದೆ ಧನಸಹಾಯ ಮಾಡಿದರು. ಆದರೆ ಇದರಿಂದ ಬಂಗಾಲಿ, ಆದಿವಾಸಿಗಳಲ್ಲಿ ಘರ್ಷಣೆಗೆ ನಾಂದಿ ಆಯಿತೇ ವಿನಾ ಹೆಚ್ಚೇನೂ ಸಾಧಿಸಿದಂತೆ ಅನಿಸಲಿಲ್ಲ. ಬಂಗಾಲಿಗಳು ತಾವು ಜಾಣರು, ಸುಸಂಸ್ಕೃತರು, ಮುಂದುವರಿದವರು ಎಂದು ತಿಳಿಯುವದರ ಜೊತೆಗೆ ಆದಿವಾಸಿಗಳನ್ನು ತೀರ ಅಸಡ್ಡೆಯಿಂದ ಕಾಣಲಾರಂಭಿಸಿದರು. ಬಂದವರು ಕೃಷಿ ಉತ್ಪಾದಿಸಿ ಹೊಟ್ಟೆ ಹೊರೆದುಕೊಳ್ಳುವ ಬದಲಾಗಿ, ಬೀಜ ತಿಂದರು, ಹಣ ಖರ್ಚು ಮಾಡಿದರು, ಸಲಕರಣೆಗಳನ್ನು ಮಾರಿದರು. ಸುತ್ತಮುತ್ತಲಿದ್ದ ಹೊಂಡ, ಹಳ್ಳ, ಕೆರೆ, ಸರೋವರಗಳಲ್ಲಿ ಇದ್ದ ಸಣ್ಣಪುಟ್ಟ ಮೀನುಗಳನ್ನು ಹಿಡಿದು ತಿಂದು ತೇಗಿದರು. ಇದರಿಂದ ಆದಿವಾಸಿಗಳಿಗೆ ಮೀನು ಸಿಗದಂತಾಯಿತು. ಹೆಚ್ಚಿನ ಬಂಗಾಲಿಗಳು ತಮ್ಮ ಭೂಮಿಯನ್ನು ಇನ್ನಿತರರಿಗೆ ಮಾರಿ ಜಗದಲಪುರಕ್ಕೆ ವಲಸೆ ಬಂದು ಬೀಡಿ, ಚುಟ್ಟ ಎಲೆ ಅಡಿಕೆಗಳಂತಹ ಸಣ್ಣಪುಟ್ಟ ವ್ಯಾಪಾರದಲ್ಲಿ ತೊಡಗಿದ್ದರಿಂದ ಅಲ್ಲಿ ಕೇಂದ್ರೀಕೃತರಾಗಿದ್ದಾರೆ. ಅವರಿಗೆ ಹೋದಲ್ಲೆಲ್ಲ ಬಂಗಾಲಿ ಪರಿಸರವೇ ಬೇಕಾಗಿದ್ದರಿಂದ, ಕಾಲಿ, ದುರ್ಗಾರ ವಿಗ್ರಹಗಳನ್ನು ಮಾಡುವವರನ್ನು ಕರೆತರಿಸಿದ್ದಾರೆ. ಇವರಲ್ಲದೆ ಆದಿವಾಸಿಗಳ

ಮಡಿತದಿಂದ ಧನಿಕರಾದ ಬಂಗಾಲಿಗಳೂ ಅಲ್ಲಿ ಇದ್ದಾರೆ. ಅವರೆಲ್ಲಾ ಚಂದಾ ಹಾಕಿ ಸಾರ್ವಜನಿಕ ಸ್ಥಳಗಳಲ್ಲಿ ದೊಡ್ಡ ದೊಡ್ಡ ಕಾಳಿ ವಿಗ್ರಹಗಳನ್ನು ಸ್ಥಾಪಿಸಿದ್ದರು.

ಈ ಬಂಗಾಲಿಗಳಿಗೆ ಹಬ್ಬದ ಹಿನ್ನೆಲೆಯಲ್ಲಿರುವ ದೈವಿಕ ಭಾವನೆ ಮಾಯವಾದ್ದರಿಂದ ದಸರಾ ಎಂದರೆ ಶಾಲೆ ಕಾಲೇಜುಗಳ ವಾರ್ಷಿಕೋತ್ಸವಗಳಂತೆ ಮೋಜು ಮಾಡುವ ಅವಕಾಶ ವಾಗಿದೆ. ಅಂತೆಯೇ ಹಿಂದಿ ಚಿತ್ರಗಳಲ್ಲಿ ಬರುವ ಎಲ್ಲ ತರಹದ 'ಮಂಗ್ಯಾ' ನೃತ್ಯಗಳಿಗೂ ಅಲ್ಲಿ ಅವಕಾಶವಿತ್ತು. ಪುಣ್ಯಕ್ಕೆ ಕ್ಯಾಬರೆ ಇನ್ನೂ ಬಂದಿರಲಿಲ್ಲ! ಯಾವಳೋ ಹೆಸರು ಕೇಳದ ಪುಷ್ಪಲತಾಳನ್ನು ಹಿಡಿದು ಇಂದಿನ ಆಕರ್ಷಣೆ 'ಪುಷ್ಪಲತಾ ನಾಯ್ಟ್' ಎಂದು ಗಂಟಲು ಬಿರಿದು ಹೋಗುವ ತನಕ ಧ್ವನಿವಾಹಕದಲ್ಲಿ ಕಿರಿಚಿಕೊಳ್ಳುತ್ತಿದ್ದರು. ಆದಿವಾಸಿ, ಬಂಗಾಲಿಗಳ ನಡುವಿರುವ ಸ್ಥಾನೀಯರು ತಾವು ಹಿಂದೆ ಬೀಳಕೂಡದು ಎಂದು ಸಾಂಸ್ಕೃತಿಕ ಚಟುವಟಿಕೆ ಏರ್ಪಡಿಸಿದ್ದರು. ಯಾವದೋ ಹಿಂದಿ ನಾಟಕ ನಡೆದಿತ್ತು. ನಟರಿಗಿಂತ ಪ್ರೇಕ್ಷಕರದೇ ಮೇಲುಗೈ ಯಾದ್ದರಿಂದ ಒಂದಕ್ಷರವೂ ಕೇಳುತ್ತಿರಲಿಲ್ಲ. ಅವರ ಅಭಿನಯ ತೀರ ಬಾಲಿಶ ಆಗಿ ಶಾಲಾ ವಿದ್ಯಾರ್ಥಿಗಳನ್ನು ನಾಚಿಸುವಂತೆ ಇತ್ತು. ಈ ಎರಡು ಗುಂಪುಗಳ ನಡುವೆ ಆದಿವಾಸಿಗಳು, ಯಕ್ಷಗಾನ ಹೋಲುವ ಯಾವದೋ ಸ್ಥಾನೀಯ ನೃತ್ಯ ನಡೆಸಿದ್ದರು. ಹಿಮ್ಮೇಳದವರಲ್ಲಿ ಒಬ್ಬನು ಏಕತಂತಿ ವಾದ್ಯ ಮಿಡಿಯುತ್ತ ಹಾಡುತ್ತಿದ್ದರೆ ಇನ್ನೊಬ್ಬನು 'ಹಲಗೆ' ಯಂತಹ ವಾದ್ಯ ಬಾರಿಸುತ್ತ ಅವನಿಗೆ ಸಂಗಾತಿ ಕೊಡುತ್ತಿದ್ದ. ಅವರ ಎದುರಿನಲ್ಲಿ ಕೃಷ್ಣ-ರಾಧೆಯರಂತಹ ಪಾತ್ರ ಧರಿಸಿದ ಹುಡುಗರಿಬ್ಬರು ಸೂತ್ರದ ಗೊಂಬೆಯಂತೆ ಏಕಪ್ರಕಾರವಾಗಿ ಕುಣಿಯುತ್ತಿದ್ದರು. ಆ ಪ್ರಸಂಗದ ಅರ್ಥ, ಹಿನ್ನೆಲೆ ತಿಳಿಹೇಳುವರಾರೂ ಅಲ್ಲಿ ಇಲ್ಲದ್ದರಿಂದ ವ್ಯಥೆ ಆಯಿತು.

ಹಿಂದೊಮ್ಮೆ ನಮ್ಮ ಮೈಸೂರು ದಸರಾ ಉತ್ಸವಗಳಲ್ಲಿ ಪಾಲುಗೊಳ್ಳಲು ದೇಶ ವಿದೇಶ ಗಳಿಂದ ಪ್ರವಾಸಿಗಳು ಬರುತ್ತಿದ್ದರು. ಸಮತಾವಾದದ ಸೋಗಿನಲ್ಲಿ ರಾಜ, ಮಹಾರಾಜರನ್ನು ಜನಸಾಮಾನ್ಯರನ್ನಾಗಿ ಮಾಡಿದಾಗ ಈ ಉತ್ಸವದ ಬಣ್ಣವೇ ಬದಲಾಯಿತು. ಜಯಚಾಮ ರಾಜೇಂದ್ರ ಮಹಾರಾಜರು ಸ್ವರ್ಗಸ್ಥರಾದ ನಂತರ ಮೈಸೂರ ದಸರಾ ಹೆಸರಿಗೆ ಮಾತ್ರ ಜೀವ ಹಿಡಿದುಕೊಂಡಿದೆ. ಈ ಆಚರಣೆಯೆಲ್ಲ ಸರಕಾರದ ಕೈಗೊಂಬೆಯಾಗಿದೆ. ಇದರಂತೆ ಬಸ್ತರ ದಸರಾ ಹಿಂದೊಮ್ಮೆ ಆದಿವಾಸಿಗಳ ಕ್ಷೇಮ-ಧಾರ್ಮಿಕ ಚಟುವಟಿಕೆಯಾಗಿತ್ತು. ಪ್ರವೀಣಚಂದ್ರ ಭಾಂಜದೇವರ ಅಕಾಲಿಕ ಮೃತ್ಯುವಿನಿಂದ ಅದನ್ನು ಪೊಲೀಸರ ಬಂದೋಬಸ್ತಿನಲ್ಲಿ ಆಚರಿಸಬೇಕಾಗಿಬಂದಿದ್ದು ದುರ್ದೈವದ ಸಂಗತಿ. ಈಗ ಬಂಗಾಲಿ, ಹಿಂದಿವಾಲರ ದಸರಾ ಜೊತೆಯಲ್ಲಿಯೇ ಆದಿವಾಸಿಗಳದೂ ಆಚರಿಸಲ್ಪಡುವದರಿಂದ ಹೆಚ್ಚಿನ ಗೊಂದಲಕ್ಕೆ ಆಸ್ಪದವಾಗಿದೆ. ಇನ್ನೂ ಕೆಲ ವರ್ಷಗಳಲ್ಲಿ ಮೈಸೂರು ಮತ್ತು ಬಸ್ತರ ದಸರಾಗಳು ವಿಜಯನಗರದ ದಸರಾದಂತೆ ಕೇವಲ ಇತಿಹಾಸಕ್ಕೆ ಸೇರಿದರೆ ಆಶ್ಚರ್ಯವಿಲ್ಲ.

# 9. ಮುರಿಯಾ



ನಾವಿಂದು ಆಧುನಿಕ ಜೀವನದ ಸುಳಿಯಲ್ಲಿ ಸಿಕ್ಕು, ದುಡ್ಡೇ ದೇವರೆಂದು ನಂಬಿ ಕೃತಕ ಜೀವನ ನಡೆಸುತ್ತಿದ್ದೇವೆ. ಲೌಕಿಕ ಸ್ಪರ್ಧಾಜೀವನದಲ್ಲಿ ಶಾಂತಿ ನೆಮ್ಮದಿಗಳು ಇಲ್ಲದ್ದರಿಂದ ಏನೋ ಕಳೆದುಕೊಂಡಂತೆ ಅನಿಸಿದರೂ ಅದನ್ನು ತಿರುಗಿ ಪಡೆಯಲಾರದಷ್ಟು ಅಸಹಾಯಕ ರಾಗಿದ್ದೇವೆ. ಇದರಿಂದಾಗಿ ನಮ್ಮಲ್ಲಿ ಮಾನಸಿಕ ರೋಗಗಳು, ರಕ್ತದ ಒತ್ತಡ, ಹೃದಯ ವಿಕಾರಗಳು ದಿನೇ ದಿನೇ ಹೆಚ್ಚುತ್ತಿವೆ. ಆಧುನಿಕ ಐಷಾರಾಮದ ಸೋಂಕು ಇಲ್ಲದ ನಮ್ಮ ಪೂರ್ವಜರು ಅರ್ಥಪೂರ್ಣ ಜೀವನವನ್ನು ಹೇಗೆ ನಡೆಸುತ್ತಿದ್ದರು ಎಂದು ತಿಳಿಯಲು ಯತ್ನಿಸಿದರೆ ನಮ್ಮ ಎಷ್ಟೋ ದೈನಂದಿನ ಸೆಳೆತ (tension) ಕಡಿಮೆ ಮಾಡಿಕೊಳ್ಳಬಹುದು.

ಅದಕ್ಕೂ ಪೂರ್ವ ಯುಗದವರು ಇನ್ನೂ ಬೇರೆ ಬಗೆಯ ಜೀವನ ನಡೆಸುತ್ತಿದ್ದರು. ಮಧ್ಯ ಪ್ರದೇಶದ ಆದಿವಾಸಿಗಳು ಈ ಜನಾಂಗದ ಪ್ರತೀಕವಾಗಿ ಇಂದಿಗೂ ಅದೇ ರೀತಿಯಲ್ಲಿ ವಾಸಿಸುತ್ತಿದ್ದಾರೆ. ಬಸ್ತರ ಜಿಲ್ಲೆಯ ದಟ್ಟ ಕಾಡುಗಳಲ್ಲಿ ಹೊರಜಗತ್ತಿನ ಸಂಪರ್ಕವಿಲ್ಲದೇ ಕಳೆದ ಎಷ್ಟೋ ಶತಮಾನಗಳಲ್ಲಿ ಯಾವ ಹೆಚ್ಚಿನ ಬದಲಾವಣೆಯಿಲ್ಲದೇ ಮುರಿಯಾ ಆದಿವಾಸಿಗಳು ಜೀವನ ನಡೆಸುತ್ತ ಬಂದಿದ್ದಾರೆ, ಎಂದರೆ ಅತಿಶಯೋಕ್ತಿಯಾಗಲಾರದು. ಇದರಿಂದ ಆಧುನಿಕರು ಕಲಿಯುವಂತಹ ವಿಷಯಗಳು ಅನೇಕ.

ನಮ್ಮ ಜೀವನಮಾಪನದಿಂದ ಮುರಿಯರನ್ನು ಅಳೆದರೆ ಅವರು ಅತಿ ಬಡವರಾಗಿದ್ದು, ತೀರ ಹಿಂದುಳಿದ ಭಾರತೀಯರು. ಆದರೆ ಅವರ ರಂಗು ರಂಗಿನ, ಜೆಡಗಿನ ಆದರೆ ಸರ್ವ ವಿಧದಲ್ಲಿ ಸ್ವತಂತ್ರ ಜೀವನ, ಎಂಥ ಮುಂದುವರಿದ ಜನಾಂಗಕ್ಕೂ ಸವಾಲಿನಂತಿದೆ. ಮುರಿಯರ ಹಳ್ಳಿಗಳಿಗೆ ಯಾವ ವಾಹನ ಸೌಕರ್ಯವೂ ಇಲ್ಲ. ರಸ್ತೆಗಳೂ ಇಲ್ಲ. ಆದ್ದರಿಂದ ಗುಡ್ಡಗಳನ್ನು ಹತ್ತಿ ಇಳಿದು, ದಟ್ಟವಾದ ಕಾಡುಗಳಿಂದ ಹಾದು, ಹಳ್ಳ ಕೊಳ್ಳ ದಾಟಿ ಅಲ್ಲಿ ಮುಟ್ಟುವಾಗ ಆಧುನಿಕರಿಗೆ ಜೀವನದ ಮೇಲೆ ಜಿಗುಪ್ಸೆ ಬಂದರೆ ಆಶ್ಚರ್ಯವಿಲ್ಲ! ಈ ಆದಿವಾಸಿಗಳು ತಮ್ಮವರಲ್ಲದವರನ್ನು ಸದಾ ಕಾಲ ಸಂಶಯದಿಂದಲೇ ನೋಡುತ್ತಿರುತ್ತಾರೆ. ಆದರೆ ಆಗಂತುಕ, ತಮ್ಮನ್ನು ಸುಲಿಯಲು ಬಂದ ಸರಕಾರಿ ಅಧಿಕಾರಿ ಅಥವಾ ವ್ಯಾಪಾರಿ ಅಲ್ಲವೆಂದು ಖಾತ್ರಿಯಾಯಿತೆಂದರೆ ಅವರು ಯಾವ ಮುಚ್ಚುಮರೆಯಿಲ್ಲದೇ ಅತಿಥಿಯೊಂದಿಗೆ ಬೆರೆಯುವರು. ಹಳ್ಳಿಯ ಹೃದಯಸ್ಥಾನದಲ್ಲಿ ಇರುವ ಸಾಮುದಾಯಿಕ ಕಟ್ಟಡವಾದ 'ಘೋಟುಲ್'ದಲ್ಲಿ ಬಂದವನ ಆತಿಥ್ಯವಾಗುವದು. ಈ ಘೋಟುಲದ ಸುತ್ತಲೂ ಮುರಿಯರ ಮನೆಗಳು ಪಸರಿಸಿರುತ್ತವೆ. ಮನೆಗಳಿಗೆ ಹೆಚ್ಚಿನ ಆಡಂಬರವಿರುವದಿಲ್ಲ. ಹುಲ್ಲಿನ ಛಾವಣಿಯ ಒಂದು ಕೊಠಡಿ ಅವರ ಮಲಗುವ ಮನೆ, ಅಡಿಗೆಮನೆ, ಗುದಾಮು. ಕೇವಲ ಛಪ್ಪರವಿದ್ದ ಮಂಟಪ, ಬೈಠಕಖಾನೆ ಇದ್ದಂತೆ ಇಲ್ಲಿಯೇ ಅವರ ವಾದ್ಯಗಳನ್ನು ತೂಗುಹಾಕಿರುತ್ತಾರೆ. ಅಡಿಗೆಯ ಹೆಚ್ಚಿನ ಸಾಮಾನುಗಳನ್ನು ಪರ್ಣಗಳ ಪೊಟ್ಟಣದಲ್ಲಿಟ್ಟು ಮಾಡಿನಿಂದ ತೂಗು ಬಿಟ್ಟಿರುತ್ತಾರೆ. ಮೂಲೆಯೊಂದರಲ್ಲಿ ಒಲೆ ಸದಾ ಉರಿಯುತ್ತಿರುತ್ತದೆ.

ಮುರಿಯರ ದಿನಚರಿ ನಸುಕಿನಲ್ಲೇ ಪ್ರಾರಂಭವಾಗುತ್ತದೆ. ಗೃಹಸ್ಥನು ಮೈಮುರಿದೆದ್ದು ಕಾಡಿಗೆ ಹೋಗಿ ಬಂದು ಮುಖ ತೊಳೆದು ಬೀಡಿ ತಯಾರಿಸಿ ಸೇದುತ್ತಿರುವಾಗ, ಯಜಮಾನಿ, ತಾವೇ ಬೆಳೆಸಿದ ಧಾನ್ಯಗಳ 'ಪೇಜ' (ಗಂಜಿ) ಕುದಿಸುತ್ತಾಳೆ. ಎಲ್ಲರಿಗಾಗುವಷ್ಟು ದೊನ್ನೆಗಳನ್ನು ರಚಿಸಿದಾಗ ಅವುಗಳಲ್ಲಿ ಗಂಜಿ ಸುರಿದು ಕುಡಿದು ಎಲ್ಲರೂ ತಮ್ಮ ತಮ್ಮ ಕೆಲಸಕ್ಕೆ ಹೊರಡುವದು ವಾಡಿಕೆ. ಪುರುಷರು ಬಿಲ್ಲು ಬಾಣಗಳನ್ನು ಹೆಗಲಿಗೆ ಏರಿಸಿ 'ಟಾಂಗಿ' (ಕಿರುಕೊಡಲಿ) ಯನ್ನು ಭುಜದ ಮೇಲಿಟ್ಟು ಕಾಡಿಗೆ ಹೊರಟರೆ, ಮಕ್ಕಳು ಮೀನು ಹಿಡಿಯಲು ಇಲ್ಲವೇ ಮನೆಯ ಆ ವಾರದಲ್ಲಿ ಬೆಳೆಯುವ ಕಾಯಿಪಲ್ಲೆ ತೋಟದಲ್ಲಿ ದುಡಿಯಲು ಹೋಗುತ್ತಾರೆ. ಗೃಹಿಣಿ ಅಡಿಗೆಯ ಮಣ್ಣಿನ ಪಾತ್ರೆಗಳನ್ನು ತೊಳೆದು ಹತ್ತಿರದ ಝರಿಯಿಂದ 'ತುಂಬಾ' (ಪೊಳ್ಳುಮಾಡಿದ ಸೋರೆಕಾಯಿ)ದಲ್ಲಿ ನೀರು ತಂದಿಡುವಳು. ಹಸಿದು ಬರುವ ಗಂಡಸರು-ಮಕ್ಕಳಿಗಾಗಿ ಮನೆಯಲ್ಲಿ ಭತ್ತ ಕುಟ್ಟಿಮಾಡಿದ ಅಕ್ಕಿಯ ಅನ್ನ, ತೋಟದಲ್ಲಿ ಬೆಳೆದ ಯಾವದಾದರೂ ತರಕಾರಿ ಸೊಪ್ಪಿನ ಪಲ್ಯೆ ಮಾಡಿಟ್ಟು, ಸಂಗ್ರಹದಲ್ಲಿದ್ದ ಕಾಳು-ಕಡಿಗಳಿಗೆ ಕೀಟಬಾಧೆ ತಗಲದಂತೆ ಬಿಸಿಲಿಗೆ ಹಾಕುವಳು. ಸಮಯ ಉಳಿದರೆ, ಪಕ್ಕದ ಕಾಡಿಗೆ ಹೋಗಿ ಉರುವಲಿಗೆ ಒಣಗಿದ ರೆಂಬೆ, ಕಟ್ಟಿಗೆ, ದ್ರೋಣಗಳಿಗಾಗಿ ಪರ್ಣಗಳನ್ನು ಸಂಗ್ರಹಿಸಿ ತರುವಳು. ಮುರಿಯರು, ದೇಹದ, ಬಟ್ಟೆ ಬರೆಯ ಸ್ವಚ್ಛತೆಗೆ ವಿಶೇಷ ಗಮನಕೊಡುತ್ತಾರೆ. ಪ್ರತಿದಿನವೂ ಹತ್ತಿರದ ಕೊಳ,

ಹೊಂಡ, ನದಿಗಳಲ್ಲಿ ಸ್ನಾನ ಮಾಡುವರು, ಬಟ್ಟೆ ಒಗೆಯುವರು. ಹೆಂಗಳೆಯರು ಯಾವ ಮುಚ್ಚುಮರೆ ಇಲ್ಲದೆ ನಗ್ನರಾಗಿಯೇ ಸ್ನಾನ ಮಾಡುವರು. ನಾಲ್ಕು ಗೋಡೆಗಳ ಬಚ್ಚಲ ಸುರಕ್ಷತೆ ಅವರಿಗೆ ನಿಸರ್ಗದ ಮಡಿಲಲ್ಲಿ ಲಭಿಸಿದೆ! ಮುರಿಯ ಪುರುಷರು ಹೆಂಗಳೆಯರಂತೆ ಕೂದಲನ್ನು ಬೆಳೆಸಿ ಎಣ್ಣೆ ಹಚ್ಚಿ ಬಾಚಿ ಮುಡಿ ಕಟ್ಟಿಕೊಳ್ಳುವರು. ಅದಕ್ಕೊಂದು ಬಾಚಣಿಗೆ ಸಿಕ್ಕಿಸಿ, ಬಣ್ಣ ಬಣ್ಣದ ಹೂ ಮುಡಿಯುವರು. ಕಿವಿ ಕೊರಳು ಕೈಗಳಿಗೆ ಆಭರಣ ತೊಡುವರು. ಹೆಣ್ಣುಮಕ್ಕಳು ಮಣಿಸರಗಳೊಂದಿಗೆ ನಾಣ್ಯಗಳ ಹಾರ, ಬೆಳ್ಳಿಯ ಡಾಬು, ವಂಕಿಗಳನ್ನು ಧರಿಸುತ್ತಾರೆ. ಗಂಡಸರು ಅಂಗವಸ್ತ್ರವೊಂದನ್ನು ಸೊಂಟಕ್ಕೆ ಜಿಗಿದು, ಹೂ ಬಣ್ಣದ ಪುಕ್ಕ ಓರಣವಾಗಿ ಸಿಗಿಸಿ ಕಿರಿ ರುಮಾಲು ತಲೆಗೆ ಸುತ್ತಿಕೊಳ್ಳುತ್ತಾರೆ. ಹೆಂಗಳೆಯರು ಕಿರಿದಾದ ಕಿರಿಗೆಯನ್ನು ಸೀರೆಯಂತೆ ಉಡಹೋಗಿ ದೇಹದ ಉಬ್ಬು ತಗ್ಗುಗಳನ್ನು ಮುಚ್ಚಲು ಅಸಮರ್ಥರಾಗಿರುತ್ತಾರೆ! ಕೇವಲ ಐದು ದಶಕಗಳ ಹಿಂದೆ ಈ ಜನಾಂಗದವರು ಬಟ್ಟೆಯ ಬದಲಾಗಿ ಪರ್ಣಗಳನ್ನು ಬಳಸುತ್ತಿದ್ದರು.

ಸೂರ್ಯದೇವ ನಡುನೆತ್ತಿಯ ಮೇಲೆ ಬಂದಾಗ ಮುರಿಯರು ಗೃಹಾಭಿಮುಖರಾಗುವರು. ಯಜಮಾನನು ಸಿಕ್ಕ ಬೇಟೆ, ಹಣ್ಣು ಹಂಪಲು, ಬೇರು, ತೊಗಟೆಗಳೊಂದಿಗೆ ಹಿಂತಿರುಗಿದರೆ, ಮಕ್ಕಳು ಮೀನು, ಕಾಯಿಪಲ್ಲೆ ಹೊತ್ತು ತರುವರು. ಗೃಹಿಣಿ ಲಗುಬಗೆಯಿಂದ ಮೀನು, ಮಾಂಸದ ವ್ಯಂಜನ ಮಾಡುವದರಲ್ಲಿ ತೊಡಗಿದರೆ ಮಕ್ಕಳು ಸೀಳಿದ ಬಿದಿರಿನಿಂದ ಊಟಕ್ಕಾಗಿ ಬುಟ್ಟಿ ಹೆಣೆಯುವರು, ಗೃಹಸ್ಥ ಬೀಡಿ ಹೊತ್ತಿಸಿ ನೆನೆಹಾಕಿದ ಮರದ ತೊಗಟೆಗೆ ಹುರಿ ಹಾಕಿ ಹಗ್ಗವನ್ನು ಹೆಣೆಯುವದರಲ್ಲಿ ಮೈಮರೆಯುವನು. ಈ ಹಗ್ಗದಿಂದ ಅವನು ಮನೆ ಕಟ್ಟಬಲ್ಲ, ಮಂಚ ತಯಾರಿಸಬಲ್ಲ, ಬೇಲಿ ಹಾಕಬಲ್ಲ, ತೊಟ್ಟಿಲು ತೂಗಬಲ್ಲ. ಊಟ ಸಿದ್ಧವಾದಾಗ ದೊನ್ನೆ ಅಥವಾ ಬುಟ್ಟಿಯಲ್ಲಿನ ಅನ್ನ ಹಾಕಿಕೊಂಡು ಪಲ್ಲೆ ಸುರಿದುಕೊಂಡು ಎಲ್ಲರೂ ಜೊತೆಯಾಗಿ ಉಣ್ಣುವರು. ತಮಗೆ ಬೇಕಾದಷ್ಟು ತಾವೇ ಬಡಿಸಿಕೊಳ್ಳುವರು.

ಗುಡಿಸಲು ತೀರ ಚಿಕ್ಕದಾಗಿರುವದರಿಂದಲೋ, ಅವರ ಪ್ರಕೃತಿ ಪ್ರೇಮದಿಂದಲೋ, ಮುರಿಯರು ದಾಂಪತ್ಯ ಸುಖವನ್ನು ಅನುಭವಿಸುವದು ನಿಸರ್ಗದ ಮಡಿಲಲ್ಲಿಯೇ. ವೈವಾಹಿಕ ಜೀವನದಲ್ಲಿ ಪರಸ್ಪರ ಪ್ರಾಮಾಣಿಕತೆಗೆ ವಿಶೇಷ ಮಹತ್ವ ಕೊಡುತ್ತಾರೆ. ಪತ್ನಿಗೊಬ್ಬ ಪ್ರೇಮಿಯಿದ್ದ ಸುಳಿವು ಹತ್ತಿದರೆ ಅವನನ್ನು ಪತಿ ಕೊಲೆ ಮಾಡಿದರೂ ಅದು ಕ್ಷಮ್ಯವೇ! ವಿವಾಹ ಕಾಲದಲ್ಲಿ ಅಕ್ಕಿ, ಸೆರೆ, ಧಾನ್ಯಗಳ ರೂಪದಲ್ಲಿ ವಧುದಕ್ಷಿಣೆಯನ್ನು ಕೊಡುವದು ವಾಡಿಕೆಯಾದ್ದರಿಂದ ಪತ್ನಿ ಬೇರೊಬ್ಬನೊಡನೆ ವಿವಾಹವಾಗಬಯಸಿದರೆ, ಅವಳ ತಂದೆ ವಧು ದಕ್ಷಿಣೆಯನ್ನು ಹಿಂತಿರುಗಿಸುವ ಏರ್ಪಾಡು ಮಾಡಬೇಕಾಗುವದು. ಅಣ್ಣನು ಹುಲಿಯ ಬಾಯಿಗೆ ತುತ್ತಾದರೆ ಅಥವಾ ಅಕಾಲ ಮೃತ್ಯುವಿಗೆ ಈಡಾದರೆ, ಅವನ ಪತ್ನಿಯನ್ನು ಅವನ ತಮ್ಮನೇ ವರಿಸುತ್ತಾನೆ. ವಿವಾಹ ಕಾಲದಲ್ಲಿ ಹಳ್ಳಿಗೆಲ್ಲಾ ಭೋಜನ, ಪಾನದ ವ್ಯವಸ್ಥೆ ಮಾಡಲಾಗುತ್ತದೆ.

ಮುರಿಯರು ಸತ್ತವರನ್ನು ಹೂಳಿ ಅಲ್ಲೊಂದು ಸ್ಮಾರಕ-ಕೊರಡು ನಿಲ್ಲಿಸುತ್ತಾರೆ. ಹಳ್ಳಿಯ ಪ್ರಮುಖ ವ್ಯಕ್ತಿ ಸತ್ತರೆ ದಹನವಾಗುವದು. ಮದುವೆಯಂತೆ ಮರಣ ಸಂಭವಿಸಿದರೂ ಇಡೀ ಹಳ್ಳಿ ಕಲೆಯುವದು. ಹಳ್ಳಿಯೇ ಒಂದು ಮಹಾಮನೆ ಇದ್ದಂತೆ. ಹಳ್ಳಿಯವರೆಲ್ಲ ಕೂಡಿ ಕೃಷಿ ಮಾಡುವರು. ಹಬ್ಬದ ದಿನಗಳಲ್ಲಿ ಎಲ್ಲರೂ ಕೂಡಿ ಬೇಟೆಗೆ ಹೋಗುವರು. ಕೂಡಿ ಕುಣಿಯುವರು, ಕೂಡಿ ಕುಡಿಯುವರು. ಕಳವು-ಸುಲಿಗೆಗಳಿಗೆ ಆಸ್ಪದವಿಲ್ಲ, ಸುಳ್ಳು ಹೇಳಿ ಸ್ವಾರ್ಥ ಸಾಧಿಸುವ ಸಂದರ್ಭ ಇಲ್ಲ, ಕಳ್ಳಕಾಕರಿಂದ ರಕ್ಷಣೆ ಬೇಕಾಗಿಲ್ಲ, ಮುರಿಯರು ತುಂಬ ತಿಳಿ ಹೃದಯದವರು, ವಿನೋದಪ್ರಿಯರು, ಹಸನ್ಮುಖಿಗಳು, ಸದಾ ಸುಖಿಗಳು.

ಪಟ್ಟಣದಲ್ಲಿ ಶಿಕ್ಷಣ ಪಡೆದ ನಮಗೆ ಖುರ್ಚಿಯ ಮೇಲೆ ಕುಳಿತು ಮಾಡುವ ನೌಕರಿ ಅಷ್ಟೇ ಬರುತ್ತದೆ. ಕೆಲ ವರ್ಷ ಅದನ್ನು ಮಾಡಿದರೆ ಬೇರಾವದೂ ಬರದು ನಮಗೆ. ಅದೇ ಮುರಿಯರು ಹಗ್ಗ ಮಾಡಬಲ್ಲರು, ಬಲೆ ಹೆಣೆಯಬಲ್ಲರು, ಮನೆ ಕಟ್ಟಬಲ್ಲರು, ಬೇಟೆಯಾಡ ಬಲ್ಲರು, ಮೀನು ಹಿಡಿಯಬಲ್ಲರು, ಕೃಷಿ ಮಾಡಬಲ್ಲರು, ಹಲವಾರು ಔಷಧಿಗಳನ್ನು ಮಾಡಬಲ್ಲರು, ಕೊರಡು ಕೊರೆಯುವರು, ಮಣ್ಣಿನ ಮೂರ್ತಿಗಳನ್ನು ಮಾಡಬಲ್ಲರು. ಚಿತ್ರ ಬಿಡಿಸಬಲ್ಲರು, ವಾದ್ಯ ನುಡಿಸಬಲ್ಲರು, ನರ್ತಿಸಬಲ್ಲರು, ಹಾಡಬಲ್ಲರು, ರುಚಿಯಾದ ಸೆರೆಯಿಳಿಸ ಬಲ್ಲರು. ಎಲ್ಲಕ್ಕಿಂತ ಹೆಚ್ಚೆಂದರೆ ಪ್ರಾಮಾಣಿಕರು, ಸತ್ಯವಂತರು, ಮೋಸ ವಂಚನೆ ಅರಿಯದವರು. ಸಾಂಸಾರಿಕ ಜೀವನದಲ್ಲಿ ಪ್ರಾಮಾಣಿಕರು, ಹಣ ಬೆಳ್ಳಿ ಬಂಗಾರಗಳಲ್ಲಿ ಅವರು ಕಡು ಬಡವ ರಾದರೂ ಜೀವನದಲ್ಲಿ ಸಾಧಿಸಿದ ಅಪಾರ ಮೌಲ್ಯಗಳಲ್ಲಿ ಅವರೊಡನೆ ಸ್ಪರ್ಧಿಸುವದು ನಮ್ಮಿಂದ ಎಂದಾದರೂ ಸಾಧ್ಯವಾದೀತೆ? ಆದರೆ ಜೀವನದ ತಿರುಳನ್ನು ಕಂಡುಕೊಂಡ ಮುರಿಯರಂತಹ ಆದಿವಾಸಿಗಳನ್ನು ನಾಗರಿಕರನ್ನಾಗಿ ಮಾಡಲು ಸರಕಾರ, ಸಮಾಜ ಹಣದ ಹೊಳೆಯನ್ನೇ ಹರಿಸುತ್ತದೆ. ಮುರಿಯರಿಗೆ ಇವಾವವೂ ಬೇಕಿಲ್ಲ. ತಮ್ಮಷ್ಟಕ್ಕೆ ಜೀವಿಸಲು ಬಿಡದೆ ತಮ್ಮ ಮೇಲೆ ನಾಗರಿಕತೆ ಹೇರುತ್ತಿದ್ದಾರೆ ಎಂದು ಅನುಮಾನ ಬಂದೊಡನೆ ಅಲ್ಲಿಂದ ಕಾಲು ಕಿತ್ತು ದಟ್ಟವಾದ ಕಾಡಿಗೆ ಹೋಗುತ್ತಾರೆ. ಇಂಥವರನ್ನು ನಮ್ಮಂತೆ ಮಾಡಲು ಯತ್ನಿಸಬೇಕೇ? ಅವರಷ್ಟಕ್ಕೆ ಅವರನ್ನು ಬಿಡಬೇಕೆ ? ಎಂದು ನಾವೆಲ್ಲ ವಿಚಾರ ಮಾಡಬೇಕಾದ ಪ್ರಶ್ನೆ.

# 10. ಘೋಟುಲ್ : ಕಾಡಿನ ಯುವ ವಿಶ್ವ



ಎಳೆತನದಿಂದಲೇ ಸಾಮೂಹಿಕ ಜೀವನಕ್ಕೆ ಅನುಕೂಲವಾದ ಮನಸ್ಸಿನ ಪ್ರವೃತ್ತಿಯನ್ನೂ ಸಂಸ್ಕೃತಿಗೆ ಪೋಷಕವಾದ ಬಾಳಿನ ರೀತಿಯನ್ನೂ ಅಭ್ಯಾಸ ಮಾಡಿಸಲಾಗುತ್ತದೆ. ಮಧ್ಯ ಪ್ರದೇಶದ ಕೆಲವು ಆದಿವಾಸಿ ಬುಡಕಟ್ಟುಗಳಲ್ಲಿ, ಗಂಡು-ಹೆಣ್ಣುಗಳ ನಡುವೆ ಭೇದವೆಣಿಸದೆ ಆ ಬುಡಕಟ್ಟುಗಳ ಯುವಜನ ಅವಿಕೃತವಾಗಿ, ಪ್ರಕೃತಿ ಸಹಜವಾಗಿ ಬೆಳೆಯುವದು ಪರಿಪಕ್ವ ಮಾನವ ಸಂಬಂಧದ ವೃದ್ಧಿಗೆ ದಾರಿಮಾಡಿದೆ. ಘೋಟುಲ್ ಸಾಮಾಜಿಕ ಜೀವನ ಕೌತುಕಮಯ, ರಮ್ಯ.

ವಿರಾಮವಾಗಿ ದಿನವೆಲ್ಲ ಕಾಡಿನಲ್ಲಿ ಮೆದ್ದ ದನಕರುಗಳು ಧೂಳು ಹಾರಿಸುತ್ತ ಗೃಹಾಭಿಮುಖವಾದವು. ಸೂರ್ಯದೇವ ಮರಗಳೆಡೆಯಲ್ಲಿ ಕಣ್ಣು ಮುಚ್ಚಾಲೆಯಾಡುತ್ತ ಕೊನೆಗೊಮ್ಮೆ ಕಾಡಂಚಿನಲ್ಲಿ ಕಣ್ಮರೆ ಆಗಲು ಹೊರಟಿದ್ದ. ಮಧ್ಯಪ್ರದೇಶದ ಬಸ್ತರ ಜಿಲ್ಲೆಯ

ಅಬುಜಮಾರ ಮುರಿಯರು ಅವಸರವಿಲ್ಲದ ತಮ್ಮ ಸಂಜೆಯೂಟದಲ್ಲಿ ತೊಡಗಿದ್ದರು. ಬೇಟೆ, ಹಬ್ಬ, ಹುಣ್ಣಿಮೆ, ಹಳ್ಳಿಯ ಸಂತೆ, ಅವರ ಮಾತುಕತೆಯ ವಿಷಯ. ಹಿರಿಯರು ಬೆಂಕಿಯ ಸುತ್ತಲೂ ಕಲೆತು ಹರಟೆ ಹೊಡೆಯುತ್ತ, ಬೀಡಿ ಹಚ್ಚಿಸಿ ಸೇದುತ್ತ ಕುಳಿತಿದ್ದರು. ಕಿರಿಯರೆಲ್ಲ ತಮ್ಮ ತಮ್ಮ ಮನೆಗಳಿಂದ ಹೊರಬಿದ್ದರು. ಕಾಡುಮೃಗಗಳಿಗೂ ಕೇಳಿಸುವಂತೆ ಗಲಾಟೆ ಹಾಕುತ್ತ ಆಗೊಮ್ಮೆ ಈಗೊಮ್ಮೆ ತಾವು ಹೊತ್ತ ವಾದ್ಯಗಳ ಮೇಲೆ ಕೈಯಾಡಿಸಿದಾಗೊಮ್ಮೆ ಹಳ್ಳಿಯ ಜನರಿಗೆ, ತಮ್ಮ ಯುವಜನಾಂಗ ಘೋಟುಲಕ್ಕೆ ಹೊರಟಿದೆ ಎಂದು ಸಾರಿ ಹೇಳಿದಂತಾಗುವುದು. ಯುವಕರನ್ನು ಹಿಂಬಾಲಿಸಿ, ಮೆಲುದನಿಯ ಪಿಸಿಪಿಸಿ ಮಾತು, ಕಿಸಿಕಿಸಿ ನಗು, ನಸುನಾಚಿಕೆಗಳೊಂದಿಗೆ ಬಳುಕುತ್ತ ಯುವತಿಯರ ಮೇಳವೂ ಹೊರಟಿತು. ಯುವಕರು ನೇರವಾಗಿ ಘೋಟುಲ್ ಸೇರಿಕೊಂಡರೆ, ಇತರ ಗೆಳತಿಯರನ್ನು ಕರೆದುತರಲು ಯುವತಿಯರು ಅಕ್ಕಪಕ್ಕದ ಗುಡಿಸಲುಗಳಲ್ಲಿ ಹೊಕ್ಕರು. ನಗೆ, ಕೇಕೆ, ಮಾತುಗಳಲ್ಲಿ ನಿಧಾನವಾಗಿ ಘೋಟುಲಕ್ಕೆ ಬಂದರು. ಆಗಲೇ ಯುವಕರ ಸಂಗೀತಮೇಳ ಪ್ರಾರಂಭವಾಗಿತ್ತು. ಒಬ್ಬ ಮಾಂದ್ರಿ (ಮೃದಂಗ)ವನ್ನು ಉತ್ಸಾಹದಿಂದ ಬಾರಿಸಿದರೆ ಕೊಳಲಿನವ ರಾಗವೊಂದನ್ನು ಊದಿದ. ಹುಡುಗಿಯರೆಲ್ಲ ಒಬ್ಬರೊಬ್ಬರ ಕೈಹಿಡಿದು ಕುಣಿತದ ವಿನ್ಯಾಸದಲ್ಲೇ ಸಂಗೀತದಲ್ಲಿ ಪಾಲುಗೊಂಡರು.

ಘೋಟುಲ್, ಆದಿಮಾನವನ ಕಾಲದಿಂದಲೂ ಬೆಳೆದುಬಂದ ಜೀವನ ಶಿಕ್ಷಣ ಸಂಸ್ಥೆ ಎಂದು ಮಾನವ ಶಾಸ್ತ್ರಜ್ಞರ ಅಭಿಪ್ರಾಯ. ಇದೊಂದು ಜೀವಂತ ವಿದ್ಯಾಲಯ. ಇಲ್ಲಿ ಪುಸ್ತಕದ ಪಾಂಡಿತ್ಯ, ಔಪಚಾರಿಕ ಶಿಕ್ಷಣಕ್ಕೆ ಬೆಲೆಯಿಲ್ಲ. ದಿನವೂ ಬಾಳಿ ಬದುಕುವ ಬಗೆಯ ವಿದ್ಯೆ ನೀಡಲಾಗುತ್ತದೆ. ವಿದ್ಯಾರ್ಥಿಗಳೇ ಪ್ರಾಧ್ಯಾಪಕರು, ಪ್ರಾಧ್ಯಾಪಕರೇ ವಿದ್ಯಾರ್ಥಿಗಳಾಗಿರುವ ಈ ಸಂಸ್ಥೆ ನಾಗರಿಕ ಪ್ರಪಂಚಕ್ಕೊಂದು ವಿಸ್ಮಯವಾಗಿದೆ. ಮುರಿಯಾ ಆದಿವಾಸಿಗಳಿಗೆ ಘೋಟುಲ್ ಒಂದು ಕಿರಿ ವಿಶ್ವ. ಹಳ್ಳಿಯ ಹೊರಗೆ ಅದು ಇರುವದು ವಾಡಿಕೆ. ಊರ ಜನರು ಇದಕ್ಕಾಗಿಯೇ ಪ್ರತ್ಯೇಕ ಸ್ಥಳವನ್ನು ಮೀಸಲಿಡುತ್ತಾರೆ. ಅಮೆರಿಕದ 'ಲ್ಯಾಂಡ್‌ಗ್ರಾಂಟ್' ಕೃಷಿ ವಿಶ್ವವಿದ್ಯಾಲಯಗಳು ಅಸ್ತಿತ್ವದಲ್ಲಿ ಬರುವ ಹಲವು ಶತಮಾನಗಳ ಪೂರ್ವದಲ್ಲಿಯೇ ಘೋಟುಲ್‌ಗಳಿಗಾಗಿ ಹೊಲಗಳನ್ನು ಬಿಟ್ಟುಕೊಡುವ ಪದ್ಧತಿ ಪ್ರಚಾರದಲ್ಲಿತ್ತು. ಘೋಟುಲದ ಆವಾರದಲ್ಲಿ ಕಾಯಿಪಲ್ಲೆ ಮತ್ತು ಇತರೆ ಬೆಳೆಗಳನ್ನು ಬೆಳೆಯುತ್ತಾರೆ. ಘೋಟುಲ್, ಹಳ್ಳಿಯ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವೂ ಹೌದು. ಹಳ್ಳಿಯ ಆರು ವರ್ಷಕ್ಕೆ ಮೇಲ್ಪಟ್ಟ ಮಕ್ಕಳೆಲ್ಲ ಇದರ ಸದಸ್ಯರು. ಹಿಂದಿನ ಕಾಲದ ಅರಸುಕುಮಾರರು ಋಷಿಗಳ ಆಶ್ರಮದಲ್ಲಿ ಶಿಕ್ಷಣಕ್ಕಾಗಿ ಬೇರೆಯೇ ಜೀವನ ನಡೆಸಬೇಕಾಗುತ್ತಿತ್ತು. ಅದರಂತೆ ಚಿಲಕ್ (ಕುಮಾರರು), ಹೊಸ ಹೆಸರು ಪಡೆದು ಹೊಸ ಚಟುವಟಿಕೆಗಳಲ್ಲಿ ಘೋಟುಲದ ನಿಯಮಗಳನ್ನು ಪಾಲಿಸಿ, ಪಾಲಕರ ಸ್ಥಿತಿಗತಿಗಳನ್ನು ಮರೆತು ಎಲ್ಲ ಚಿಲಕ್‌ರೊಂದಿಗೆ ಬೆರೆತು ಸಾಂಘಿಕ ಜೀವನ ನಡೆಸಬೇಕಾಗುತ್ತದೆ.

ಬಂದ ಎಳೆಯರಲ್ಲಿ ಕೆಲವರು ಉರಿಯುತ್ತಿರುವ ಬೆಂಕಿಯ ಸುತ್ತ ಕಿರುಮಣೆಗಳನ್ನು ಹಾಕಿ ಕುಳಿತು ಚಳಿ ಕಾಸಲಾರಂಭಿಸಿದರು. ಹುರುಪಿನ ಹಲವರು ಎದುರ ಕಿರು ಬಯಲಲ್ಲಿ ಹಾಡುತ್ತ ಕುಣಿಯಲಾರಂಭಿಸಿದರು. ಮೃದಂಗ ಕೊಳಲಿನವರು ಹಿಮ್ಮೇಳ ಪೂರೈಸಿದರು. ಕಥೆ ಹೇಳುವದು, ಅಂದಿನ ಸ್ವಾರಸ್ಯದ ಘಟನೆಗಳ ವಿನಿಮಯ ನಡೆದವು. ದಿನವಿಡೀ ದುಡಿದು ದಣಿದ ಕೆಲವರು ವಿಶ್ರಾಂತಿ ಪಡೆದರು. ತುಸು ದೊಡ್ಡವರು ಧಿಗ್ಗನೆ ಎದ್ದು ಕುಳಿತು, ಅದೇ ಒಡೆದ ಕಂಠದಿಂದ ಹಾಡಲಾರಂಭಿಸಿದರು.

ಜುಳು ಜುಳು ಹರಿಯುವ ಹೊಳೆಯೊಂದು,  
ಪರ್ವತರಾಜಗೆ ಕನ್ನಡಿಯಾಗಿಹುದು.

ಬೆಟ್ಟವಡಿಯಲಿ ನುಡಿಸು ಮುರಲಿಯನು
ಕೈ ಕಾಲೊಡವೆಯ ಧ್ವನಿಗೂಡಿಸುತ
ಆಲಿಸ ಬರುವರು ಕುವರಿಯರು

ಇನಿದಾಗಿ ನುಡಿಸು ಮುರಲಿಯನು
ಹೊಮ್ಮಿಸು ಸಪ್ತಸ್ವರಗಳನು
ಹದಿನಾರೊಡವೆಯ ಕುವರಿಯರು
ಹದಿನಾಲ್ಕು ವರ್ತುಲಗಳಲ್ಲಿ ಕುಣಿದಾರು.

ಹಾಡಿಗೆ ಹೊಂದಿ ಕೊಳಲಿನವ ಜೋರಾಗಿ ನುಡಿಸಲು ಯತ್ನಿಸಿದ. ಉತ್ಸಾಹಗೊಂಡ ಧೀರೆಯೊಬ್ಬಳು ಧ್ವನಿಯೆತ್ತರಿಸಿ ಹಾಡಲಾರಂಭಿಸಿದಳು :

*ಪೊದೆಗಳಲಿ ಅಡಗಿ ನುಡಿಸುವಿಯಾ ಕೊಳಲನು ?*
*ಯಾವ ರಾಧೆ ಆಲಿಸುವಳೋ ನಿನ್ನ ನಾದವನು !*

*ನಿನಗಾರೂ ಬಂಧುಗಳಿಲ್ಲವೇನು ?*
*ಈ ಇರುಳಿನಲಿ ಯಾರಿಗಾಗಿ ಹಂಬಲಿಸುವೆಯೋ ?*
*ಒಂಟಿತನ ಬಿಡು, ನಮ್ಮೊಂದಿಗೆ ಒಂದಾಗು*
*ಇಲ್ಲದಿರೆ ಚೇಳು ಕಡಿದು ಬೊಬ್ಬೆಯಿಟ್ಟರೂ*
*ಸಂತೈಸಲು ಯಾವ ಗೆಳತಿಯೂ ಬರಳು ನಿನ್ನೆಡೆ !*

ಹಾಡಿಗೆ ಧ್ವನಿಗೂಡಿಸಿದ ಕುಮಾರಿಯೊಬ್ಬಳು ಕಪ್ಪೆಯಂತೆ ಜಿಗಿದು ಬಿದ್ದಾಗ ಎಲ್ಲರೂ ಗೊಳ್ಳನೆ ನಕ್ಕರು. ನಂತರ ಎದ್ದು ತುಂಡು ಸೀರೆಯನ್ನು ಝಾಡಿಸಿದಾಗ ಮರಿಕಪ್ಪೆಯೊಂದು ಹೊರಬಿದ್ದಾಗ, ನೆರೆದವರೆಲ್ಲ ಹೊಟ್ಟೆ ಹಿಡಿದು ನಕ್ಕರು. ಈ ತುಂಟತನ ಯಾರು ಮಾಡಿರಬಹುದು ? ಎಂದು ಕುಮಾರಿ ಕೊನೆಗೊಮ್ಮೆ ಪತ್ತೆಹಚ್ಚಿ ಹುಡಗನನ್ನು ಬಲವಾಗಿ ಗುದ್ದಿದಳು. ಇದರ ಸೇಡನ್ನು ರಾತ್ರಿ ತೀರಿಸದೆ ಬಿಡುವದಿಲ್ಲವೆಂದು ಆತ ಉದ್ಗರಿಸಿದ.

ಕಿರಿಯನೊಬ್ಬ ತಿಂದ ಅನ್ನ ಜೀರ್ಣಿಸಿಕೊಂಡರೂ, ಕಾಡ ಕಡೆಗೆ ಹೋಗದೆ ಗಡಿಬಿಡಿಯಿಂದ ಬಂದನೆಂದು ಕಾಣುತ್ತದೆ. ಆ ವಾತಾವರಣದಲ್ಲಿ ಕೇಳಿಬಂದ ಸ್ಫೋಟ ಮತ್ತು ಪಸರಿಸಿದ ದುರ್ಗಂಧಗಳಿಂದಾಗಿ ಎಲ್ಲರೂ ಆ ಅಸಭ್ಯ ವರ್ತನೆಗೆ ಅವನನ್ನು ಶಿಕ್ಷಿಸಲೇ ಬೇಕೆಂದರು, ಕಿವಿ ಹಿಡಿದು ಹತ್ತು ಬೈಠಕ್ಕುಗಳನ್ನು ಅವನು ತೆಗೆಯಬೇಕಾಯಿತು.

ಅಷ್ಟರಲ್ಲಿ ಹೊರಬಾಗಿಲಿಗೆ ತೂಗು ಹಾಕಿದ ಕಟ್ಟಿಗೆಯ ಧುಡಕಾ (ಗಂಟೆ) ಬಾರಿಸಿತು. ಘೋಟುಲದ ಇರುಳ ಕಾರ್ಯಕ್ರಮಗಳು ಪ್ರಾರಂಭವಾದವು. ಹೊಸದಾಗಿ ಭರ್ತಿಯಾದ ಮಕ್ಕಳು ಹಿರಿಯರಿಗೆ ನಮಸ್ಕರಿಸಿದವು. ಅಂದಿನ ವಿವಿಧ ಕೆಲಸಗಳ ಪರಾಮರ್ಶೆಯಾಯಿತು. ಕಾಡಿನಿಂದ ಉರುವಲ ತಂದದ್ದು, ಕಾಯಿಪಲ್ಲೆ ಬೆಳೆದದ್ದು, ಘೋಟುಲದ ಕಸ ತೆಗೆದದ್ದು, ಸಾರಿಸಿದ್ದು, ಬೂದಿ ತೆಗೆದದ್ದು, ದೊನ್ನೆಗಳನ್ನು ರಚಿಸಿದ್ದು – ಎಲ್ಲಾ ಸರಿಯಾಗಿದೆಯೇ ಎಂದು ಪರಿಶೀಲಿಸಿದರು. ಯುವ ವಿದ್ಯಾರ್ಥಿಗಳು, ತಪ್ಪಿತಸ್ಥರಿಗೆ ಚಿಕ್ಕಪುಟ್ಟ ಶಿಕ್ಷೆ ವಿಧಿಸಿದರು. ಬೈಠಕ್ ತೆಗೆಯುವದು, ಸ್ವಲ್ಪ ದೊಡ್ಡ ತಪ್ಪಿಗೆ ಮಾಡಿನಿಂದ ಜೋತು ಬೀಳುವದು, ಛಡಿಯೇಟು, ಚಳಿಯಲ್ಲಿ ನಿಲ್ಲಿಸುವದು ಇತ್ಯಾದಿ ಇತರ ಶಿಕ್ಷೆಗಳು. ಒಬ್ಬ ಕಿರಿಯ ಎಲ್ಲರಿಗೂ ತಂಬಾಕು ಹಂಚಿದ. ಅನಂತರ ಎಲ್ಲರೂ ಒಂದೆಡೆ ಸೇರಿ ತಿರುಗಿ ಹಾಡು, ಕತೆ, ಒಗಟುಗಳನ್ನು

ಹೇಳಲಾರಂಭಿಸಿದರು. ದೋಷವನ್ನು ಹೇಳು ಎಂದಾಗ ರಸಿಕ ಯುವಕನೊಬ್ಬ:

*ದಿನ್ನೆಗಳೆರಡು, ಕಣಿವೆಯೊಂದು,*
*ಹತ್ತಿ ಇಳಿಯೋನು ಯಾರೋ ಅವನು...*

ಎಂದಾಗ ಹುಡುಗರೆಲ್ಲ ಕೇಕೆ ಹಾಕಿ ನಕ್ಕದ್ದರಿಂದ ಕಿಶೋರಿಯರಿಗೆ ಅವಮಾನವಾಯಿತು. ಅವರೂ ಹಾಡು ಕಟ್ಟಿದ್ದರು.

*ಜೇನಿನ ಕಥೆ, ಗೆಳತಿ ಕೇಳು*
*ದುಡಿಯೋದು ಹೆಣ್ಣು, ಜೇನು ಒಟ್ಟೋದು ಹೆಣ್ಣು*
*ರಾಣಿಯೊಂದಿಗೆ ಸರಸ, ಮಧುಪಾನಕ್ಕೆ ಗಂಡು*
*ಮುರಿಯಾ ಗಂಡು ಬರೇ ಮೊದ್ದು*
*ಹೆಣ್ಣು-ಹೆಂಡವೊಂದೇ ಅದಕ್ಕೆ ಗೊತ್ತು!*

ಒಬ್ಬರನ್ನೊಬ್ಬರು ಛೇಡಿಸಿ ಕೆರಳಿಸಿ ವಿನೋದ ಮುಂದುವರಿಯುತ್ತಿದ್ದಂತೆ ಕೊತವಾಲನು ರಾತ್ರಿ ಬಹಳವಾಗುತ್ತಿದೆ ಎಂದು ಎಚ್ಚರಿಸಿದ್ದರಿಂದ ಮುಂದಿನ ಕಾರ್ಯಕ್ರಮ ಕೈಗೊಳ್ಳಲಾಯಿತು. ಹಿರಿಯ ಮೋತಿಯಾರಿ (ಕುಮಾರಿ) ಅಂದಿನ ಚಾಪೆಯ ಪಾಲುಗಾರರು ಯಾರು ಯಾರು ಎಂದು ಜೋಡಿಗಳ ಹೆಸರು ಹೇಳಿದ ನಂತರ ಕಿರಿಯರೆಲ್ಲ ಹಿರಿಯರಿಗೆ ನಮಸ್ಕಾರಗಳನ್ನು ಹೇಳಿದರು. ತಮ್ಮ ತಮ್ಮ ಚಾಪೆಗಳನ್ನು ಆಕ್ರಮಿಸಿದರು.

ಮೋತಿಯಾರಿ ಅಂದಿನ ಗೆಳೆಯನ ಮಂಡೆಯನ್ನು ಬಿಡಿಸಿ ಎಣ್ಣೆ ಹಚ್ಚಿ ಕೂದಲು ಹಿಕ್ಕಲಾರಂಭಿಸುತ್ತಾಳೆ. ಆಗೊಂದು ಈಗೊಂದು ಸಿಕ್ಕ ಹೇನನ್ನು ಜೋರಾಗಿ ಒರೆಯುತ್ತ, "ಕೂದಲು ಜಾಸ್ತಿ ಬೆಳೆದಿದೆ, ಯಾವಾಗ ಕತ್ತರಿ ಕಾಣಿಸುತ್ತೀಯ ?" ಎಂದು ಎಚ್ಚರಿಸುತ್ತಾಳೆ. ನಂತರ ಭುಜ, ಮೈ ಕೈಗಳಿಗೆ ಕೊಂಚ ಮಹುವಾ ಎಣ್ಣೆ ಸವರಿ ಮೃದುವಾಗಿ ನೀವುತ್ತಾಳೆ. ಬೆರಳುಗಳ ಲಟಿಕೆ ಮುರಿಯುತ್ತಾಳೆ. ಅವಳ ದೇಹದ ಉಬ್ಬು ತಗ್ಗುಗಳ ಸ್ಪರ್ಶದಿಂದ ಪುಲಕಿತನಾದ ಚಿಲಕ್, ರಸಿಕ ಸಂಭಾಷಣೆಗೆ ಎಳೆಯುತ್ತಾನೆ. ಇದನ್ನೇ ಎದುರು ನೋಡುತ್ತಿದ್ದ ಕುಮಾರಿ ತನಗೊಂದು ಬಾಚಣಿಗೆ ಮಾಡಿಕೊಡು ಎಂದು ಪಿಸುಗುಡುತ್ತಾಳೆ. "ನನ್ನವಳಾಗಲು ಒಪ್ಪಿದರೆ ಮಾತ್ರ" ಎಂದು ಅವನೆಂದಾಗ ಆಕೆ ನಿರಾಕರಿಸುತ್ತಾಳೆ. ಈ ನಿರಾಕರಣೆಯ ಅರ್ಥ ಒಪ್ಪಿಗೆ ಎಂದು ಚಿಲಕ್ ಸಮೂಹದ ಅನುಭವ !

ಅಮೇರಿಕನ್ ಕುಮಾರಿಯರಲ್ಲಿ ಪ್ರೇಮದ ದ್ಯೋತಕ, ಪಿನ್‌ಗಳು. ಅವುಗಳ ಸಂಖ್ಯೆ ಯುವಕರಲ್ಲಿ ಅವಳ ಬೇಡಿಕೆಯನ್ನು ಸೂಚಿಸುವಂತೆ, ಮೋತಿಯಾರಿಗಳಿಗೆ ಬಾಚಣಿಗೆ ಗಳಿರುತ್ತವೆ. ಬಾಚಣಿಗೆಗಳ ಹೆಚ್ಚಿನ ಸಂಗ್ರಹ ಇರುವವರಿಗೆ ಮಾನ್ಯತೆ ಹೆಚ್ಚು. ಅವನ್ನು ಕೇಶರಾಶಿಯಲ್ಲಿ ಆಭರಣಗಳಂತೆ ಓರಣವಾಗಿ ಸಿಗಿಸಿರುತ್ತಾರೆ. ಚಿಲಕ್‌ನು ಇವನ್ನು ಕಟ್ಟಿಗೆ ಇಲ್ಲವೇ ಬಿದಿರಿನಿಂದ ಮಾಡಿಕೊಡುತ್ತಾನೆ. ರಸಿಕ ಚಿಲಕ್‌ನು ಹಳ್ಳಿಯ ಸಂತೆಗೆ ಹೋದಾಗ ಗಿಲೀಟಿನ ತಗಡನ್ನು ತಂದು ಅವಕ್ಕೆ ಜೋಡಿಸಿ ಕೊಡುವದೂ ಉಂಟು. ಚಿಲಕರು ಕೂದಲಲ್ಲಿ ಬಾಚಣಿಗೆ ಧರಿಸುತ್ತಾರೆ. ಆದರೆ ಅವರು ಅಂದಚೆಂದಕ್ಕೆ ಮಹತ್ವ ಕೊಡುತ್ತಾರೆಯೇ ಹೊರತು ಸಂಖ್ಯೆಗೆ ಅಲ್ಲ. ಮೋತಿಯಾರಿಗೆ ಚಿಲಕನೊಬ್ಬನ ಮೇಲೆ ಮನಸ್ಸಾದರೆ ಅವಳು ಅವನ ಬಾಚಣಿಗೆಯನ್ನು ಕದ್ದು ಇಟ್ಟುಕೊಳ್ಳುತ್ತಾಳೆ. ಆಗ ಆತ ಅವಳ ಹೃದಯವನ್ನು ಕದಿಯಬಹುದು. ಹೀಗಾಗುವುದು ಘೋಟುಲಕ್ಕೆ ತೊಂದರೆ ಕೊಡುವ ವಿಷಯವಾದ್ದರಿಂದ ಬಾಚಣಿಗೆಯನ್ನು ಉಡುಗೊರೆಯಾಗಿ ಕೊಡಬೇಕಾದರೆ, ಯುವ ಅಧಿಕಾರಿಗಳ ಮುಖಾಂತರವೇ ಕೊಡಬೇಕು. ಇಲ್ಲವೇ ಅವರ ಅಪ್ಪಣೆ ಪಡೆದೇ ಕೊಡಬೇಕು ಎಂಬ ಕಡ್ಡಾಯವಿದೆ.

ಚಿಕ್ಕವರು ಉರುವಲಿಗಾಗಿ ಕಟ್ಟಿಗೆ ತಂದು ಶೇಖರಿಸುವದು, ಬೀಡಿ, ತಂಬಾಕುಗಳನ್ನು ಹಂಚುವದು, ಮಾಡುತ್ತಾರೆ. ಚಿಲಕರು ಹೊಲಗಳಲ್ಲಿ ದುಡಿಯುವರು, ಬೆಳೆ ಕೊಯ್ಯುವರು, ಧಾನ್ಯ ಬಡಿಯುವರು, ಕಾಡಿನಿಂದ ಕಟ್ಟಿಗೆ ತರುವರು, ಬೇಟೆಯಾಡುವರು, ಮೀನು ಹಿಡಿಯುವರು, ಬಲೆ ಹೆಣೆಯುವರು, ಚಪ್ಪರ ಹೊದಿಸುವರು, ಮೋತಿಯಾರಿಗಳು ಅಡಿಗೆ ಮಾಡುವದು, ದೊನ್ನೆಗಳನ್ನು ರಚಿಸುವದು, ಸ್ವಚ್ಛತೆ ಕಾಪಾಡುವದು, ನೀರು ತರುವದು, ಅಲಂಕಾರ ಮಾಡಿಕೊಳ್ಳುವದು ಮುಂತಾದ್ದಕ್ಕೆ ವೇಳೆ ಮೀಸಲಿಡುತ್ತಾರೆ.

ಘೋಟುಲದ ಕಟ್ಟಡ ಒಂದು ಗುಡಿಸಲಿನಂತೆ ಇರಬಹುದು. ದೊಡ್ಡ ಬೈಠಕ್ ಖಾನೆಯಂತೆ ಇರಬಹುದು. ಹಲವು ಹಳ್ಳಿಗಳಲ್ಲಿ ಚಳಿಗಾಲಕ್ಕಾಗಿ ಬೆಳಕು, ಗಾಳಿಯಾಡದ ಕಟ್ಟಡ ಒಂದಿದ್ದರೆ, ಬೇಸಿಗೆಯಲ್ಲಿ ಕೇವಲ ಮಾಡು ಇರುವ ಪಡಸಾಲೆಯೊಂದಿರುತ್ತದೆ. ಹಳ್ಳಿ ಬೆಳೆದು, ಸದಸ್ಯರು ಹೆಚ್ಚಾದರೆ ಒಂದೆರಡು ಪ್ರತ್ಯೇಕ ಗುಡಿಸಲುಗಳನ್ನು ಕಟ್ಟುತ್ತಾರೆ. ಕಾಡುಪ್ರಾಣಿಗಳ ತೊಂದರೆ ಹೆಚ್ಚು ಇದ್ದಲ್ಲಿ ಘೋಟುಲವನ್ನು ಮಂಚಲಿನಂತೆ ಎತ್ತರದ ಮೇಲೆ ಕಟ್ಟುವ ಪರಿಪಾಠವಿದೆ.

ಎಳೆಯರ ಚಟುವಟಿಕೆಗಳೆಲ್ಲ ಹೊರಾಂಗಣದಲ್ಲಿ ಸದಾಕಾಲ ಉರಿಯುವ ಬೆಂಕಿಯ ಸುತ್ತ ಇಲ್ಲವೇ ಪಡಸಾಲೆಯಲ್ಲೇ ಜರುಗುತ್ತವೆ. ಮಲಗಲು ಮಾತ್ರ ಮುಖ್ಯ ಕಟ್ಟಡವನ್ನು ಬಳಸಲಾಗುತ್ತದೆ. ಈ ಕಟ್ಟಡದ ಗೋಡೆ, ನೆಲಗಳನ್ನು ಮಣ್ಣು ಮೆತ್ತಿ, ಅರೆದು ನುಣುಪು ಮಾಡಿರುತ್ತಾರೆ. ಗೋಡೆಗಳ ಮೇಲೆ ಆನೆ, ನವಿಲುಗಳಂತಹ ಉಬ್ಬು ಚಿತ್ರಗಳನ್ನು ಹಚ್ಚಿರುತ್ತಾರಲ್ಲದೆ, ಸುಗ್ಗಿ ಹಬ್ಬಕ್ಕೆ ಯಶಕೋರಿ ಅಕ್ಕಿ ಹಿಟ್ಟಿನಿಂದ ರಚಿಸಿದ ರಂಗೋಲೆಯಂತಹ ನಕ್ಷೆ (ಧಪ್ಪಾ)ಗಳು ಇರುತ್ತವೆ. ಅಲ್ಲದೆ ಸಮಯಸ್ಫೂರ್ತಿಯಿಂದ, ಇದ್ದಲ ಚೂರಿನಿಂದ ಬಿಡಿಸಿದ ಹೆಣ್ಣಿನ ಹಲವು ಚಿತ್ರಗಳೂ ಗೋಡೆಗಳನ್ನು ಅಲಂಕರಿಸಿರುತ್ತವೆ. ಸ್ತನ, ಜನನೇಂದ್ರಿಯ ಗಳನ್ನು ಬೃಹದಾಕಾರದಲ್ಲಿ ಬಿಡಿಸಿರುವದು ಇಂತಹ ಚಿತ್ರಗಳ ವೈಶಿಷ್ಟ್ಯ.

ಸರಳತೆ, ಸಮಾನತೆ, ಸ್ವಾತಂತ್ರ್ಯಗಳು ಘೋಟುಲ ಜೀವನದ ಜೀವಾಳ. ಗಂಡು-ಹೆಣ್ಣು ಎಂಬ ಅಂತರವಿಲ್ಲದೆ ಅವರೆಲ್ಲ ಉಣ್ಣುತ್ತಾರೆ, ಉಡುತ್ತಾರೆ, ಓಡಾಡುತ್ತಾರೆ. ಚಿಲಕ್-ಮೋತಿಯಾರಿಗಳು ಜೊತೆಯಾಗಿಯೇ ನದಿಯಲ್ಲಿ ನಗ್ನರಾಗಿ ಈಸಾಡುವಷ್ಟು ಸಮಾನತೆ ಅವರಲ್ಲಿ. ಅಂತೆಯೇ ಘೋಟುಲದಲ್ಲಿ ಜೋಡಿಗೆ ಒಂದು ಚಾಪೆ ಸ್ವಾಭಾವಿಕವಾಗಿ ಪೂರೈಸಲಾಗುತ್ತದೆ. ಅತ್ಯಾಧುನಿಕರು, ಅತಿ ಮುಂದುವರಿದವರೆನಿಸಿಕೊಂಡ ಸ್ತ್ರೀ-ಪುರುಷರಲ್ಲಿ ಅಂತರ ಕಡಿಮೆ ಇರುವ ಅಮೆರಿಕನ್ ಸಮಾಜ ಕೂಡ ಅವಿವಾಹಿತ ಯುವಕ-ಯುವತಿಯರು ಒಂದೇ ಹಾಸಿಗೆಯಲ್ಲಿ ವಿಶ್ರಮಿಸುವದನ್ನು ಮನ್ನಿಸುವದಿಲ್ಲ. ಮುರಿಯರ ಈ ಪದ್ಧತಿ, ಆದಿಮಾನವರಲ್ಲಿದ್ದ ಗಂಡು-ಹೆಣ್ಣಿನ ಸಮಾನತೆ ಸೂಚಿಸುವದರ ಜೊತೆಗೆ ಶತಕಗಳಲ್ಲಿ ಬೆಳೆದು ಬಂದ ಲಿಂಗಭೇದವನ್ನು ತೋರಿಸುತ್ತದೆ. ಹತ್ತು ಹನ್ನೆರಡು ವರ್ಷದಿಂದಲೇ ಚಿಲಕನು ಮೋತಿಯಾರಿಯೊಂದಿಗೆ ಸಂತೆಗೆ, ಜಾತ್ರೆಗೆ, ನೃತ್ಯಕ್ಕೆ ಹೋಗುವದನ್ನು ನೋಡಿದಾಗ, ಸುಸಂಸ್ಕೃತರು ನಾವೋ ಅವರೋ ಎಂದು ಯೋಚಿಸಬೇಕಾಗುತ್ತದೆ. ಸಹಜೀವನವನ್ನು ಪ್ರೋತ್ಸಾಹಿಸಬೇಕು, ಮಕ್ಕಳಿಗೆ ಲೈಂಗಿಕ ಶಿಕ್ಷಣವನ್ನು ಕೊಡಬೇಕು ಎಂದು ವಾದಿಸುವವರು, ಈ ವಿಚಾರಗಳನ್ನು ಘೋಟುಲಗಳಲ್ಲಿ ಹೇಗೆ ತೀರ ಸ್ವಾಭಾವಿಕವಾಗಿ ಸಾಧಿಸಿದ್ದಾರೆ ಎಂಬುದನ್ನು ಅಭ್ಯಸಿಸಬೇಕು. ಘೋಟುಲದ ಕಾರಭಾರವನ್ನೆಲ್ಲ ಅವರೇ ನಡೆಸುವದರಿಂದ ಹಳಬರಿಗೆ ಬುದ್ಧಿಯಿಲ್ಲ, ಶಿಕ್ಷಕರಿಗೆ ಕಲಿಸಲು ಬರುವದಿಲ್ಲ, ಪಠ್ಯಪುಸ್ತಕಗಳು ಸರಿಯಾಗಿಲ್ಲ, ಫೀ ಹೆಚ್ಚಾಯಿತು ಎಂಬ ನೆಪದ ಮೇಲೆ ಸಂಪು ಹೂಡುವದು, ಘೇರಾವ್ ಹಾಕುವದು, ಬಸ್ಸುಗಳ ಮೇಲೆ ಕಲ್ಲು ತೂರುವದು, ವಾಹನಗಳಿಗೆ ಬೆಂಕಿಯಿಡುವದು ಮುಂತಾದ ಪ್ರಮೇಯವೇ ಇಲ್ಲ.

ಪ್ರೇಮಿಗಳು ಕದ್ದು ಪತ್ರ ವ್ಯವಹಾರ, ಪ್ರೇಮದ ಹೆಸರಿನಲ್ಲಿ ಹಣದ ಅಪವ್ಯಯ, ನೋವು, ಭವಿಷ್ಯದ ಹಾನಿ ಇವೆಲ್ಲ ಇಲ್ಲವೇ ಇಲ್ಲ. ಅತ್ಯಾಧುನಿಕರು ಬಿಡಿಸಲು ಹೆಣಗುವ ಯುವಜನರ ಸಮಸ್ಯೆಗಳನ್ನು ಮುರಿಯರು ಶತಕಗಳ ಹಿಂದೆಯೇ ಹೋಗಲಾಡಿಸಿದ್ದಾರೆ!

ಘೋಟುಲಗಳಲ್ಲಿ ಪ್ರೇಮ-ಕಾಮಗಳ ನಡುವಿನ ಅಂತರವನ್ನು ಗಣನೆಗೆ ತಂದುಕೊಳ್ಳುವದಿಲ್ಲ. ಅಂತೆಯೇ ಪ್ರತಿದಿನದ ಚಾಪೆ-ಜೋಡಿಗಳನ್ನು ಹೆಸರಿಸಿದ ನಂತರ ಸದಸ್ಯರೆಲ್ಲ ಸ್ವತಂತ್ರರು. ಚಿಕ್ಕ ಮಕ್ಕಳ ವಿಷಯದಲ್ಲಿ ಅಧಿಕಾರಿಗಳು ತಲೆಕೆಡಿಸಿಕೊಳ್ಳುವದಿಲ್ಲ. ಅವರು ತಮಗೆ ಸರಿಕಂಡವರೊಡನೆ ಮಲಗುತ್ತಾರೆ. ಬಾಲ್ಯದಲ್ಲಿ ಅಣ್ಣ ತಂಗಿಯರಂತೆ ಒಟ್ಟಿಗೆ ಮುದುಡಿಕೊಂಡು ಮಲಗಿದರೆ ಸ್ವಲ್ಪ ಬೆಳೆದ ನಂತರ, ಒಬ್ಬರ ಕಾವಿಗೆ ಇನ್ನೊಬ್ಬರು, ಒಬ್ಬರ ಹೃದಯದ ಮಿಡಿತ ಇನ್ನೊಬ್ಬರಿಗೆ ಕೇಳಿಸುವಂತೆ ಮಲಗುತ್ತಾರೆ. ಒಂದೇ ಕೋಣೆಯಲ್ಲಿ ಸಹೋದರ ಸಹೋದರಿಯರು ತಮ್ಮ ತಮ್ಮ ಪ್ರಿಯೆ-ಪ್ರಿಯತಮರೊಡನೆ ವಿರಮಿಸುವ ಅವಕಾಶ ನೀಡುವ ಸಮಾಜ ವಿಶ್ವದಲ್ಲಿ ಇನ್ನೊಂದು ಇದೆಯೋ ಇಲ್ಲವೋ!

ಇದರಿಂದಾಗಿ ಅರಿಯದವರಿಗೆ, ಕಿರಿಯರಿಗೆ ಶಿಕ್ಷಣವೂ ಕೊಟ್ಟಂತೆ ಆಗುತ್ತದೆ. ಅಕ್ಕಪಕ್ಕದಲ್ಲಿ ಪ್ರೇಮ ಕಲಹ, ಪ್ರಣಯ ಕ್ರೀಡೆಗಳಲ್ಲಿ ಹಿರಿಯ ಜೋಡಿಗಳನ್ನು ನೋಡಿ ಕಿರಿಯರು ಅದನ್ನು ಅನುಕರಿಸುತ್ತಾರೆ. ಇವರ ಪ್ರಣಯಾವಸ್ಥೆ ಬಾಲ್ಯದಿಂದಲೇ ಪ್ರಾರಂಭವಾಗುತ್ತದೆ. ಮೋತಿಯಾರಿ ಎಷ್ಟೇ ಚಿಕ್ಕವಳಿದ್ದರೂ ಈ ವಿಷಯದಲ್ಲಿ ಚದುರೆ. ಚಿಲಕರು, ತಮಗೆ ಬಂದ ಅಡಚಣೆ, ಅಡ್ಡಿ-ಆತಂಕ-ಸಂಶಯಗಳನ್ನು ತಮಗಿಂತ ಹಿರಿಯರಿಗೆ ಕೇಳಿ ಪರಿಹಾರ ಪಡೆಯುತ್ತಾರೆ. ಇದಕ್ಕಾಗಿ ಯಾರೂ ನಾಚಿಸುವದಿಲ್ಲ, ಪರಿಹಾಸ ಮಾಡುವದಿಲ್ಲ. ಎಂತಹ ತಿಳಿ ಹೃದಯದವರು!

ಹೆಚ್ಚಿನ ಚಿಲಕರು ಬೆಳೆ ಕಾಯಲು ಹೊಲದ ಮಂಚಲಿಗೆ ಮಲಗ ಹೋದಾಗ, ಇಲ್ಲವೇ ಬೇರೆ ಹಳ್ಳಿಗೆ ಹೋದಾಗ, ಕಿರಿಯ ಚಿಲಕರು ಮೋತಿಯಾರಿಗಳಿಗೆ ಸಂಗಾತಿಗಳಾಗುವದುಂಟು. ಅಂತಹ ಅವಕಾಶಗಳಲ್ಲಿ ಈ ಕಿರಿಯರಿಗೆ ತರಬೇತಿ ಸಿಗುತ್ತದೆ. ಶರೀರವನ್ನು ನಿಸರ್ಗಕ್ಕೆ ಹೋಲಿಸಿ ಅಲ್ಲಿಯ ತಗ್ಗು ದಿನ್ನೆಗಳಂತೆಯೇ ಇಲ್ಲಿಯೂ ಇರುವದಾಗಿ ವಿವರಿಸುತ್ತಾಳೆ. ವಸಂತ ಋತುವಿನಲ್ಲಿ ನಿಸರ್ಗಮಾತೆ ಫಲಪುಷ್ಪ ತಳೆಯುವಂತೆ, ಪ್ರತಿ ಹುಡುಗ-ಹುಡುಗಿಯರಲ್ಲೂ ವಸಂತಕಾಲ ಇರುವದಾಗಿ ಹೇಳಿ ಶರೀರ ಪ್ರಕ್ರಿಯೆಯ ರೂಢಿಪಾಠ ಮಾಡಿಕೊಳ್ಳುತ್ತಾಳೆ. ಬಹುಶಃ ಇದೇ ಕಾರಣಕ್ಕಿರಬೇಕು. ಘೋಟುಲದ ಚಟುವಟಿಕೆಗಳ, ಆಗುಹೋಗುಗಳ ಬಗೆಗೆ ಯಾವುದೇ ರೀತಿಯ ಸಮಾಚಾರ ಹೊರಗೆಡವಬಾರದು - ಎಂಬ ಕಟ್ಟಪ್ಪಣೆ ಇರುತ್ತದೆ. ಇದನ್ನು ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆ ಇರುತ್ತದೆ.

ಘೋಟುಲದಲ್ಲಿ ಪ್ರೇಮ-ಕಾಮಕ್ಕೆ ಯಾವ ಅಪ್ಪಣೆ ಬೇಕಿರದ್ದರಿಂದ, ಅಡಚಣೆಗಳು ಇಲ್ಲದ್ದರಿಂದ ವಿಕೃತಿಗೆ ಆಸ್ಪದವೇ ಇಲ್ಲ. ಹಸಿವೆ, ನಿದ್ರೆಗಳಷ್ಟು ಅದು ಸಹಜವಾಗಿದೆ. ನಾಗರಿಕ ದಾಂಪತ್ಯ ಜೀವನದಲ್ಲಿ ಪ್ರೇಮ, ಪುರುಷನ ಹಕ್ಕು, ಸ್ತ್ರೀಯ ಕರ್ತವ್ಯ. ಘೋಟುಲದಲ್ಲಿ ಅದು ಮೋತಿಯಾರಿಯ ಹಕ್ಕು, ಚಿಲಕನ ಕರ್ತವ್ಯ. ಅಂತೆಯೇ ಪ್ರಚೋದನೆಯಲ್ಲಿ ಆಕೆಯೇ ಮುಂದಾಗುತ್ತಾಳೆ. ಅರಸಿಕ ಚಿಲಕನನ್ನು ಹಂಗಿಸುತ್ತಾಳೆ. ಸುಂದರ, ಆಕರ್ಷಕ ಯುವತಿ, ಯಾರೊಬ್ಬರ ಸೊತ್ತಾಗಿರದೇ ಪ್ರತಿ ಚಿಲಕನಿಗೂ ಆಕೆ ಜೊತೆ ಕೊಡುವ ಅವಕಾಶ ಒಂದಿಲ್ಲೊಂದು ದಿನ ಬಂದೇ ಬರುವದರಿಂದ ಪ್ರೇಮದಲ್ಲಿ ಅಸೂಯೆ, ವೈಮನಸ್ಸು, ನಿರಾಸೆಗಳಿಗೆ ಆಸ್ಪದವಿಲ್ಲ. ಮೋತಿಯಾರಿ ಚಿಲುಮೆ, ಚಿಲಕ್‌ನೆಂದರೆ ತಂಬಾಕು ಎಂದು ಸಾಂಕೇತಿಕವಾಗಿ ಪರಿಗಣಿಸಲಾಗುತ್ತದೆ. ತಂಬಾಕು ಚಿಲುಮೆಯ ನಂಟು, ಘೋಟುಲದ ಆವಾರಕ್ಕೆ ಅಷ್ಟೇ ಸೀಮಿತವಾಗಬೇಕೆಂದಿದ್ದರೂ, ಪರಸ್ಪರ ಒಪ್ಪಿಗೆಯಿಂದ ಬೇರೆಡೆ ಕಾಡಿನಲ್ಲಿ

ಏಕಾಂತದಲ್ಲಿ ಅವರು ಸೇರುವುದುಂಟು. ಮೋತಿಯಾರಿ, ಒಬ್ಬ ಚಿಲಕನಿಗೇ ಪಕ್ಷಪಾತ ತೋರಿದರೆ, ಆವಳನ್ನು ಶಿಕ್ಷೆಗೆ ಗುರಿಪಡಿಸುವದರಿಂದ ಅವಳು ಸುಲಭವಾಗಿ ಯಾರೊಬ್ಬರ ಸೊತ್ತಾಗಿ ಪರಿಣಮಿಸುವದಿಲ್ಲ. ಈ ಸ್ವಾತಂತ್ರ್ಯದಿಂದಾಗಿ ಪ್ರಸ್ತದ ಕಾಲದಲ್ಲಿ ಮದುಮಗಳು ಕುಮಾರಿಯೇ ಇರದಿದ್ದರೂ ಮದುಮಗನು ಅಜ್ಞಾನಿಯೂ ಇರುವದಿಲ್ಲ.

ಚಿಲಕ-ಮೋತಿಯಾರಿಯರು ಪ್ರೇಮ ಬಂಧನದಲ್ಲಿ ಸಿಲುಕದಂತೆ ಸಾಮಾಜಿಕ ಕಟ್ಟುಗಳಿದ್ದರೂ ಆಗೊಮ್ಮೆ-ಈಗೊಮ್ಮೆ ಇಂಥ ಪ್ರೇಮಿಗಳ ಉದಾಹರಣೆಗಳು ಸಿಕ್ಕೇ ಸಿಗುತ್ತವೆ. ಅವರದು ಟೊಳ್ಳು ಪ್ರೇಮವಲ್ಲ, ಅದಕ್ಕಾಗಿ ಅವರು ಎಂಥ ತ್ಯಾಗಕ್ಕೂ ಸಿದ್ಧ, ಬಡ ಚಿಲಕನೊಬ್ಬ ಊರ ಕೊತವಾಲರ ಮಗಳನ್ನು ಪ್ರೇಮಿಸಿದ. ಅವನಿಗೆ 'ತೆರ' (ವಧು ದಕ್ಷಿಣೆ) ಕೊಡುವ ಯೋಗ್ಯತೆ ಇಲ್ಲದ್ದರಿಂದ ಈ ನೆಂಟಸ್ತಿಕೆಗೆ ತಂದೆ ಒಪ್ಪಲಿಲ್ಲ. ಹೆದರಿಕೆ ಬೆದರಿಕೆಗಳಾದವು. ಪ್ರೇಮಿಗಳು ಮಣಿಯಲಿಲ್ಲ. ಕೊನೆಗೆ ಗ್ರಾಮ ಪಂಚಾಯಿತಿ ಸೇರಿತು. ಅದೂ ಪ್ರೇಮಿಗಳನ್ನೇ ಪ್ರೋತ್ಸಾಹಿಸಿತು. ಪೊಲೀಸರಿಗೆ ದೂರು ಕೊಡುವದಾಗಿ ಕೊತವಾಲ ಸಮಾಚಾರ ಹರಡಿದ. ಆದಿವಾಸಿಗಳೆಲ್ಲ ಪೊಲೀಸರಿಗೆ ವಿಪರೀತ ಹೆದರುತ್ತಾರೆ. ಆದ್ದರಿಂದ ಪಲಾಯನವೊಂದೇ ತಮಗೆ ಉಳಿದ ಮಾರ್ಗವೆಂದು ಪ್ರೇಮಿಗಳು ದೂರದ ಹಳ್ಳಿಯೊಂದನ್ನು ಸೇರಿಕೊಂಡರು. ಆದರೆ ಈ ಸುದ್ದಿ ಕೊತವಾಲನಿಗೆ ತಿಳಿದು ಅವರಿಗೆ ಬುದ್ಧಿ ಕಲಿಸಬೇಕೆಂದು ಕಾವಲಿಟ್ಟ. ಯುವಪ್ರೇಮಿಗಳು ಕಾಡು-ಮೇಡು ಅಲೆದರು. ಸಿಕ್ಕಿದ್ದು ತಿಂದರು, ಮರದ ಮೇಲೆ ರಾತ್ರಿ ಕಳೆದರು. ಒಂದು ವಾರದ ಅಲೆತದಿಂದ ಬಳಲಿ ಬೆಂಡಾಗಿ ಮೋತಿಯಾರಿ ಹುಲಿಗೆ ಆಹುತಿಯಾದಳು. ವಿರಹ ತಾಳದೆ ಚಿಲಕ್ ಆತ್ಮಹತ್ಯೆ ಮಾಡಿಕೊಂಡ. ಈ ಆದರ್ಶ ಪ್ರೇಮಿಗಳ ಕತೆ ಘೋಟುಲದ ಬಾಲಕರಿಗೆ ಪ್ರಿಯವಾಗಿದೆ. ಆ ಬಗೆಗೆ ಹಾಡೂ ಪ್ರಚಲಿತವಿದೆ.

ದಿನವೆಲ್ಲ ಮೈಮುರಿದು ದುಡಿದಿಹೆನು
ಪ್ರಿಯೆ,
ಬಳಲಿ ಬೆಂಡಾಗಿ ಮರಳಿ ಬಂದಿಹೆನು
ಮಿಂದುಂಡು ಒರಗಿರಲು ನಿನ್ನ ನೆನಪಾಗಿಹುದು
ಊರವರ ಕಣ್ತಪ್ಪಿಸಿ, ಕಾಡಹಾದಿಯ ತುಳಿದು
ಕೆರೆಯ ದಂಡೆಯಿಂದ, ಪೊದೆಯ ಸಂದಿಯಿಂದ
ಕತ್ತಲಲಿ ಜಾರುತ್ತ, ನುಸುಳುತ್ತ ನಿನಗಾಗಿ ಅಲೆದೆ
ಕುಣಿಯಲಂಗಣವಿಲ್ಲ, ಕೊಳಲು - ಡೋಲುಗಳಿಲ್ಲ,
ಜೊತೆಯ ಹಾಡಿಲ್ಲ, ನೆರೆಯವರು ಮಲಗಿಹರು,
ಒಟ್ಟಿಗೇ ಒರಗಿ ರಾತ್ರಿಯಾದರೂ ಕಳೆಯೋಣ...
ಮಂದಮಾರುತನಿಹ, ಹೂಗಳರಳಿಹವು, ಭೂಮಾತೆಯಿಹಳು,
ನೀಲಗಗನದಡಿ ಮೈಮರೆಯೋಣ ಬಾ.

ಘೋಟುಲದಲ್ಲಿ ಮೋತಿಯಾರಿಗಳನ್ನು ಕೆರಳಿಸಲು ಇಂತಹ ಹಾಡುಗಳನ್ನು ದೈನ್ಯವಾಗಿ, ದನಿ ತೆಗೆದು ಚಿಲಕರು ಹಾಡುತ್ತಾರೆ. ಪ್ರತಿಯಾಗಿ ಹುಡುಗಿಯರು ಅವರನ್ನು ಗುದ್ದುತ್ತಾರೆ, ಚೂಟುತ್ತಾರೆ. ಇದಾವುದನ್ನೂ ಲೆಕ್ಕಿಸದೇ ಚಿಲಕರು ಹಾಡುತ್ತಲೇ ಇರುತ್ತಾರೆ.

ಹೊಲಗಳು ಗೋಚರಿಸುತಿಹವು
ಬೆಳಕು ಹರಿಯುತಿಹುದು
ಬಟ್ಟೆ ಹಿಂದಿರುಗಿಸು ಪ್ರಿಯ, ನಿನ್ನ ದಮ್ಮಯ್ಯ

*ಬೀಳ್ಕೊಡುವ ಅವಧಿಯಿದು ಬಂದಿಹುದು*
*ಸಮ್ಮನಗಲಿಸಲೆಂದೇ ಧಾವಿಸಿ ಬಂದಿತೇ ಮುಂಜಾವು ?*
*ನೀನಿಲ್ಲದೆಡೆಯ ವಾಸಕ್ಕೆ ಅರ್ಥವಿಲ್ಲ*
*ಪ್ರೇಮವಿಲ್ಲದ ಜೀವಕ್ಕೆ ಸಮೃದ್ಧಿಯೇ ಇಲ್ಲ*
*ಮನವನ್ನೆ, ನೀನಿಲ್ಲದೆನಗೆ ನಿದ್ರೆಯೇ ಇಲ್ಲ!*

ಮುರಿಯರು ಹೆಣ್ಣು-ಹೆಂಡಗಳನ್ನು ಇಷ್ಟೇಕೆ ಪ್ರೀತಿಸುತ್ತಾರೆ ಎಂಬುದಕ್ಕೆ ಒಂದು ಕಥೆ ಪ್ರಚಲಿತವಿದೆ. ಆದಿ ಮುರಿಯನು ಬಿಲ್ಲು-ಬಾಣಗಳೊಂದಿಗೆ ಕಾಡಿಗೆ ಬೇಟೆಗೆ ಹೋದಾಗ ಮಹುವಾ ಮರದ ಅಡಿಯಲ್ಲಿ ಪಶು-ಪಕ್ಷಿಗಳ ಜಾತ್ರೆಯೇ ಸೇರಿತ್ತಂತೆ. ಹೀಗೇಕೆ ಎಂದು ಆತ ಕುತೂಹಲದಿಂದ ನಿರೀಕ್ಷಿಸುತ್ತಿದ್ದಾಗ ಮರದಡಿಯ ಹೊಂಡದಲ್ಲಿ ಸಂಚಿತವಾದ ಗಮಗಮಿಸುವ ರಸವನ್ನು ಅವು ಹೀರುತ್ತ ಕೇಕೆ ಹಾಕಿ ಕುಣಿಯುತ್ತ ತಮ್ಮ ತಮ್ಮ ಗೆಳತಿಯರನ್ನು ಕೂಡುತ್ತಿದ್ದವಂತೆ. ಮುರಿಯನೂ ಆಸೆಯಿಂದ ಆ ದ್ರವವನ್ನು ಸೇವಿಸಿದ. ಕೂಡಲೇ ಸ್ವರ್ಗ ಮೂರೇ ಬೆರಳು ಇರುವಂತೆ ಭಾಸವಾಯಿತು ಅವನಿಗೆ. ಬಿಲ್ಲು-ಬಾಣಗಳನ್ನು ಬಿಸುಟು ಆತ ನರ್ತಿಸ ಲಾರಂಭಿಸಿದ. ಎಷ್ಟು ಕುಣಿದರೂ ಪ್ರಿಯತಮೆ ಬರಲೇ ಇಲ್ಲ! ಆತ ಖತಿಗೊಂಡಾಗ ಲಿಮುಲದೇವನು ಪ್ರತ್ಯಕ್ಷನಾಗಿ ಮೋತಿಯಾರಿಯೊಬ್ಬಳನ್ನು ದಯಪಾಲಿಸಿದನಂತೆ. ಕೂಡಲೇ ಮುರಿಯನ ಸುಖ ಇಮ್ಮಡಿಸಿತು. ತಾನು ಸೇವಿಸಿದ್ದು ಮಹುವಾದ ಹೆಂಡ; ಅದರಿಂದ ದೊರೆತ ಆನಂದ, ಹೆಣ್ಣಿನಿಂದ ದೊರೆತ ತೃಪ್ತಿಗಳನ್ನು ತನ್ನ ವಂಶಜರೆಲ್ಲ ಚಿರಕಾಲ ಅನುಭವಿಸು ವಂತಾಗಲಿ ಎಂದು ಅವನ್ನು ಆರಾಧಿಸುವಂತೆ ಕಟ್ಟಪ್ಪಣೆ ಮಾಡಿದನಂತೆ. ಘೋಟುಲದಲ್ಲಿ ಮುಕ್ತ ಪ್ರೇಮವನ್ನು ಹರೆಯದವರು ಅನುಭವಿಸಿದರೂ ವೈವಾಹಿಕ ಜೀವನದಲ್ಲಿ ಅವರು ಪಾತಿವ್ರತ್ಯ, ಏಕಪತ್ನೀವ್ರತವನ್ನು ನಿಷ್ಠುರವಾಗಿ ಪಾಲಿಸುತ್ತಾರೆ. ಅದನ್ನು ಪಾಲಿಸದವರಿಗೆ ಮರಣದಂಡನೆ ಯಾದರೂ ಅವರ ಸಮಾಜ ಕ್ಷಮಿಸುತ್ತದೆ. ವಿವಾಹಿತರಿಗೆ ಘೊಟುಲದಲ್ಲಿ ಪ್ರವೇಶವಿಲ್ಲ. ಹಳ್ಳಿಯ ಪ್ರತಿಷ್ಠಿತರು ಚಂಚು ಪ್ರವೇಶ ಮಾಡಲು ಯತ್ನಿಸಿದರೆ ಕಿರಿಯರು ತೀವ್ರವಾಗಿ ವಿರೋಧಿಸುತ್ತಾರೆ.

ಮೋತಿಯಾರಿಯರು ನಸುಕಿನಲ್ಲಿಯೇ ಎದ್ದು ತಮ್ಮ ಅಸ್ತವ್ಯಸ್ತವಾದ ಬಟ್ಟೆ ಬರೆಗಳನ್ನು ಚಿಲಕರು ನೋಡದಂತೆ ಎಚ್ಚರವಹಿಸುತ್ತಾರೆ. ಮನೆಗೆ ಹೋಗಿ ತಾಯಿಗೆ ಮನೆಗೆಲಸದಲ್ಲಿ ನೆರವಾಗುತ್ತಾರೆ. ಚಿಲಕರು ಬೆಳಕು ಹರಿದ ನಂತರ ಬೀಡಿ ಸೇದುತ್ತ ಹಿಂದಿನ ರಾತ್ರಿಯ ಚಟುವಟಿಕೆಯ ಬಗ್ಗೆ ಗೆಳೆಯರೊಂದಿಗೆ ಚರ್ಚಿಸುತ್ತ ತಂತಮ್ಮ ಕೆಲಸಕ್ಕೆ ಹೊರಡುತ್ತಾರೆ. ಚಿಲಕರು ಒಂದು ಹಳ್ಳಿಯಿಂದ ಇನ್ನೊಂದಕ್ಕೆ ಹೋದರೆ ಅಲ್ಲಿಯ ಘೋಟುಲದಲ್ಲಿಯೂ ಅವರನ್ನು ಸೇರಿಸಿಕೊಳ್ಳುತ್ತಾರಲ್ಲದೆ ಮೋತಿಯಾರಿಯ ಜೊತೆಯನ್ನೂ ಒದಗಿಸುತ್ತಾರೆ. ಮೋತಿಯಾರಿ ಬೇರೆ ಹಳ್ಳಿಗೆ ಹೋದರೆ ಅಲ್ಲಿಯ ಚಿಲುಕರೆಲ್ಲ ಪತ್ತೆಹಚ್ಚಿ, ಅವಳು ಇಳಿದಲ್ಲಿ ಹೋಗಿ ಆಮಂತ್ರಣವಿತ್ತು ತಮ್ಮ ಘೋಟುಲಕ್ಕೆ ಕರೆದುತರುತ್ತಾರೆ. ಆಕೆ ಬರಲು ಒಪ್ಪದಿದ್ದರೆ, ಚುಚ್ಚು ಹಾಡು ಹಾಡುತ್ತಾ, ಕುಣಿಯುತ್ತ, ಸಲಿಗೆಯ 'ಘೇರಾವ್' ಹಾಕಿ, ಎಳೆದುಕೊಂಡೆ ಹೋಗುತ್ತಾರೆ. ಗಂಭೀರ ಸ್ವಭಾವದ ಮೋತಿಯಾರಿಗೆ ಮನಸೊಪ್ಪದ ಚಿಲಕನಿಗೆ ಜೊತೆ ಕೊಡುವದು ಒಗ್ಗದ ಮಾತಾದ್ದರಿಂದ, ಒಂದಿಲ್ಲೊಂದು ಕುಂಟುನೆವ ಒಡ್ಡಿ ಜಾರಿಕೊಳ್ಳುತ್ತಾಳೆ. ಹಬ್ಬ ಹುಣ್ಣಿಮೆಗಳ ದಿನ ಹೆಂಡದ ಹೊಳೆ ಹರಿದಾಗ ಮಾತ್ರ ಆಕೆ ಮೈಮರೆತು ತನ್ನನ್ನು ಒಪ್ಪಿಸಿಕೊಂಡುಬಿಡುತ್ತಾಳೆ.

ಅಕ್ಕಪಕ್ಕದ ಹಳ್ಳಿಗಳಲ್ಲಿ ವಿಶೇಷ ಸಮಾರಾಧನೆ ಅಥವಾ ಉತ್ಸವಗಳಿದ್ದರೆ ಘೋಟುಲ ಮೇಳದವರು, ಹಾಡುಗಾರಿಕೆ ನೃತ್ಯ ಪ್ರದರ್ಶನ ಒದಗಿಸುವದು ತಮ್ಮ ಕರ್ತವ್ಯವೆಂದು ತಿಳಿಯುತ್ತಾರೆ. ಅದಕ್ಕಾಗಿ ಪ್ರತಿರಾತ್ರಿ ಕೆಲ ಹೊತ್ತಾದರೂ ರೂಢಿ ಮಾಡಿಕೊಳ್ಳುತ್ತಾರೆ. ಡೋಲಿನ

ಸದ್ದು, ಕೇಕೆ ನಗುಗಳು ಯುವಕ-ಯುವತಿಯರನ್ನು ಘೋಟುಲ ಬೈಲಿಗೆ ಸೇರುವಂತೆ ಕರೆಯುತ್ತವೆ. ಇಬ್ಬರಿಂದ ಇನ್ನೂರು ನರ್ತಕರಿದ್ದರೂ ಸಾಮೂಹಿಕವಾಗಿ ನರ್ತಿಸುವ ಕಲೆಯನ್ನು ಅವರು ಸ್ವಾಧೀನ ಮಾಡಿಕೊಂಡಿರುತ್ತಾರೆ. ಕೆಲವರೇ ಇದ್ದಾಗ ಚಿಲಕರು ಒಂದು ಸಾಲಿನಲ್ಲಿ ಕೈಕೈ ಹೆಣೆದುಕೊಂಡು ನಿಂತರೆ ಅವರಿಗೆ ಸಮಾನಾಂತರವಾಗಿ ಮೋತಿಯಾರಿಯರು ಇನ್ನೊಂದು ಸಾಲಿನಲ್ಲಿ ನಿಲ್ಲುತ್ತಾರೆ. ಪ್ರಾರಂಭದಲ್ಲಿ ಲಿಂಗೋದೇವರ ಹಾಡುಗಳನ್ನು ಹಾಡುತ್ತ, ಚಿಕ್ಕ ಚಿಕ್ಕ ಹೆಜ್ಜೆ ಹಾಕುತ್ತ ಮುಂದೆ ಹೋಗವರು. ನಂತರ ಹಾಗೆ ಹಿಂದಕ್ಕೆ ಹೆಜ್ಜೆ ಹಾಕುತ್ತ ತಿರುಗಿ ತಮ್ಮ ಸ್ಥಳಕ್ಕೆ ಬಂದು ನಿಲ್ಲುತ್ತಾರೆ. ಬಯಲಿನಲ್ಲಿ ಕಾಡ ಹಿನ್ನೆಲೆಯಲ್ಲಿ ತೀರಾ ಕೀಚಾಗಿ ಹಾಡುವ ಅವರ ಧ್ವನಿ ಮಲೆನಾಡಿನ ತುಂತುರುಮಳೆಯ ನಾದವನು ನೆನಪಿಗೆ ತರುತ್ತದೆ.

ನೃತ್ಯಗಾರರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾಗ ಚಿಲಕರು ಅರ್ಧ ವರ್ತುಲದಲ್ಲಿ ಮೋತಿಯಾರಿಯರು ಉಳಿದರ್ಧ ವರ್ತುಲದಲ್ಲಿ ನಿಲ್ಲುತ್ತಾರೆ. ಮಧ್ಯದಲ್ಲಿ ನೃತ್ಯದಲ್ಲಿ ಪರಿಣತರಾದ ಮೂರು ಜೋಡಿಗಳು ಮಾರ್ಗದರ್ಶನ ಮಾಡುತ್ತ ವರ್ತುಲದ ಒಳಗಡೆ ಸುತ್ತುತ್ತಿರುತ್ತವೆ. ಬಲದಿಕ್ಕಿಗೆ ಹೆಜ್ಜೆ ಹಾಕುತ್ತ ಸರಿಯುವದರಿಂದ ವರ್ತುಲ, ಗಡಿಯಾರದ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತದೆ. ನಗರದವರಂತೆ ಒಂದೆರಡು ತಾಸುಗಳ ನೃತ್ಯದಲ್ಲಿ ವಿಶ್ವಾಸ ವಿಡದೆ ಯಕ್ಷಗಾನ ಮೇಳದವರಂತೆ ರಾತ್ರಿ ಇಡೀ ಕುಣಿದು ಹಾಡಿ ಆನಂದಪಡುತ್ತಾರೆ. ಹೀಗಾಗಿ ನಾಗರಿಕರಿಗೆ ಅವರ ನೃತ್ಯವೀಕ್ಷಣೆ ಶಿಕ್ಷೆಯಾಗಿ ಪರಿಣಮಿಸಬಹುದು. ಘೋಟುಲದವರಿಗೆ ನೃತ್ಯದಲ್ಲಿ ಸರಿಯಾಗಿ ಪರಿಣತಿ ಬಾರದಿದ್ದರೆ ಹೊರಗೆ ನರ್ತಿಸಬಾರದೆಂಬ ಕಟ್ಟು ಇದೆ.

ಸುಗ್ಗಿ ಹಬ್ಬದ ಕುಣಿತವನ್ನು ಶಾಲೆ ಕಾಲೇಜಿನ ವಾರ್ಷಿಕೋತ್ಸವದಂತೆ ಪರಿಗಣಿಸ ಲಾಗುತ್ತದೆ. ಹೀಗಾಗಿ ಚಾತಕ ಪಕ್ಷಿಯಂತೆ ಅದಕ್ಕಾಗಿ ಎಲ್ಲ ಎಳೆಯರೂ ಕಾಯುತ್ತಿರುತ್ತಾರೆ. ಮುರಿಯರು ಬೀಡುಬಿಟ್ಟಲ್ಲೆಲ್ಲ ಕುಣಿಯುವದು ಸಾಮಾನ್ಯವಾದರೂ ಕೆಲ ತಂಡದವರು ಹೆಸರು ವಾಸಿಯಾಗಿದ್ದಾರೆ. ಕೊಂಡಾಗಾಂವ, ಧೌಡಾಯಿ, ಛೋಟೆ ಡೊಂಗರಗಳಂತಹ ಊರುಗಳಲ್ಲಿ ನೃತ್ಯಗಳು ನಡೆಯುತ್ತಿದ್ದರೂ, ನಾರಾಯಣಪುರದ ನೃತ್ಯಮೇಳ ಖ್ಯಾತಿ ಪಡೆದಿದೆ. ಇದಕ್ಕಾಗಿ ನಲವತ್ತು ಕಿಲೋಮೀಟರು ದೂರದಿಂದ ಕೂಡ ತಂಡಗಳು ಬರುತ್ತವೆ. ಹಾಡುತ್ತ, ನಗುತ್ತ ಕಲೆಯುತ್ತ, ಕಾಡಹಾದಿ ಕ್ರಮಿಸುತ್ತ ಊರ ಬಯಲಿನಲ್ಲಿ ಇವರು ಸೇರುತ್ತಾರೆ. ಮರದ ಆಶ್ರಯದಲ್ಲಿ ಬೀಡುಬಿಟ್ಟು, ಬಂದ ಹೊಸಬರೊಂದಿಗೆ ಒಂದಾಗಿ ಸಾಮಾನು ಕೊಟ್ಟು-ಕೊಂಡು ಊಟದ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಸೂರ್ಯನು ಮುಳುಗಿದಂತೆ ನರ್ತಕರ ತಂಡಗಳು ಚುರುಕಾಗುತ್ತವೆ. ಹತ್ತಿರದ ನದಿ-ಕೆರೆಗಳಿಗೆ ಹೋಗಿ ಮೈಕೈಗಳನ್ನು ತೊಳೆದು ಕೊಂಡು, ಅಜ್ಜನ ಕಾಲದಿಂದ ಬಂದ ಕುರುಡು ಕನ್ನಡಿಯನ್ನು ಎಳೆದುಕೊಂಡು ಎದುರಿಗಿಟ್ಟು ಅಲಂಕಾರಕ್ಕೆ ಪ್ರಾರಂಭಿಸುತ್ತಾರೆ. ಚಿಲಕರು ಗಡ್ಡ ಮೀಸೆ ಬೋಳಿಸಿಕೊಂಡರೆ ಮೊತಿಯಾರಿಯರು ಕೇಶಾಲಂಕಾರ ಮಾಡಿಕೊಳ್ಳುತ್ತಾರೆ. ಪಾತ್ರಧಾರಿಗಳಂತೆ ಪ್ರತಿಯೊಬ್ಬರ ಅಲಂಕಾರದ ಸ್ವಾಮಿತ್ವ ಅವರದೇ ಆಗಿದ್ದರೂ ಗೆಳೆಯ ಗೆಳತಿಯರು ಪರಸ್ಪರ ಸಹಾಯ ಮಾಡುತ್ತಾರೆ.

ಚಿಲಕ್-ಮೋತಿಯಾರಿಗಳಲ್ಲಿ ಲಿಂಗ ಸಮಾನತೆ ಎದ್ದುಕಾಣುತ್ತದೆ. ಇಬ್ಬರೂ ಉದ್ದ ಕೂದಲನ್ನು ಬೆಳೆಸಿ ಮುಡಿಕಟ್ಟಿಕೊಳ್ಳುತ್ತಾರೆ. ಬಾಚಣಿಗೆಗಳನ್ನು ಸಿಕ್ಕಿಸಿ ಹೂವು ಮುಡಿಯುತ್ತಾರೆ. ಕಿವಿ, ಕೈ, ಕೊರಳಿಗೆ ಆಭರಣ ಧರಿಸುತ್ತಾರೆ. ಆದರೆ ನೃತ್ಯಕ್ಕಾಗಿ ಸಿಂಗರಿಸಿಕೊಳ್ಳುವದರಲ್ಲಿ ಚಿಲಕರದೇ ಮೇಲುಗೈ! ಬಹುಶಃ ಇದನ್ನು ಅವರು ಪರಿಸರದ ಪಶುಪಕ್ಷಿಗಳಿಂದ ಕಲಿತಿರಬೇಕು. ಪ್ರಾಣಿವರ್ಗದಲ್ಲಿ ಚೆನ್ನಾಗಿ ಹಾಡುವುವು, ಸಿಳ್ಳು ಹಾಕುವುವು, ನರ್ತಿಸುವುವು, ಸೊಬಗಿನ ರೂಪ ಹೊಂದಿದವು ಗಂಡು ಜಾತಿಯೇ! ಮಾನವರಲ್ಲಿ ಮಾತ್ರ ಇದು ವ್ಯತಿರಿಕ್ತ.

ಗಂಡುಸವಿಲು ಸೌಂದರ್ಯಕ್ಕೆ ಹೆಸರಾದ ಪಕ್ಷಿ. ನೃತ್ಯಕ್ಕೆ ಅಣಿಯಾದ ಚಿಲಕನು ಅಲಂಕಾರದಲ್ಲಿ ನವಿಲನ್ನು ಮೀರಿಸುತ್ತಾನೆಂದರೆ ಅತಿಶಯೋಕ್ತಿಯಾಗಲಾರದು. ಓರಣವಾಗಿ ಕಟ್ಟಿದ ಮುಡಿ, ಸುತ್ತಿದ ಬಣ್ಣಬಣ್ಣದ ರುಮಾಲು, ಅದಕ್ಕೆ ತೂಗಿಬಿಟ್ಟ ಬಣ್ಣದ ಮಣಿಸರಗಳು, ಗೊಂಡೆಗಳು, ಹಿಂದಕ್ಕೆ ಬಿಗಿದುಕೊಂಡ ಕಾಡುಹಂದಿಯ ಕೋರೆಗಳು. ನಡುವೆ ಸಿಕ್ಕಿಸಿಕೊಂಡ ಭಿಂಗರಾಜ ಹಕ್ಕಿಯ ಗರಿಗಳ ಗುಚ್ಛ ಆತನಿಗೆ ವಿಶೇಷ ಕಳೆ ತಂದುಕೊಡುತ್ತವೆ. ಕೊರಳಿಗೆ ಹಲವಾರು ಸರಗಳಿರುತ್ತವೆ.

ಹಣಕಾಸು ಇಲ್ಲದ ಆದಿವಾಸಿಗಳಿಗೆ ನೃತ್ಯಾಲಂಕಾರಗಳೇ ಸರ್ವಸ್ವವಾಗಿರುತ್ತವೆ. ನರ್ತಕರೇ ಹಾಡುಗಾರಿಕೆ, ಹಿಮ್ಮೇಳವಾದ್ಯಗಳು ಜವಾಬ್ದಾರಿಯನ್ನು ಹೊರಬೇಕಾಗಿರುವದರಿಂದ ಭಾರವಾದ ಗೆಜ್ಜೆ, ಗಂಟೆಗಳನ್ನು ನಡುವಿಗೆ ಬಿಗಿದುಕೊಳ್ಳುವರು, ಬೀಡಿ ಶೇಖರಿಸಲು ಬರುವಂತೆ ಕಿರಿ ಬನಿಯನ್ ಮತ್ತು ಒಳಗಚ್ಚೆ ಅಡಗಿಸಲು ಮುಂಡುಪಂಚೆ ಧರಿಸುವರು. ಬಿಲ್ಲು-ಬಾಣಗಳನ್ನು ಹೊತ್ತು ಹಾಡಿನಲ್ಲಿ ಅಲೆಯುವ ಚಿಲಕರಿಗೆ ನರ್ತಿಸುವಾಗ ಹೆಗಲಿಗೆ ಏನಾದರೂ ಇದ್ದೇ ಇರಬೇಕು. ಬಹುಸಂಖ್ಯಾತರು ಟಾಂಗಿ (ಕಿರುಗೊಡಲಿ)ಯನ್ನು ಇದಕ್ಕಾಗಿ ಬಳಸಿದರೆ, ಕೆಲವರು ಕೊಡಲಿ ಇಲ್ಲವೇ ಮಚ್ಚನ್ನೂ ಏರಿಸುತ್ತಾರೆ. ಒಬ್ಬಿಬ್ಬರು ಕೊಡಲಿಯ ಬದಲಾಗಿ ಕೊಡೆಯನ್ನೂ ಹಿಡಿಯುತ್ತಾರೆ. ಇದು ಬಡತನದ ಸಂಕೇತವೋ, ಸಿರಿವಂತಿಕೆಯ ಲಕ್ಷಣವೋ ಎಂದು ಹೇಳುವದು ಕಷ್ಟ! ಕಿರಿಯ ಚಿಲಕರು ಬಿದಿರೊಂದಕ್ಕೆ ಬಟ್ಟೆ ಬಿಗಿದು ಪತಾಕೆಯಂತೆ ಹಿಡಿದಿರುತ್ತಾರೆ.

ಮೋತಿಯಾರಿಗಳ ಅಲಂಕಾರ ಶಿರಕ್ಕಷ್ಟೇ ಪರಿಮಿತವಾಗಿರುವದರಿಂದ ಬೇಗ ನೃತ್ಯಕ್ಕೆ ಸಿದ್ಧರಾಗುತ್ತಾರೆ. ಹಣೆಯನ್ನು ಸಂಪೂರ್ಣವಾಗಿ ಮುಚ್ಚುವಂತೆ ವಿವಿಧ ವರ್ಣಗಳ ಮಣಿಸರ ಗಳನ್ನು ಬಿಗಿದುಕೊಂಡಿರುತ್ತಾರೆ. ಅದಕ್ಕೆ ಶೋಭೆ ತರುವಂತೆ ಪಿನ್ನುಗಳು, ಗೊಂಡೆಗಳು, ಬಾಚಣಿಗೆಗಳು ಜೋಡಿಸಿರುತ್ತಾರೆ. ರಸಿಕ ಶಿರೋಮಣಿಗಳು ಕಿರುಗನ್ನಡಿ, ಬಲೂನು, ಗಿರಿಗಿಟ್ಲೆಗಳನ್ನೂ ಸಿಗಿಸುತ್ತಾರೆ! ಮುಡಿಗೆ ಸಿಗಿಸಲು ರಬ್ಬಾದ ಹೂಗಳು ಸಿಗದಿದ್ದರೆ ರಿಬ್ಬನ್‌ಗಳನ್ನೇ ಹೂಗಳಂತೆ ಕಟ್ಟಿಕೊಂಡಿರುತ್ತಾರೆ. ಕೊರಳಿಗೆ ಮಣಿಸರ, ಬೆಳ್ಳಿಯ ನಾಣ್ಯಗಳ ಸರ, ಕೈಗೆ ಬೆಳ್ಳಿಯ ಬಳೆ, ಕಾಲಿಗೆ ಕಡಗ ಸಾಮಾನ್ಯವಾಗಿರುತ್ತವೆ. ಪುಷ್ಟ ಸೌಂದರ್ಯವನ್ನು ಹೊರಹೊಮ್ಮಿಸುವ ತುಂಡು ಸೀರೆಯನ್ನಷ್ಟೇ ಅವರು ಉಡುವದು ವಾಡಿಕೆಯಾದರೂ ನಾಗರಿಕರು ಸೇರುವ ಸ್ಥಳದಲ್ಲಿ ನಡೆಯುವ ನೃತ್ಯಗಳಲ್ಲಿ ಬೇರೊಂದು ಬಟ್ಟೆಯಿಂದ ಉಬ್ಬಿದೆದೆಗಳನ್ನು ಎಚ್ಚರಿಕೆಯಿಂದ ಮುಚ್ಚಿಕೊಂಡಿರುತ್ತಾರೆ.

ಕಗ್ಗತ್ತಲು ರಾಜ್ಯವಾಳಹತ್ತಿದಾಗ, ಹುರುಪಿನ ಯುವಕ-ಯುವತಿಯರು ನೃತ್ಯರಂಗಕ್ಕೆ ಧಾವಿಸಿ ಮೆಲುದನಿಯಲ್ಲಿ ಹಾಡುತ್ತಾ ಕುಣಿಯಲಾರಂಭಿಸಿದಾಗ ಇದೇ ಕರೆಗಂಟೆ ಎಂಬಂತೆ ಉಳಿದವರೂ ತರಾತುರಿಯಿಂದ ಬರಲಾರಂಭಿಸುವರು. ಇವು ಪ್ರೇಕ್ಷಕರಿಗಾಗಿ ಅಲ್ಲವಾದ್ದರಿಂದ ಹರಟೆ-ಬೀಡಿಗಳು ತ್ಯಾಜ್ಯವಲ್ಲ, ಚಳಿ ಹೆಚ್ಚಿದಂತೆ ಅಲ್ಲಲ್ಲಿ ಬೆಂಕಿಯೊಟ್ಟಿ ಚಳಿ ಕಾಸುವರು. ಸೆರೆಯ ಸೇವನೆಯಾಗುವದು. ಎಷ್ಟೋ ಚಿಲಕ್ ಮೋತಿಯಾರಿಗಳ ಜೋಡಿಗಳು ಜಮಖಾನೆ ಕಂಬಳಿಗಳನ್ನು ಹೊದ್ದು ಪರಸ್ಪರ ದೇಹಗಳ ಕಾವನ್ನು ಕಾಯ್ದಿಡಲು ಯತ್ನಿಸುವರು. ವೇಳೆ ಸರಿದಂತೆ, ನಶೆ ಏರಿದಂತೆ ನೃತ್ಯಗಾರರಿಗೆ ಯಾವದೋ ಸ್ವಪ್ನಲೋಕದಲ್ಲಿ ವಿಹರಿಸುತ್ತಿದ್ದ ಭಾಸವಾಗುತ್ತದೆ. ಎತ್ತರವಾಗಿ ಬೆಳೆದ ಕಾಡು, ಅಲ್ಲಲ್ಲಿ ಮಂದವಾಗಿ ಉರಿಯುವ ಅಗ್ನಿ, ಮಂದವಾಗಿ ಬೀಸುವ ಮಾರುತವೆಂದರೆ ಕಾಮದೇವನಿಗೆ ಅತಿ ಪ್ರೀತಿಯೆಂದು ತೋರುತ್ತದೆ. ಅಂತೆಯೇ ಉಳಿದ ದಿನಗಳಲ್ಲಿ ಗಂಭೀರವಾಗಿರುವ ಮೋತಿಯಾರಿಗಳು ಅಂದು ಆವೇಶ

ತಳೆದಿದ್ದಾರೆ. ಈ ವಾತಾವರಣದಲ್ಲಿ ಹಿರಿಯರು ಕಿರಿಯರೆಂಬ ತಾರತಮ್ಯ ಪಾಲಿಸುವ ಗೋಜಿಗೆ ಹೋಗದೆ ದೊಡ್ಡ ಮರಗಳ ನೆರಳಿಗೆ ಜೋಡಿಗಳು ತೆರಳಿ, ಸದ್ದಿಲ್ಲದೆ ಬಂದು ತಿರುಗಿ ನರ್ತನ ಮುಂದುವರಿಸಿರುತ್ತಾರೆ.

ಬಯಲು ಸೀಮೆಯವನು ಕಡಲು ನೋಡಿ ಕವಿಯಾದರೂ ಅಲ್ಲಿಯ ಜನರಿಗೆ ಕಡಲಿನಲ್ಲಿ ಯಾವ ಆಕರ್ಷಣೆಯೂ ಕಾಣಿಸುವದಿಲ್ಲ. ಇಲ್ಲದಿದ್ದರೆ ಕಡಲ ದಂಡೆಯನ್ನು ಕಕ್ಕಸು, ಬಚ್ಚಲಿನಂತೆ ಬಳಸುತ್ತಿದ್ದರೇ? ಅದರಂತೆ ಘೋಟುಲದ ಲಿಂಗಸಮಾನತೆ, ಸ್ವಾತಂತ್ರ್ಯ, ಪ್ರೇಮ, ಕಾಮ ನಮಗೆ ಕಂಡಷ್ಟು ಆಕರ್ಷಕವಾಗಿ ಅವರಿಗೆ ಕಾಣುವದು ಸಾಧ್ಯವಿಲ್ಲ. ಅದರಲ್ಲೂ ಸದಾ ಕಾಡುಪ್ರಾಣಿಗಳು, ಅಪಘಾತ, ರೋಗ-ರುಜಿನಗಳು, ಇತರ ನೈಸರ್ಗಿಕ ಗಂಡಾಂತರಗಳ ನಡುವೆ ಜೀವಿಸುವ ಮುರಿಯರಿಗೆ ಇಂಥ ಜೀವನದ ರಸನಿಮಿಷಗಳು ಕೆಲವು ಮಾತ್ರ. ಇವನ್ನು ಸನ್ಮಾನಿತ ಅತಿಥಿಗಳೊಂದಿಗೆ ಹಂಚಿಕೊಳ್ಳುತ್ತಾರೆ. ಕರ, ಅರಣ್ಯ ಮತ್ತು ಪೊಲೀಸ್ ಅಧಿಕಾರಿಗಳು ಇವರ ಸರಳತೆಯ ದುರುಪಯೋಗ ಪಡೆಯುವದರಿಂದ ಅವರಿಗೆ ಘೋಟುಲದ ಅಸ್ತಿತ್ವವನ್ನೇ ಅಲ್ಲಗಳೆದುಬಿಡುತ್ತಾರೆ. ಆದರೆ ವಿಶ್ವಾಸಪಾತ್ರರಾದ ಇತರರು ಬಂದರೆ ಆಹಾರ-ಮದ್ಯಗಳೊಂದಿಗೆ ಮೋತಿಯಾರಿಗಳ ಜೊತೆ ಮಾಡಿಕೊಟ್ಟು ಘೋಟುಲದ ಜೀವನದ ಪರಿಚಯವನ್ನು ಒದಗಿಸುತ್ತಾರೆ. ಅದೆಂತಹ ಅಪೂರ್ವ ಆತಿಥ್ಯ! ಆದರೆ ವಿವಾಹದ ನಂತರ ಘೋಟುಲಗಳಿಗೆ ಭೆಟ್ಟಿಕೊಟ್ಟಿದ್ದರಿಂದ, ಅದಕ್ಕೂ ಹೆಚ್ಚಾಗಿ ಪತ್ನಿಯನ್ನು ಬಸ್ತರಕ್ಕೆ ಕರೆದೊಯ್ದದ್ದರಿಂದ ಎಂತಹ ಅಪೂರ್ವ ಸುಸಂದರ್ಭ ಕಳೆದುಕೊಂಡೆ ಎಂದು ನೆನೆದರೆ ಕಳವಳ ವಾಗುತ್ತದೆ! ಯಮಧರ್ಮರಾಯ ಗಳಿಸಿದ ಪುಣ್ಯಕ್ಕಿಂತ ಪಾಪ ಹೆಚ್ಚಾಯಿತೆಂದು ನಿರ್ಧರಿಸಿ ಇನ್ನೊಮ್ಮೆ ಭೂಲೋಕಕ್ಕೆ ಕಳಿಸಿದರೆ, ಪೂರ್ವಸ್ಮೃತಿ ಜೋರಾಗಿದ್ದರೆ ವಿವಾಹಕ್ಕೂ ಮೊದಲು ಒಮ್ಮೆಯಾದರೂ ಘೋಟುಲಕ್ಕೆ ಭೆಟ್ಟಿಕೊಟ್ಟು ಬರಬೇಕೆಂದು ದೃಢಸಂಕಲ್ಪ ಮಾಡಿಕೊಂಡಿದ್ದೇನೆ!

# 11. ಬಡತನದಲ್ಲೂ ವರ್ಣರಂಜಿತ ಬದುಕು



ಅಂದು ಓರ್ಛಾದ ಸಂತೆ. ಓರ್ಛಾ, ಮಧ್ಯಪ್ರದೇಶದ ಬಸ್ತರ ಜಿಲ್ಲೆಯ ದಟ್ಟಕಾಡು. ಗುಡ್ಡ-ಬೆಟ್ಟ, ನದಿ-ಹಳ್ಳಗಳಿಂದ ಸುತ್ತುವರಿದ ಚಿಕ್ಕಹಳ್ಳಿ. ಶತಕಗಳಿಂದಲೂ ತಮ್ಮ ವೈವಿಧ್ಯಮಯ ಜೀವನ, ಸಂಸ್ಕೃತಿಗಳನ್ನು ಕಾಪಾಡಿಕೊಂಡು ಬಂದ ದಂಡಾಮಿ ಮಾರಿಯರ ದರ್ಶನ ಲಾಭ ಪಡೆಯಬೇಕಾದರೆ, ಹೆದ್ದಾರಿ ಬಿಟ್ಟು ಮೂವತ್ತು ಕಿಲೋಮೀಟರ್ ಕಾಲುದಾರಿಯಲ್ಲಿ ನಡೆದೇ ಹೋಗಬೇಕು. ನಸುಕಿನಲ್ಲಿ ಅಮದಯಿ ನದಿಗುಂಟ ಹಚ್ಚ ಹಸಿರು ಕಾಡಿನ ದಾರಿ ತುಳಿಯುವುದು ಒಂದು ಸುಖದ ಅನುಭವ. ಆಗೊಮ್ಮೆ ಈಗೊಮ್ಮೆ ದಣಿದ ಕಾಲುಗಳಿಗೆ

ವಿಶ್ರಾಂತಿ ಕೊಡಲು ಇಲ್ಲವೆ ಸೃಷ್ಟಿ ಸೌಂದರ್ಯ ಸವಿಯಲು ನಿಂತಾಗ, ವಾಯುವೇಗದಲ್ಲಿ ಸಂತೆಗೆ ಹೊರಟ ಆದಿವಾಸಿಗಳಿಗೆ ಕಾಲುದಾರಿ ಬಿಟ್ಟುಕೊಡಬೇಕಾಗುತ್ತಿತ್ತು. ಅವರ ವಿನಯ, ಸೌಜನ್ಯಗಳನ್ನು ನಗರವಾಸಿಗಳು ಮರೆತು ಎಷ್ಟು ಶತಮಾನಗಳು ಕಳೆದವೋ! ಪುರುಷರು ತಲೆಗೊಂದು ರುಮಾಲು, ನಡುವಿಗೊಂದು ಬಿಗಿಯಾಗಿ ತುಂಡನ್ನು ಉಟ್ಟರೆ ಹೆಂಗಳೆಯರು ನೀಲಿ, ಕೇಸರಿ, ಗುಲಾಬಿ ಇಲ್ಲವೇ ಕೆಂಪು ತುಂಡು ಸೀರೆಯನ್ನುಟ್ಟು, ಹೆಣ್ತನ ಮುಚ್ಚುವ ಯತ್ನದಲ್ಲಿದ್ದಂತೆ ತೋರಲಿಲ್ಲ. ಚಿಕ್ಕ ಅಂಗವಸ್ತ್ರವನ್ನು ನಡುವಿಗೆ ಸುತ್ತಿ ಮೇಲೆ 'ಉಪರಣೆ' ಹೊದೆದವರೂ ಇದ್ದರು. ಕೆಲವೇ ದಶಕಗಳ ಹಿಂದೆ ಈ ಬುಡಕಟ್ಟಿನವರು ಪರ್ಣಗಳನ್ನೆ ವಸ್ತ್ರಗಳನ್ನಾಗಿ ಬಳಸುತ್ತಿದ್ದುದನ್ನು ಸ್ಮರಿಸುವಂತೆ ಆಯಿತು. ಹಳ್ಳ, ಸಣ್ಣ ಪ್ರವಾಹಗಳನ್ನು ದಾಟುವಾಗ ತುಂಡು ಸೀರೆ, ಕಿರಿಪಂಚೆಗಳ ಉಪಯೋಗ, ವ್ಯಾವಹಾರಿಕವೆನಿಸಿತು.

ಈ ಮಾರಿಯರು ಸಂತೆ, ಜಾತ್ರೆ, ಬೇಟೆ, ಯಾತ್ರೆಗೆ ಹೋಗುವದಿದ್ದರೂ ತಮ್ಮ ನಿತ್ಯ ಬಳಕೆಯ ಸಾಮಾನು ಜೊತೆಯಲ್ಲಿ ಒಯ್ಯುವರು. ಬಿಲ್ಲನ್ನು ಹೆಗಲಿಗೇರಿಸಿ, ಅದರ ಎರಡೂ ತುದಿಯಿಂದ ಸಾಮಾನು ಇಳಿಬಿಟ್ಟಿರುತ್ತಾರೆ. ಒಂದಂಚಿಗೆ ಬಿದಿರಿನ ಬುಟ್ಟಿಯಲ್ಲಿ ಅಡಿಗೆಯ ಸಾಮಗ್ರಿ, ಮಾರುವ ಧಾನ್ಯ, ಬೇಳೆಗಳಿದ್ದರೆ, ಇನ್ನೊಂದು ಕೊನೆಗೆ 'ತುಂಬಾ'ಗಳಲ್ಲಿ ಕುಡಿಯುವ ನೀರು, ಹುರುಪು ಬರಲು ಕೊಂಚ ಮದ್ಯ, ಕೈಚೀಲದಲ್ಲಿ ಕೆಲವು ಬಟ್ಟೆ ಮತ್ತು ಬಾಣಗಳನ್ನು ಕಾಣಬಹುದಾಗಿದೆ. ಗೃಹಿಣಿಯರು ತಮ್ಮ ಹಿರಿಯ ಸೊತ್ತಾದ ಮಕ್ಕಳೊಂದಿಗೆ, ಕುಕ್ಕುಟ ಸಂಸಾರವನ್ನೂ, ಆಡಿನ ಮರಿಗಳನ್ನು ಹೊತ್ತಿರುತ್ತಾರೆ. ನವ ಯುವಕ, ಯುವತಿಯರು ಗಿಳಿವಿಂಡುಗಳಂತೆ, ತಂಡದಲ್ಲಿದ್ದು ಜೊತೆಯಾಗಿ ಹರಟುವದು, ಹಾಡುವದು ಮಾಡುತ್ತಾರೆ. ನಡೆದು ದಣಿವಾದಾಗ ನೀರು ಇರುವ ತಾಣದಲ್ಲಿ ತಮ್ಮ ಗಂಟುಮೂಟೆಗಳನ್ನು ಇಳಿಸಿ, ಕೈಕಾಲುಗಳನ್ನು ತೊಳೆದು, ಸಂಗಡ ತಂದ 'ಲಾಂದಾ' (ಗಂಜಿಸೆರೆ) ಸ್ವಲ್ಪ ಸೇವಿಸಿದರೆ, ಸುಧಾರಿಸಿಕೊಂಡು ತಿರುಗಿ ಮುಳ್ಳು, ಕಂಟೆ, ಕಲ್ಲುಗಳನ್ನು ಲೆಕ್ಕಿಸದೇ ಬೆರಳು ಚಾಚಲು ಸಿಗುವಲ್ಲಿ ಪಾದಗಳನ್ನು ಚಾಚುತ್ತ ಆಡಿನಂತೆ ನಡೆದೇಬಿಡುವರು.

ಇಕ್ಕಟ್ಟಾದ ಕಾಲುದಾರಿ ತುಳಿಯುವಾಗ, ಅಪರಿಚಿತರ ನಾಡಿನ ಮಾರ್ಗದರ್ಶನಕ್ಕಾಗಿ ಸ್ಥಾನೀಯ ನಿವಾಸಿ ಸುಖದೇವನ ಸಹಾಯ ಕೋರಿದ್ದು ಉತ್ತಮವಾಯಿತು ಅನಿಸಿತು. ಎತ್ತರವಾಗಿ ಬೆಳೆದ ಗುಂಪು ಗುಂಪಾಗಿ ನಿಂತ ಸಾಲ, ಸೌಜ, ಸೇಜಾ, ಸಾಗವಾನಿ ಮರಗಳು. ಅವುಗಳನ್ನು ಬಿಗಿದಪ್ಪಿದ ಬಗೆಬಗೆಯ ಲತಾವಳಿಗಳು, ಹಾಡಿ ನಲಿಯುವ ಹಕ್ಕಿಗಳು, ಜುಳುಜುಳು ಹರಿಯುವ ನದಿ, ಯಾವದೋ ಅಪ್ಸರೆಯರ ನಾಡಿನ ಮೋಡಿಯನ್ನು ಹೊಂದಿತ್ತು. ನೀರಿಗಿಳಿದ ಕುವರಿಯೊಬ್ಬಳು ಜಲಕ್ರೀಡೆಯಲ್ಲಿ ಆನೆಯನ್ನು ನಾಚಿಸುತ್ತಿದ್ದಳು. ಸಂಗಡಿಗನಿಲ್ಲದಿದ್ದರೆ ಕ್ಯಾಮರಾ ಅವಳತ್ತ ತಿರುಗಿ 'ಕ್ಲಿಕ್' ಅನ್ನುತ್ತಿತ್ತೋ ಏನೋ! ಜೋಡಿ ಬಕಗಳು ತೇಲುತ್ತ ಈ ರಂಭೆಯಿಂದ ದೂರ ಸರಿದವು. ದೂರದ ಬಂಡೆಯ ಮೇಲೆ ಯುವಕನೊಬ್ಬ ಏಕಚಿತ್ತದಿಂದ ಮೀನು ಹಿಡಿಯುವದರಲ್ಲಿ ಮೈಮರೆತಿದ್ದ. ಗೃಹಿಣಿಯೊಬ್ಬಳು ಸಾಲಪರ್ಣಗಳನ್ನು ಕಿತ್ತು ಸೆರಗಿಗೆ ಸೇರಿಸಿದಳು. ಗೃಹಸ್ಥನೊಬ್ಬ ತನ್ನ ಗುಲ್ಲಾದಿಂದ ಕಲ್ಲನ್ನು ತೂರಿ ಹಕ್ಕಿಯನ್ನು ಕೆಡಹುವದರಲ್ಲಿದ್ದ. ಕೈಯಲ್ಲಿ ಬಿಲ್ಲು ಬಾಣ ಹಿಡಿದು, ಹೆಚ್ಚಿನ ಬಾಣಗಳನ್ನು ರುಮಾಲಿಗೆ ಸಿಕ್ಕಿಸಿಕೊಂಡ ಬೇಟೆಗಾರನು ಕಣ್ಸನ್ನೆಯಿಂದ ಸದ್ದು ಮಾಡದಂತೆ ಸೂಚಿಸಿದ. ಪೊದೆಯಾಗಿ ಬೆಳೆದ, ಗಿಡಗಂಟಿಗಳ ನಡುವೆ ಮಾರಿಯಾ ತಂಡ ಮೊಲಗಳ ಕಾಲು ಹೆಜ್ಜೆ ಗುರುತಿಸಿ, ಉದ್ದವಾಗಿ ಅದರ ಎತ್ತರವಿಲ್ಲದ ಬಲೆಯಿಂದ ಸುತ್ತುವರಿದು, ಅವನ್ನು ಹಿಡಿಯುವದರಲ್ಲಿ ತೊಡಗಿದ್ದಳು. ಬೊಬ್ಬೆ ಹಾಕಿದರು. ಈ ಸದ್ದಿಗೆ ಕಂಗೆಟ್ಟು ಸುರಕ್ಷಿತ ಸ್ಥಳಕ್ಕೆ

ಒಡಲೆತ್ತಿಸಿದ ಮೊಲ ಬಲೆಯಲ್ಲಿ ಸಿಕ್ಕಿಕೊಂಡಿತು. ತಾಯಿಯನ್ನು ಹಿಂಬಾಲಿಸಿ ಬಂದ ಮರಿ ಮೊಲವೂ ತಾಯಿಯೊಂದಿಗೆ ಬುಟ್ಟಿಗೆ ಬಿತ್ತು.

ಸದಾಕಾಲವೂ ಬಡತನ, ದುಡಿತ, ಕಷ್ಟಕರ ಕಾಡಿನ ವಾತಾವರಣದಲ್ಲಿರುವ ಆದಿವಾಸಿಗಳಿಗೆ, ಸಂತೆ, ಜಾತ್ರೆ, ವಿವಾಹ, ನೃತ್ಯಕೂಟ, ಹಬ್ಬ-ಹುಣ್ಣಿಮೆಗಳೆಂದರೆ ಪಂಚಪ್ರಾಣ. ಅಂತೆಯೇ ಇವುಗಳಲ್ಲಿ ಪಾಲುಗೊಳ್ಳಲು ಬೇಕಾದ್ದನ್ನು ಮಾಡಲು ಸಿದ್ಧ. ಈ ದಿನಗಳಿಗಾಗಿ ಅವರ ಉತ್ತಮ ಉಡುಪು, ಆಭರಣಗಳು ಮೀಸಲು, ಓರ್ಛಾ ಸಂತೆಗೆ ಹೊರಟವರು ಅವರ ವಿವಿಧ ಅಲಂಕಾರಗಳಿಂದಾಗಿ, ಅಲಂಕೃತ ನಾಟಕ ವೇಷಧಾರಿಗಳು ಕಾಡಿನಲ್ಲಿ ಹೊರಟಂತೆ ಭಾಸವಾಗುತ್ತಿತ್ತು. ನವ ಯುವಕನೊಬ್ಬ ಬೆಳೆಸಿದ ಉದ್ದ ಕೂದಲನ್ನು ಮುಡಿಯಾಗಿ ಕಟ್ಟಿ, ಹೂ ಮುಡಿದು, ಬಾಚಣಿಗೆ ಸಿಗಿಸಿಕೊಂಡು ಠೀಕಾಗಿದ್ದ. ಕುಡಿ ಮೀಸೆಯವನೊಬ್ಬ ರುಮಾಲಿಗೆ ಕವಡೆ ಸರಗಳನ್ನು ಸುತ್ತಿ ಅಂದವಾದ ಗರಿಯೊಂದನ್ನು ಸಿಕ್ಕಿಸಿಕೊಂಡು, ಕಂಠಾಭರಣ ಧರಿಸಿ ರಸಿಕತನ ಪ್ರದರ್ಶಿಸುತ್ತ ಹೊರಟಿದ್ದ. ಹರೆಯದವನೊಬ್ಬ ಟಾಂಕಿ (ಕಿರುಕೊಡಲಿ) ಯೊಂದನ್ನು ಹೆಗಲಿಗೇರಿಸಿ ರುಮಾಲಿಗೆ ಗೊಂಡೆ ಹೂಗಳನ್ನು ತುರಾಯಿಯಂತೆ ಜೋಡಿಸಿ, ಯಾವಳನ್ನು ವಶೀಕರಿಸಲೆಂದು ಲೆಕ್ಕಾಚಾರ ಹಾಕುತ್ತ ನಡೆದಿದ್ದ, ಬಟ್ಟೆ ಬರೆಗಳತ್ತ ಅಲಕ್ಷ್ಯದಿಂದಾಗಿ ಮಾರಿಯಾ ನಾರಿಯರು ಕ್ಯಾಮರಾ ಕಣ್ಣಿಗೆ ಹೆಚ್ಚು ಆಕರ್ಷಕರಾಗಿ ಕಂಡರು. ಮಕ್ಕಳನ್ನು ಮನೆಯಲ್ಲಿ ಬಿಟ್ಟು ಬಂದ ತಾಯಿ, ತಂದ ಕಾಳು-ಕಡ್ಡಿ ಕೊಟ್ಟು ಉಪ್ಪು, ಬೆಲ್ಲ, ಮೆಣಸು ಪಡೆದು ಬೇಗ ಮನೆ ಸೇರುವ ಹವಣಿಕೆಯಲ್ಲಿ ಇದ್ದಂತೆ ಇತ್ತು. ಮುದಿಯಳೊಬ್ಬಳು ತಾನು ಬಿಡುವಿನ ವೇಳೆ ಹೆಣೆದ ಬುಟ್ಟಿ, ಚಾಪೆಗಳಿಗೆ ಎಷ್ಟು ಸಾಮಾನ ಸಿಕ್ಕೀತು ಎಂದು ವಿಚಾರಿಸುತ್ತಿದ್ದಳು.

ಕಾಡಿನ ತಮ್ಮ ಹಳ್ಳಿಗಳಲ್ಲಿ ಹೆಚ್ಚಿನ ಮನರಂಜನೆಯ ಸಾಧನೆಗಳಿಲ್ಲದ ಮಾರಿಯರಿಗೆ ಸಂತೆಯ ಜಾಗ, ವ್ಯಾಪಾರದ ಜೊತೆಗೆ ವಿಚಾರ ವಿಮರ್ಶೆ, ಸಾಂಸ್ಕೃತಿಕ ಚಟುವಟಿಕೆ, ವಿನೋದಾವಳಿಗಳ ಸ್ಥಳವೂ ಆಗಿರುತ್ತದೆ. ಸಂತೆಯ ಪಕ್ಕದಲ್ಲಿ ಕೋಳಿ ಅಂಕವೂ ನಡೆದಿತ್ತು. ಮುಖಭಾವದಿಂದಲೇ ಗೆದ್ದವರನ್ನು ಸೋತವರಿಂದ ಬೇರ್ಪಡಿಸಬಹುದಾಗಿತ್ತು. ಜೊತೆಯಾಗಿ ಬೆಳೆದು ವಿವಾಹದಿಂದಾಗಿ ಬೇರ್ಪಟ್ಟ ಗೆಳತಿಯರು ಬಾಲ್ಯದ ದಿನಗಳನ್ನು ನೆನಸಿಕೊಳ್ಳುವದರಲ್ಲಿ ಮೈಮರೆತಿದ್ದರು. ಯಾವದೇ ಕಾರಣಕ್ಕಾಗಿ ವಿವಾಹದಲ್ಲಿ ಬಂಧಿತರಾಗದ ಪ್ರೇಮಿಗಳು ಹಿಂದಿನ ಆಕರ್ಷಣೆ, ಆತ್ಮೀಯತೆಗಳಿಂದಲೇ ಸಾರ್ವಜನಿಕ ಸ್ಥಳದಲ್ಲಿ ಸರಸ ಸಲ್ಲಾಪ ನಡೆಸಿದ್ದರು. ಯಾರಿಗೂ ಇಲ್ಲದ ವಾಸಕೋಟು ಧರಿಸಿದ ಮದುಮಗನೊಬ್ಬ ಎಷ್ಟು ರಂಭೆಯರು ತನ್ನತ್ತ ಕಳ್ಳನೋಟ ಬೀರುತ್ತಿದ್ದಾರೆಂದು ಎಣಿಸಿ ಪುಲಕಿತನಾದ. ಮಾಂಸಖಂಡಗಳೆಲ್ಲ ತುಂಬಿಕೊಂಡ, ಕೆಚ್ಚೆದೆಯ ಕಡುಗಲಿಯೊಬ್ಬ ನೆರೆಹಳ್ಳಿಯ ಕುಮಾರಿಗೆ ಹಿಡಿತುಂಬ ಚುರಮುರಿ ಕೊಡಹೋದಾಗ ಅವಳು ಹುಸಿಕೋಪ, ನಾಚಿಕೆಗಳನ್ನು ಪ್ರದರ್ಶಿಸುತ್ತ ಬೇಡವೆನ್ನುತ್ತ ಸ್ವೀಕರಿಸಿದ ಸನ್ನಿವೇಶ ಮೋಜಾಗಿತ್ತು. ತನ್ನ ಜೊತೆಯವರೊಂದಿಗೆ ಆ ಹಿಡಿ ಚುರಮುರಿಯನ್ನು ಹಂಚಿಕೊಂಡು ತಿಂದಾಗ ಅವಳು ಸಮತಾವಾದದಲ್ಲಿ ವಿಶ್ವಾಸ ಇಟ್ಟವಳೆಂದು ಖಚಿತವಾಯಿತು. ಸ್ತ್ರೀಪುರುಷರು ಹೆಚ್ಚಿನ ಸಮಾನತೆಯಿಂದ ನಡೆದುಕೊಂಡದ್ದನ್ನು ನೋಡಿದಾಗ ನಗರದ ಆಧುನಿಕರ ಬಗ್ಗೆ ತಿರಸ್ಕಾರ ಮೂಡಿತು.

ಸುಖದೇವನ ಪರಿಚಯದ ಮೊಡನಾರಹಳ್ಳಿಯ ಪಟೇಲನು ಸಂತೆಯಲ್ಲಿ ಭೆಟ್ಟಿಯಾದ್ದರಿಂದ ಯಾವ ದಂಡಾಮಿ ಮಾರಿಯರ ಹಳ್ಳಿಗೆ ಹೋಗುವದು ಎಂಬ ಸಮಸ್ಯೆ ತಾನಾಗಿ ಪರಿಹಾರವಾಯಿತು. ಬಹುದೂರದ ಅತಿಥಿಗಳು ತಮ್ಮೂರಿಗೆ ಬರಲಿದ್ದಾರೆಂದು ಲಗುಬಗೆಯಿಂದ ಸಂತೆಯ ಕೆಲಸ ಪೂರೈಸಿಕೊಂಡು, ಆಗಂತುಕರೊಂದಿಗೆ ಹಳ್ಳಿಗೆ ಹೊರಟೇ ಬಿಟ್ಟ. ದಾರಿಯುದ್ದಕ್ಕೂ ತಮ್ಮವರ ಬವಣೆಗಳನ್ನು ತೋಡಿಕೊಳ್ಳುತ್ತಲೇ ಇದ್ದ. ''ಇಷ್ಟು ವರ್ಷ,

ಎಷ್ಟೆ ಕಷ್ಟ-ನಷ್ಟಗಳನ್ನು ಅನುಭವಿಸಿದರೂ ಅದು ನಮ್ಮದೇ ಜೀವನ ಎಂಬ ಅಭಿಮಾನವಿತ್ತು. ಆದರೆ ತಾನೇ ನಮ್ಮ ತಂದೆ ತಾಯಿ ಎಂದು ತಿಳಿದ ಸರಕಾರ, ನಮ್ಮ ಜೀವನದ ಪ್ರತಿ ಹಂತದಲ್ಲೂ ಕೈ ಹಾಕಹತ್ತಿದೆ. ಈಗ ನೋಡಿ, 'ಪೆಂಡಾ' ಕೃಷಿ ಪದ್ಧತಿ ನಿಲ್ಲಿಸಲು ಆಜ್ಞೆ ಹೊರಡಿಸಿದೆ... ಎನ್ನುತ್ತಿದ್ದಾಗ, ''ಪೆಂಡಾ ಎಂದರೆ ?'' ಎಂಬ ಪ್ರಶ್ನೆಗೆ ಉತ್ತರಿಸುತ್ತ ''ಬಾಬೂಜಿ, ನಾವೆಲ್ಲ ಅಲೆಮಾರಿ ಜನಾಂಗದವರು, ದಟ್ಟಕಾಡು ಇರುವಲ್ಲಿ ಸತತ ನೀರಿನ ಪೂರೈಕೆ ಇರುವ ಜಾಗ ಆರಿಸಿ, ಎತ್ತರವಾದ ಸ್ಥಳಗಳಲ್ಲಿ ಗುಡಿಸಲುಗಳನ್ನು ನಿಲ್ಲಿಸುತ್ತೇವೆ. ಇವೆಲ್ಲ ಬಿದಿರು, ಪರ್ಣಗಳ ತಾತ್ಕಾಲಿಕ ಮನೆಗಳು. ಆದರೆ ಕಾಡುಹಂದಿ, ಹುಲಿ, ಕರಡಿ ಅದೇಕೆ ಕಾಡಾನೆ ಯಿಂದಲೂ ಭೇದಿಸಲಾಗದ ಬೇಲಿ ನಿಲ್ಲಿಸುತ್ತೇವೆ. ಇದಕ್ಕೆ ಬೇಕಾಗುವ ನಾಟುಗಳನ್ನು ಸುತ್ತಲಿನ ಕಾಡಿನಿಂದ ಧಾರಾಳವಾಗಿ ಪಡೆಯುತ್ತೇವೆ. ಉಳಿದ ಗಿಡಮರಗಳನ್ನು ಸುಟ್ಟು, ಆ ಬೂದಿಯನ್ನೇ ಗೊಬ್ಬರವನ್ನಾಗಿ ಹರವಿ ಕೃಷಿ ಮಾಡುತ್ತೇವೆ. ಅನ್ನ , ಆಶ್ರಯ, ಆಚ್ಛಾದನ ಕೊಡುವ ಭೂಮಾತೆಯ ಎದೆ ಸೀಳಿ (ಊಳಿ) ನೋಯಿಸುವ ಅಧಿಕಾರ, ನಮಗೇನಿದೆ ? ನಮ್ಮ ಜನರೂ ತುಂಬಾ ಕಡಿಮೆ ಇರುವದರಿಂದ 'ಪೆಂಡಾ' ಪದ್ಧತಿಯಿಂದ ಪ್ರತಿಯೊಬ್ಬನ ಪಾಲಿಗೆ ಬಂದ ಕಾಳು ಕಡ್ಡಿಗಳು ಸಾಕಾಗುತ್ತವೆ. ಇದಲ್ಲದೇ ಗುಡಿಸಲಿನ ಆವಾರದಲ್ಲಿ ಬರಬಟೆ (ಅಲಸಂದೆ ಕಾಯಿ), 'ಪುಯಿಶಾಕ' (ಬಸಳೆಸೊಪ್ಪು)ಗಳನ್ನು ಬೆಳೆಸುತ್ತೇವೆ. ಬೇಟೆಯಿಂದ ತಂದ ಮೊಲ, ಚಿಗರೆ, ಹಂದಿಯ ಮಾಂಸ, ಹಿಡಿದು ತಂದ ಮೀನು ಇರುತ್ತವೆ. ಅಭಾವದ ದಿನಗಳಲ್ಲಿ ಇಣಚಿ, ಹೆಗ್ಗಣಗಳಿಗೂ ಹೆಚ್ಚಿನ ಬೇಡಿಕೆಯಿರುತ್ತದೆ'' ವಿಷಾದದ ನಗೆ ಬೀರಿ ಪಟೇಲನೆಂದ.

''ಇದಕ್ಕೆ ಸರಕಾರವೇಕೆ ಆಕ್ಷೇಪಿಸಬೇಕು ?'' ಎಂದಾಗ ''ಊಳದೇ ಸಾಗುವಳಿ ಮಾಡದೆ ಸುಟ್ಟ ಕೊರಡಿನ ಗೊಬ್ಬರದಿಂದ ಭೂಮಾತೆ ಎಷ್ಟು ದಿನ ತಾನೆ ಆಹಾರದ ಧಾನ್ಯಗಳನ್ನು ಪೂರೈಸಿಯಾಳು ? ಭಾರಿ ಮಳೆಯಿಂದಾಗಿ ಕಸುವೆಲ್ಲ ಹರಿದು ಭೂಮಿ ಬಂಜೆಯಾಗುವದು. ಇಷ್ಟರಲ್ಲಿ ನಮ್ಮ ಗುಡಿಸಲುಗಳೂ ವರಲೆ ಹತ್ತಿ ಕುಸಿಯಲಾರಂಭಿಸುವದರಿಂದ ಹಿರಿಯರೆಲ್ಲ ವಿಚಾರ ವಿಮರ್ಶೆ ಮಾಡಿ ಬೇರೊಂದು ತಾಣ ಹುಡುಕಿಕೊಂಡು ಹೋಗುತ್ತೇವೆ. ಹೀಗೆ ಮಾಡುವದರಿಂದ ಬೆಲೆ ಬಾಳುವ ಕಾಡು ನಾಶವಾಗುತ್ತದೆ. ಭೂಮಿ ಸತ್ವಹೀನವಾಗುತ್ತದೆ. ಆದ್ದರಿಂದ ನಾವು ನೆಲೆಯಾದ ಸ್ಥಳಬಿಟ್ಟು ಹೋಗಕೂಡದೆಂದು ಕಡ್ಡಾಯ ತಂದಿದ್ದಾರೆ. ಇದಕ್ಕೂ ನಮ್ಮ ಆಕ್ಷೇಪಣೆ ಇರಲಿಲ್ಲ. ಆದರೆ ಅಬಕಾರಿಯವರು, ಅರಣ್ಯ ಖಾತೆಯವರು, ಪೊಲೀಸರು ಒಂದಿಲ್ಲೊಂದು ನೆವದ ಮೇಲೆ ಹಳ್ಳಿಗೆ ಬಂದು ನಮ್ಮನ್ನು ಕಾಡಿಸಿ ಪೀಡಿಸಿ, ಹಿಂಡುತ್ತಲೇ ಇರುತ್ತಾರೆ. ಇದರಿಂದ ನಮ್ಮ ಸಂಪೂರ್ಣ ನೆಮ್ಮದಿ ಹಾಳಾಗಿಬಿಟ್ಟಿದೆ. ಸಾಲದ್ದಕ್ಕೆ ಮಕ್ಕಳನ್ನು ತುಂಬ ದೂರವಿರುವ ಶಾಲೆಗೆ ಕಳಿಸಲೇಬೇಕಂತೆ. ಪ್ರತಿಯೊಂದು ಕುಟುಂಬದಿಂದ ಒಬ್ಬ ಜೀತದಾಳು ರಸ್ತೆಯ ಕೆಲಸಕ್ಕೆ ಕಡ್ಡಾಯವಾಗಿ ಹೋಗಬೇಕಂತೆ. ನಾವು ಲಾಂದಾ, ಸಲ್ಪಿ (ಸೆರೆ) ಮನೆಯಲ್ಲಿ ಕಾಸಬಾರದಂತೆ. ಸರಕಾರಿ ಗುತ್ತಿಗೆದಾರನಿಂದಲೇ ಸೆರೆ ಕೊಳ್ಳಬೇಕಂತೆ. ಇದರಿಂದ ಮೊದಲೇ ಬಡವರಾದ ನಮ್ಮ ಉತ್ಪನ್ನ ಕಡಿಮೆಯಾಗಿ ಸಾಲ ಬೆಳೆಯುವದನ್ನು ಬಿಟ್ಟರೆ ಬೇರೇನೂ ಆಗಲಿಲ್ಲ. ಈ ಸೇಂದಿ ವ್ಯಾಪಾರಿಗಳು ನಮ್ಮ ಬೆಳೆ ಕೈಗೆ ಹತ್ತುವ ಮೊದಲೇ ಸಾಲದ ಲೆಕ್ಕಕ್ಕೆಂದು, ಬೆಳೆದದ್ದೆಲ್ಲ ದೋಚಿಕೊಂಡು ಹೋದರೆ ನಾವೇನು ತಿನ್ನುವದು ಬಾಬೂಜಿ ?'' ಎನ್ನುತ್ತಿದ್ದಂತೆ ಸುಖದೇವನಿಗೆ ಕಾಡಿನ ಕಾಜು (ಗೋಡಂಬಿ)• ಕಣ್ಣಿಗೆ ಬಿದ್ದು ಅದನ್ನು ಮಕ್ಕಳಿಗೊಯ್ಯಲು ಕೋತಿಯಂತೆ ಮರ ಏರಿಯೇಬಿಟ್ಟ.

ನಿರ್ವಾಹವಿಲ್ಲದೇ ಸುಖದೇವನಿಗಾಗಿ ಕಾಯುತ್ತಾ ನಿಂತಾಗ ಮಾರಿಯ ಪಟೇಲ ಮಾತು ಮುಂದರಿಸಿದ ''ಹೋದವರ್ಷ ನನ್ನ ಕುಟುಂಬದ ಘಟನೆ ಕೇಳಿ! ಕಾಡಿಗೆ ಹೋದ ಹಿರಿಯ

ಮಗನು ಜ್ವರ ಹೊತ್ತುಕೊಂಡೇ ಮರಳಿದ. ಮಂತ್ರವಾದಿಯನ್ನು ವಿಚಾರಿಸಿದಾಗ, ಭಾರ ಬಂದು, ಅವನಿಗೆ ಮಾಟೇರ ದೇವಿ ಬೆನ್ನು ಹತ್ತಿದ್ದಾಳೆ ಎಂಬ ಆದೇಶ ಬಂದಿತು. ಕುರಿ ಕೋಳಿ ಹರಕೆ ಹೊತ್ತರೂ, ಔಷಧೋಪಚಾರಕ್ಕೆ ಸಾಲ ಪಡೆದರೂ ಮಗನನ್ನು ಬದುಕಿಸಲಾಗಲಿಲ್ಲ. ನಮ್ಮ ಪದ್ಧತಿಯ ಪ್ರಕಾರ ಅವಿವಾಹಿತನಾದ ಮೂರನೆಯ ಮಗ ಹರೆಯದ ಸೊಸೆಯನ್ನು ವಿವಾಹವಾಗಬೇಕೆಂದಿರುವಾಗ, ಪತಿಯ ಅಕಾಲಿಕ ಮರಣದಲ್ಲಿ - ಸೊಸೆಯ ಕೈವಾಡವಿದೆ ಎಂಬ ಗುಮಾನಿಯ ಮೇಲೆ ಅವಳನ್ನು ಠಾಣೆಗೆ ಕರೆದೊಯ್ದರು. ಎಷ್ಟು ಅಂಗಲಾಚಿದರೂ ಬಿಡುಗಡೆ ಮಾಡಲಿಲ್ಲ. ನಂತರ ಹವಾಲದಾರನ ಮನೆಯಲ್ಲಿ ಕೆಲಸಕ್ಕಿದ್ದಾಳೆ. ಚೆನ್ನಾಗಿ ತಿಂದುಟ್ಟು ಹಾಯಾಗಿದ್ದಾಳೆ ಎಂದು ಒಬ್ಬರು ಸುದ್ದಿ ತಂದರು. ಸುಖವಾಗಿದ್ದರೆ ಇರಲಿ ಎಂದು ಸುಮ್ಮನಿದ್ದೆವು. ಒಂದು ಸಂಜೆ ಅವಳು ಮನೆಗೆ ಹಿಂದಿರುಗಿದ ರೀತಿ ನೋಡಿ ಕಂಗಾಲಾದೆವು. ಕೇಳಿದ ಎಲ್ಲ ಪ್ರಶ್ನೆಗಳಿಗೆ ಅಳುವೊಂದೇ ಅವಳ ಉತ್ತರವಾಗಿತ್ತು. ಅತ್ತೆ ಬಹಳ ಪುಸಲಾಯಿಸಿ ಕೇಳಿದಾಗ ಹವಾಲದಾರನು ಅವಳನ್ನು ಉಪಪತ್ನಿಯಾಗಿ ಬಳಸಿದ್ದು ಕೊನೆಗೆ ತಾನು ತಾಯಾಗಲಿರುವದನ್ನು ತಿಳಿದು ಹೊಡೆದು ಮನೆಯಿಂದ ಓಡಿಸಿದರೆಂದು ಹೇಳಿದಳಂತೆ. ಇಡೀ ರಾತ್ರಿ ಅವಳು ಅತ್ತಳು. ನಾವೆಲ್ಲ ಎಚ್ಚರವಾಗಿಯೇ ಇದ್ದೆವು. ನಸುಗತ್ತಲೆಯಲ್ಲಿ ಹೊರಗೆ ಹೋದಾಕೆ. ಬಹಳ ಹೊತ್ತು ಬರಲಿಲ್ಲವೆಂದು ಹುಡುಕಿದಾಗ ಕಾಡಿನಲ್ಲಿಯ ಹುಣಿಸೇಮರಕ್ಕೆ ನೇಣುಹಾಕಿಕೊಂಡಿದ್ದು ನಮಗೆ ತಿಳಿಯಲೇ ಇಲ್ಲ...'' ಎನ್ನುತ್ತಿದ್ದಾಗ ಕಣ್ಣು ತೇವವಾದವು.

ಸುಖದೇವ ಸಮಾಧಾನ ಹೇಳಿದ. ಹೊದ್ದ ಬಟ್ಟೆಯಿಂದ ಕಣ್ಣೊರಸಿ ಪಟೇಲ ಮುಂದೆ ನಡೆದ. ವಿಷಯಾಂತರವಾಯಿತು. ಪ್ರೇಮ, ಮದುವೆಗಳ ಸಮಾಚಾರವೆತ್ತಿದಾಗ ಪಟೇಲನೆಂದ, ''ನಾವು ಬಡವರು, ಬುದ್ದುಗಳು, ಆದರೆ ತಪ್ಪು-ಒಪ್ಪುಗಳಲ್ಲಿ ಭೇದ ತಿಳಿಯುವಷ್ಟಾದರೂ ಬುದ್ಧಿ ಇದೆ. ಯಾವ ಅಪರಾಧ ಮಾಡದ ಸೊಸೆಯನ್ನು ಶಿಕ್ಷಿಸಿದರು. ಪೊಲೀಸರ ಮಹಾಪರಾಧಕ್ಕೆ ಶಿಕ್ಷಿಸುವವರು ಯಾರು ? ನಾವು ಧರ್ಮಿಷ್ಟರು, ಕಾಡಿನ ಮಕ್ಕಳು, ಅಂತೆಯೇ ಗಂಡು-ಹೆಣ್ಣು ಎಂಬ ತಾರತಮ್ಯವಿಲ್ಲದೇ ಮನಸ್ಸು ಬಂದಾಗ ಜೊತೆಯಾಗಿ ನಕ್ಕು ನಲಿದು ಬೆಳೆಯುವದರಲ್ಲಿ ವಿಶ್ವಾಸವಿಟ್ಟವರು. ಮಂಗಗಳು ಮುದ್ದಿಸುವಾಗ, ಚಿಗರೆಗಳು ಕೂಡಿದಾಗ, ಹಕ್ಕಿಗಳು ನಲಿದಾಗ, ನಾವೂ ಅವನ್ನು ಅನುಕರಿಸಿದ್ದುಂಟು. ಕಾಡಿನ ಏಕಾಂತದಲ್ಲಿ ಮೋಜಾಗಿರಲು ಬಹಳ ತಾಣಗಳಿವೆ. ವಿವಾಹಿತರೂ ದಾಂಪತ್ಯ ಜೀವನಕ್ಕೆ ಕಾಡಿನ ಆಶ್ರಯವನ್ನೇ ಪಡೆಯುತ್ತಾರೆ. ನನ್ನ ಯೌವನದಲ್ಲಿ ಪತ್ನಿಯ ಸಹವಾಸ ಬೇಕೆನಿಸಿದಾಗೆಲ್ಲ ಕಾಡು ಸೇರುವದು ತುಂಬ ತೊಂದರೆ ದಾಯಕವೆನಿಸುತ್ತಿತ್ತು. ಒಮ್ಮೆ ಏನು ತಮಾಷೆಯಾಯಿತೆಂದಿರಿ ! ಕತ್ತಲೆಯಾಗುವದರಲ್ಲಿದ್ದಾಗ ನಾವು ಕಾಡಿನ ಗವಿಯ ಪಕ್ಕದ ಮರದ ಕೆಳಗೆ ಆಶ್ರಯ ಪಡೆದಿದ್ದೆವು. ಒಮ್ಮಿಂದೊಮ್ಮೆ ಪತ್ನಿಯ ಮುಖ ಬಿಳುಪೇರಿ ಕೈಕಾಲು ಗಡಗಡ ನಡುಗಿದವು. ಧ್ವನಿಯೂ ಏರದೇ ಆಕೆ ಸನ್ನೆ ಮಾಡಿದಾಗ ಹೆಬ್ಬುಲಿಯೊಂದು ಇಕ್ಕಟ್ಟಾದ ಗವಿಯನ್ನು ಸೇರಲು ಯತ್ನಿಸುತ್ತಿತ್ತು. ಪುಣ್ಯಕ್ಕೆ ಚಿಗರೆ ಹಿಂಡೊಂದು ಸಮೀಪದಲ್ಲಿ ಓಡಿಹೋದದ್ದರಿಂದ ಹುಲಿರಾಯನ ಲಕ್ಷ ಅತ್ತ ಹೋಯಿತು. ನಾವು ಬದುಕಿ ನುಸುಳಿಕೊಂಡೆವು. ಇಂದಿನ ಪೀಳಿಗೆಗೆ ಇಂತಹ ಸಾಹಸೀ ಜೀವನ ಕಲ್ಪಿಸಿಕೊಳ್ಳಲು ಅಸಾಧ್ಯವಾಗಿದೆ. ಹಿಂದೆ ನಿರ್ಜನವಾಗಿರುತ್ತಿದ್ದ ಕಾಡಿನಲ್ಲಿ ಅಧಿಕಾರಿಗಳು, ಗುತ್ತಿಗೆದಾರರು, ಕೊರಡುಗಳ್ಳರ ಸಂಚಾರ ಹೆಚ್ಚಾಗಿ, ಈಗ ನಮ್ಮ ಪ್ರೇಮವೆಲ್ಲ ಗುಡಿಸಲಿನಲ್ಲೇ ಕಳ್ಳತನದಿಂದ ಮಾಡುವ ವ್ಯಾಪಾರವಾಗಿ ಪರಿಣಮಿಸಿದೆ ! ಮಹುವಾ ಮರ ಹೂ ಬಿಟ್ಟು ನಿಂತಾಗ, ತಂಗಾಳಿ ಬೀಸುತ್ತಿದ್ದಾಗ, ಬೆಳದಿಂಗಳ ಚೆಲ್ಲಾಟದಲ್ಲಿ ಸಂಗಾತಿಯೊಡನೆ ಸಿಗುವ ಸುಖ, ಮಿಸುಕಾಡಲೂ ಸಾಧ್ಯವಾಗದ ಇಕ್ಕಟ್ಟಿನ ಗುಡಿಸಲಿನಲ್ಲಿ ಏನು ಸಿಕ್ಕೀತು ? ಈ ಹೊಸ ಬದಲಾವಣೆ ನಮಗಾರಿಗೂ

ಮನಸ್ಸಿಗೆ ಬಾರದಾಗ ದೇವರು ಹೇಗೆ ಒಪ್ಪಿಯಾನು ? ಅಂತೆಯೇ ನಮ್ಮನ್ನೆಲ್ಲ ಶಿಕ್ಷಿಸಲು ಹಳ್ಳಿಯ ಮುಖಂಡನ ಮಗನನ್ನೇ ದೇವನು ಕಿತ್ತುಕೊಂಡಿರಬೇಕು...'' ಎಂದು ಮಾತು ಮುಗಿಸಿದ.

ಹಟ್ಟಿ ಚಿಕ್ಕದಾಗಿದ್ದರೂ ಚೊಕ್ಕಟವಾಗಿತ್ತು. ಮನೆಯ ಮುಂದಿನ ಬೈಠಕ ಖಾನೆಗೆ ಮಾಡು ಇದ್ದರೂ ಗೋಡೆಗಳೇ ಇರಲಿಲ್ಲ! ಚಪ್ಪರದಿಂದ ಗೋವಿನ ಜೋಳದ ತೆನೆಗಳೊಂದಿಗೆ ಉಪ್ಪು, ಬೆಲ್ಲ, ಮೆಣಸುಗಳನ್ನು ದಾಸ್ತಾನು ಮಾಡುವ ಪರ್ಣದ ದೊನ್ನೆಗಳನ್ನು ತೂಗು ಹಾಕಿದ್ದರು. ಬಿಲ್ಲು-ಬಾಣಗಳನ್ನು ತೊಲೆಗೆ ಸಿಕ್ಕಿಸಿದ್ದು, ಡೋಲು, ಮೃದಂಗಗಳನ್ನು ಕಂಬಗಳಿಂದ ಇಳಿಬಿಟ್ಟಿದ್ದರು. ಮೂಲೆಯೊಂದರಲ್ಲಿ ಸದಾ ಉರಿಯುತ್ತಿರುವ ಒಲೆ, ಹತ್ತಿರದಲ್ಲಿ ನಾಲ್ಕು ಮಣ್ಣಿನ ಪಾತ್ರೆ, ತುಂಬಾಗಳು, ಕತ್ತಿ-ಕೊಡಲಿಗಳನ್ನು ಗೋಡೆಗೆ ಆನಿಸಿ ಇಟ್ಟಿದ್ದರು. ಪಟೇಲರ ಸೊಸೆ ನೆಲ ಗುಡಿಸಿ ಕಂಬಳಿ ಹಾಸುವದರಲ್ಲಿ ತೊಡಗಿದ್ದರಿಂದ ಅವಾರ ನೋಡಿ ಬರಲು ಅನುಕೂಲವಾಯಿತು. ಕಂಬಕ್ಕೆ ಕಟ್ಟಿ ಹಾಕಿದ ಕೆಂಪು ಮೂತಿಯ ಮರಿ ಕೋತಿಯೊಂದು ಅಪರಿಚಿತರನ್ನು ಕಂಡು ಏನೋ ಆಪತ್ತು ಬಂದಂತೆ ಸುತ್ತಲೂ ಓಡಾಡಿ, ಚೀರಾಡಿ, ಕಂಗಾಲಾಗಿ, ಮಲಮೂತ್ರ ವಿಸರ್ಜಿಸಿ, ಕಣ್ಣು ಮುಚ್ಚಿ ಕುಳಿತಿತ್ತು. ಮನೆಯವಳು ಬಂದು ಅವರೆಲ್ಲ ನಮ್ಮವರೇ ಎಂದು ಎಷ್ಟು ತಿಳಿ ಹೇಳಿದರೂ ಅದಕ್ಕೆ ಮನವರಿಕೆ ಆಗಲೇ ಇಲ್ಲ. ಕುಕ್ಕುಟ ಸಂಸಾರಕ್ಕೆ ಅಂಗಳದಲ್ಲಿ ಬೆತ್ತದ ಮನೆಯೊಂದನ್ನು ಒದಗಿಸಲಾಗಿತ್ತು. ಸದ್ಯ ಪ್ರಸೂತೆ, ಸೂಕರ ಮಾತೆ ಹೊಸಬರನ್ನು ಕಂಡು, ತನ್ನ ನವಪೀಳಿಗೆಯೊಂದಿಗೆ ಸುರಕ್ಷಿತ ಸ್ಥಳಕ್ಕೆ ಧಾವಿಸಿದಳು.

ಮಹುವಾ ಸುರೆಯ ಆಹ್ಲಾದಕರ ಸುವಾಸನೆಯಿಂದ ಸುಖದೇವನ ಬಾಯಿ ನೀರೂರಿ ಆತ ಬೈಠಕಖಾನೆಗೆ ಹಿಂದಿರುಗಲು ಆತುರಪಟ್ಟ. ಪಟೇಲ ಆಗ ಕಂಬಳಿ ಹೊದೆದು ಮಲಗುವ ತಯಾರಿಯಲ್ಲಿದ್ದ. ಪಟೇಲನ ಹರೆಯದ ಮಗ, ''ಅವರಿಗೆ ಮೈ ಸರಿಯಾಗಿಲ್ಲ...'' ಎಂದು ಕುಚೋದ್ಯದಿಂದ ಕಣ್ಣು ಮಿಟಕಿಸಿದ. ಸಾಲಪರ್ಣಗಳ ದ್ರೋಣಗಳನ್ನು ಮಾಡುತ್ತ ಕುಳಿತಿದ್ದ ಸೊಸೆ, ಕೆಲಸ ಮುಗಿಸಿ, ದೊಡ್ಡ ಮಣ್ಣಿನ ಪಾತ್ರೆಯಲ್ಲಿ ಗಂಜಿಯನ್ನು ಹೋಲುವ 'ಲಾಂದಾ' ಸೆರೆಯನ್ನು ತಂದಳು. ಬಾಯಿ ಚಪ್ಪರಿಸುತ್ತ ಸ್ಥಳ ಸಿಕ್ಕಲ್ಲಿ ಕುಕ್ಕರಗಾಲಿನಲ್ಲಿ ಕುಳಿತವರಿಗೆಲ್ಲ ದೊನ್ನೆ ತುಂಬಾ ಲಾಂದಾ ನೀಡುತ್ತಾ ನಡೆದಳು. ಎರಡು ದೊನ್ನೆ ಲಾಂದಾ ಹೊಟ್ಟೆ ಸೇರಿದಾಗ ಪಟೇಲನ ಬುಖಾರ್ (ಜ್ವರ) ಮಾಯವಾಗಿತ್ತು. ಮೂರನೆಯ ದೊನ್ನೆ ಮುಗಿಸಿದಾಗ ರಂಗು ರಂಗಿನ ಮಾತು ಹೊರಬಂದವು. ತನ್ನ ಪಾಡಿಗೆ ರುಚಿಯಾಗಿ ಲಾಂದಾ ಸೇವಿಸುತ್ತ ಕುಳಿತ ಪತ್ನಿಯನ್ನು ಬೊಟ್ಟು ಮಾಡಿ, ''ಈ ಮುದಿಗೂಬೆಯೊಡನೆ ಕಾಡಿಗೆ ಹೇಗೆ ಹೋಗುವುದು ? ಆದ್ದರಿಂದ ಗಟ್ಟಿಮುಟ್ಟಾದ ದೇಹದ ಚಿಗರೆಯಂಥವಳು ಇದ್ದರೆ ಹೇಳಿ ಬಾಬು'' ಎಂದು ಹೇಳಿದಾಗ ಅಲ್ಲಿದ್ದವರೆಲ್ಲ ಮನಸ್ವೀ ನಕ್ಕರು. ಲಾಂದಾ ಸುಖದೇವನಿಗೆ ಸುಖ ನೀಡಿದರೆ, ಅದನ್ನು ಕುಡಿಯದವನಿಗೆ ಚಹಾ ಬಂದಿತು. ಹಾಲಿಲ್ಲದ ಬೆಲ್ಲದ ಚಹಾ, ಹಸಿಪರ್ಣದ ಸುವಾಸನೆ ಅದಕ್ಕೊಂದು ಅಪೂರ್ವ ರುಚಿ ಕೊಟ್ಟಿತ್ತು.

ದಂಡಾಮಿ ಮಾರಿಯರ ಸಾಮೂಹಿಕ ನೃತ್ಯದಲ್ಲಿ ಆಸಕ್ತಿ ವಹಿಸಿದ್ದರಿಂದ ಪಟೇಲನು ಹಳ್ಳಿಯ ಯುವಕರನ್ನು ಕರೆದು ಅದನ್ನು ಏರ್ಪಡಿಸಲು ತಿಳಿಸಿದ. ಈ ಅವಕಾಶವನ್ನೇ ಎದುರು ನೋಡುತ್ತಿದ್ದಂತೆ ಅಕ್ಕ-ಪಕ್ಕದ ಮನೆಗಳಿಂದ ಅಲಂಕಾರದ ಸಲಕರಣೆಗಳನ್ನು ಹೊತ್ತುಕೊಂಡು ಆದಿವಾಸಿ ನರ್ತಕರು ಬರಲಾರಂಭಿಸಿದರು. ಮಾಂದ್ರಿ (ನಗಾರಿಯಂತಹ ಡೋಲು) ಕಾವು ಕೊಟ್ಟು ಕೋಲಾಡಿಸಿದಾಗ, ಹಳ್ಳಿಗೆ ಜೀವ ತುಂಬಿತು. ಎಳೆಯರೆಲ್ಲ ಅಲಂಕರಿಸಿಕೊಳ್ಳಲಾರಂಭಿಸಿದರು. ಬಣ್ಣಗಳನ್ನು ಬಳಸದೇ ಕೇವಲ ಅಲಂಕಾರಗಳಿಂದಲೇ ಆಕರ್ಷಕವಾಗಿರುವುದು ಈ ಜನರ ವೈಶಿಷ್ಟ್ಯ. ಯುವಕರು 'ಗವರ್‌ಸಿಂಗ್' (ಕಾಡು ಕೋಣದ ಕೋಡು)ನಿಂದ

ತಯಾರಾದ ಶಿರೋಭೂಷಣ ಧರಿಸುವದರಿಂದ, ''ಕಾಡುಕೋಣ ಮಾರಿ''ಯರೆಂಬ ಅನ್ವರ್ಥಕ ನಾಮವೂ ಬಂದಿದೆ. ಹೊಳೆಯುವ ಜೋಡಿ ಕೋಡುಗಳಿಗೆ, ಕೆಂಪು, ಹಳದಿ ಬಟ್ಟೆಯ ಪಟ್ಟೆಗಳನ್ನು ಸುತ್ತಿ ಮೇಲೆ ಬಣ್ಣ ಬಣ್ಣದ ಗರಿಗಳನ್ನು ಜೋಡಿಸಲಾಗಿತ್ತು. ಹಣೆಗೆ ಸಮಾನಾಂತರ ಬರುವಂತೆ ಎರಡು ಎಳೆ ಕವಡೆ ಸರಗಳನ್ನು ಬಿಗಿದರೆ, ಹತ್ತಾರು ಸರಗಳನ್ನು ನೇರವಾಗಿ ಮುಖ ಮುಚ್ಚಿಕೊಳ್ಳುವಂತೆ ಇಳಿ ಬಿಡುತ್ತಾರೆ. ಯುವತಿಯರು ತಾವೇ ಪೋಣಿಸಿ ತಯಾರಿಸಿದ ಕೆಂಪು, ಬಿಳಿ, ಹಳದಿ ಮಣಿಗಳ ನಾಲ್ಕೈದು ಸರಗಳನ್ನು ತಲೆಗೆ ಸುತ್ತಿಕೊಳ್ಳುವರು. ಸರಗಳು ಜಾರದಂತೆ ಕಟ್ಟಿಗೆಯ ಕ್ಲಿಪ್, ಮುಳ್ಳು, ಬಾಚಣಿಗೆಗಳನ್ನು ಬಳಸುವರು. ಹಿಂದೆ ಕಟ್ಟಿದ ಮುಡಿಗೆ ಕೆಂಪು ಗೊಂಡೆಗಳಿರುವ ಮಣಿ ಸರಗಳನ್ನು ತೂಗುಬಿಟ್ಟಿದ್ದಾರೆ. ಎಲ್ಲಾ ನರ್ತಕರ ಕೊರಳಿಗೂ ಬಣ್ಣ ಬಣ್ಣದ ಮಣಸರಗಳಿರುತ್ತವೆ. ಯುವಕರು 'ಮಾಂದ್ರಿ' (ಡೋಲು) ಸೊಂಟದವರೆಗೆ ಬರುವಂತೆ ಇಳಿಬಿಟ್ಟು, ಡಮ್‌ಡಮ್ ಡಮಕ್ ಎಂದು ನಾದ ಹೊರಡಿಸಿದಾಗ, ಯುವತಿಯರು ನಾಚುತ್ತ, ಬಳಕುತ್ತ, ಕೈಲೊಂದು ದೊಣ್ಣೆ ಹಿಡಿದು ನೃತ್ಯದಲ್ಲಿ ಪಾಲ್ಗೊಳ್ಳುವರು. ದೊಣ್ಣೆಯ ಮೇಲ್ಗಡೆ ಗೆಜ್ಜೆ ಜೋಡಿಸಿದ್ದರಿಂದ ನೆಲಕ್ಕಪ್ಪಳಿಸಿದಾಗೊಮ್ಮೆ ಶಾಲೆಯ ಲೇಝಿಮ್ ಸಪ್ಪಳ ಹೊರಡುತ್ತದೆ. ಹಿಂದೆ, ಮುಂದೆ ಮಂದಗತಿಯಿಂದ, ವರ್ತುಲಾಕಾರದಲ್ಲಿ ನರ್ತಿಸುವಾಗ ಕುಮಾರಿಯರು ಮೆಲುದನಿಯಲ್ಲಿ ಹಾಡಲಾರಂಭಿಸಿದರು. ಆವೇಶ ತುಂಬಿದಾಗ ಮೃದಂಗಕಾರರು ಜಿಗಿಯುತ್ತ ನರ್ತಿಸುವರು.

ನೃತ್ಯದಂತೆ ಇನ್ನಿತರ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲಿಯೂ ಗಂಡು ಹೆಣ್ಣು ಸಮನಾಗಿ ಪಾಲ್ಗೊಂಡರೂ, ವಿವಾಹವನ್ನು ಹಿರಿಯರೇ ಏರ್ಪಡಿಸುವರು. ಕನ್ನೆಯರಿಗೆ ವಧು ದಕ್ಷಿಣೆಯನ್ನು ಕಾಳುಕಡಿ, ಸೆರೆ, ಭೋಜನ ರೂಪದಲ್ಲಿ ಕೊಡಬೇಕಾಗುವದು, ಕೊಡಲಾರದವನು ಭಾವೀ ಮಾವನ ಮನೆಯಲ್ಲಿ ಒಂದೆರಡು ವರ್ಷ ಜೀತದಾಳಾಗಿ ದುಡಿಯ ಬೇಕಾಗುವದು. ಈ ಜಂಜಾಟ ತಪ್ಪಿಸಲು ಅಣ್ಣನ ವಿಧವೆಯನ್ನು ತಮ್ಮನೇ ವರಿಸುವದು ಸಾಮಾನ್ಯ. ಕೆಲವೊಮ್ಮೆ ಕನ್ನೆಯನ್ನು ವಶೀಕರಣ ಮಾಡಿಕೊಂಡು ಮದುವೆಯಾಗುವ ಪದ್ಧತಿಯೂ ಇದೆಯಂತೆ. ವೈವಾಹಿಕಜೀವನದಲ್ಲಿ ವಂಚನೆ, ಮೋಸ ಮಾಡಿದವರಿಗೆ ತೀವ್ರ ಶಿಕ್ಷೆಗೆ ಗುರಿಪಡಿಸಲಾಗುತ್ತದೆ. ಒಲ್ಲದ ಗಂಡನನ್ನು ತ್ಯಜಿಸಿ ಮೆಚ್ಚಿದವನೊಡನೆ ವಿವಾಹವಾಗಲು, ಸಹಜೀವನ ನಡೆಸಲು ಸಮಾಜದ ವಿರೋಧವಿಲ್ಲ, ಆದರೆ ಹೊಸ ನಲ್ಲನು ಯೋಗ್ಯ ವಧುದಕ್ಷಿಣೆಯನ್ನು ಮೊದಲ ಪತಿಗೆ ತೆರಬೇಕಾಗುತ್ತದೆ.

ತಿರುಗಿ ಬಹುದೂರ ನಡೆದೇ ಹೋಗಬೇಕಾಗಿದ್ದರಿಂದ, ಮನಸ್ಸಿಲ್ಲದ ಮನಸ್ಸಿನಿಂದ ಹೊರಟು ನಿಲ್ಲಬೇಕಾಯಿತು. ಬೀಳ್ಕೊಡಲು ಬಂದ ಪಟೇಲನ ಕೈಯಲ್ಲಿ ಹತ್ತು ರೂಪಾಯಿ ಗಳನ್ನು ಇಟ್ಟಾಗ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ''ನಿಮ್ಮ ಹೆಸರಿನಿಂದ ಹಳ್ಳಿಯವರಿಗೆ 'ಸಲ್ಫಿ' (ತಾಳೆಮದ್ಯ) ಕುಡಿಸುತ್ತೇನೆ, ಬಾಬೂಜಿ ನಮ್ಮ ಹಳ್ಳಿಗೆ ದಾಳಿಯಿಡುವ ಅಧಿಕಾರಿಗಳಿಗೂ ನಿಮಗೂ ಎಷ್ಟು ಅಂತರ! ಅವರೋ ದರ್ಪ ತೋರುತ್ತ ಕುರಿ, ಕೋಳಿ, ಗಾಂಜಾ, ಸೆರೆಗಳನ್ನು ಒಯ್ದರೆ ನೀವೋ ನಮ್ಮ ಸುಖದುಃಖ ವಿಚಾರಿಸಿ, ನಮ್ಮ ಬಡಜೀವನದಲ್ಲಿ ಎಷ್ಟು ಆಸಕ್ತಿ ತೋರಿದಿರಿ! ಸದಾಕಾಲ ಬಡತನ, ಸುಲಿಗೆ, ಕಾಡುಪ್ರಾಣಿಗಳ ಉಪಟಳ ಎದುರಿಸಬೇಕಾದ ನಮಗೆ ಎಂದಾದರೊಮ್ಮೆ ಹುಡುಕಿಕೊಂಡು ಬರುವ ನಿಮ್ಮಂತಹವರು ದೇವರಂತೆ ಭಾಸವಾಗುತ್ತಾರೆ'' ಎಂದಾಗ ಕಂಠ ಬಿಗಿದು ಕಣ್ಣು ತೇವವಾಗಿದ್ದವು.

# 12. ಸುರಾಪಾನ



ಅತ್ಯಂತ ಬಡವರಾದ ಆದಿವಾಸಿಗಳ ಜೀವನದಲ್ಲಿರುವ ಆಕರ್ಷಣೆಗಳೆಂದರೆ, ವೈವಾಹಿಕ ಸುಖ, ತಂಬಾಕು ಸೇವನೆ ಮತ್ತು ಸುರಾಪಾನ. ವೇಶ್ಯಾಗಮನ, ಅವರ ಸಮಾಜದಲ್ಲಿ ಇಲ್ಲದ್ದರಿಂದ ಸ್ತ್ರೀ ಸುಖಕ್ಕಾಗಿ ಸಿರಿಯನ್ನು ಸೂರೆ ಮಾಡಬೇಕಾಗಿಯೇ ಇಲ್ಲ. ತಂಬಾಕು ತಾವೇ ಬೆಳೆಯುವದರಿಂದ ಇಲ್ಲವೇ ತಾವು ಕಲೆ ಹಾಕಿದ ಅರಣ್ಯ ಸಂಪತ್ತಿನೊಂದಿಗೆ ಅದಲು ಬದಲು ಮಾಡಿಕೊಳ್ಳುವದರಿಂದ ತಂಬಾಕು ಸೇವನೆ ಬಿಡದ ಚಟ. ಹೊಟ್ಟೆ ತುಂಬ ಅನ್ನವಿಲ್ಲದಿದ್ದರೂ ಮದ್ಯಸೇವನೆ ತಪ್ಪಿಸುವಂತಿಲ್ಲ. ಅಂತೆಯೆ ಹೆಂಡದಂತೆ ಆಹಾರವೂ ಆಗಿರುವ 'ಲಾಂದಾ'ವನ್ನು ಅವರೇ ತಯಾರಿಸುತ್ತಾರೆ. ಇದಕ್ಕಾಗಿ ಅಕ್ಕಿ ಮತ್ತು ಮಡಿಯಾ ಧಾನ್ಯಗಳನ್ನು ಬಳಸುತ್ತಾರೆ. ಕಾಡಿನ ಅಂಚಿನಲ್ಲಿರುವ ಬಯಲು ಪ್ರದೇಶದಲ್ಲಿ ಈ ಎರಡೂ ಧಾನ್ಯಗಳನ್ನು ಜೊತೆಯಾಗಿಯೇ ಬೆಳೆಯುತ್ತಾರೆ. ಕರ್ನಾಟಕದ ಕರಾವಳಿಯ ಕೊಂಕಣಿಗರು (ಗಟ್ಟದ ಮೇಲೂ ಈ ಪದ್ಧತಿ ಇದೆ) ಹೆಸರುಕಾಳನ್ನು ನೆನೆಹಾಕಿ ಮರುದಿನ ಬುಟ್ಟಿಗೆ ಸ್ಥಳಾಂತರಿಸಿ ಮೊಳಕೆ ಬರಿಸುವಂತೆ, ಆದಿವಾಸಿಗಳೂ 'ಮಡಿಯಾ' ಧಾನ್ಯಕ್ಕೆ ಮೊಳಕೆ ಬರುವಂತೆ ಮಾಡುತ್ತಾರೆ. ಈ ಕಾಳುಗಳನ್ನು ಉರಿಬಿಸಿಲಲ್ಲಿ ಒಣಗಿಸಿ ಹಿಟ್ಟು ಮಾಡುತ್ತಾರೆ. ಇದನ್ನು ಅಕ್ಕಿ ಹಿಟ್ಟಿನೊಂದಿಗೆ ಸಮಪ್ರಮಾಣದಲ್ಲಿ ಬಿಸಿ ನೀರಿನಲ್ಲಿ ಕಲೆಸಿ, ದೊಡ್ಡ ಮಡಕೆಯಲ್ಲಿ ಹುದುಗು ಬರುವಂತೆ ಮಾಡುತ್ತಾರೆ. ಮೂರು-ನಾಲ್ಕು ದಿನಗಳಲ್ಲಿ ಹುಳಿಗಟ್ಟಿದ ಹೆಂಡ ಸಿದ್ಧವಾಗಿ ಸುವಾಸನೆ ಬೀರುತ್ತದೆ. ಬಸ್ತರ ಆದಿವಾಸಿ ಹಳ್ಳಿಗಳಲ್ಲೆಲ್ಲ ಈ ವಾಸನೆ ಹೊರಹೊಮ್ಮುತ್ತಲೇ ಇರುತ್ತದೆ.

ಹಾಲಕ್ಕಿ ಗೌಡರು ಹಸಿವಾದಾಗೊಮ್ಮೆ ಗಂಜಿ ಸೇವಿಸುವಂತೆ ಇವರು ಲಾಂದಾ ಕುಡಿಯುತ್ತಿರುತ್ತಾರೆ. ಒಮ್ಮೆ ಸಿದ್ಧಮಾಡಿದ ಸೆರೆಯನ್ನು 'ತುಂಬಾ' (ಪೊಳ್ಳು ಮಾಡಿದ ಸೋರೆಕಾಯಿ)ಗಳಲ್ಲಿ ತುಂಬಿ ಗುಡಿಸಲ ಮಾಡಿಗೆ ನೇತುಹಾಕಿರುತ್ತಾರೆ. ದೊಡ್ಡ ಮಡಕೆಗಳಲ್ಲಿ

ಮಾಡಿದಾಗ, ಗೃಹಿಣಿ ಸಾಲ್ ಎಲೆಗಳ ದೊನ್ನೆಗಳಲ್ಲಿ ಜರಕಾ (ಹಾಲುಗುಂಬಳ ಕಾಯಿ ಓಡಿನ ಸೌಟು)ದಿಂದ ಲಾಂದಾವನ್ನು ಎಲ್ಲರಿಗೂ ಹಂಚುತ್ತಾಳೆ. ಬೈಠಕಖಾನೆಯಲ್ಲಿ ಸದಾಕಾಲ ಉರಿಯುವ ಬೆಂಕಿಯ ಸುತ್ತಲೂ ಮುಂಗಾಲ ಮೇಲೆ ಕುಳಿತು – ಗಂಜಿಯಂಥ ದಪ್ಪ ಲಾಂದಾ ಸೇವನೆ. ಒಂದು ಸಾಮಾಜಿಕ ಅಥವಾ ಧಾರ್ಮಿಕ ಚಟುವಟಿಕೆ ಅನಿಸದಿರದು. ಯಾವ ತಾರತಮ್ಯವೂ ಇಲ್ಲದೆ ಮಕ್ಕಳೂ ಇದರಲ್ಲಿ ಸಮಾನವಾಗಿ ಪಾಲುಗೊಳ್ಳುವರು. ಬೇಕು ಅನಿಸಿದವರು, ಇನ್ನಷ್ಟು ಹಾಕಿಸಿಕೊಳ್ಳಲು ಯಾವ ನಿರ್ಬಂಧವೂ ಇರುವುದಿಲ್ಲ. ಲಾಂದಾದಲ್ಲಿ ಆಹಾರವೂ ಸೇರ್ಪಡೆಯಾಗಿರುವದರಿಂದ ಅಮಲು ಅಷ್ಟೊಂದು ಕಾಣಿಸಿಕೊಳ್ಳುವದಿಲ್ಲ. ಆದರೆ ಅಧಿಕ ಪ್ರಮಾಣದಲ್ಲಿ ಸೇವಿಸಿದರೆ, ನಶೆ ಅಷ್ಟು ಸುಲಭವಾಗಿ ಹೋಗುವದಿಲ್ಲ ಕೂಡ. ಅದನ್ನು ಸದಾಕಾಲ ಸೇವಿಸುತ್ತಿರುವದರಿಂದ ಹಿತಮಿತ ಪ್ರಮಾಣದಲ್ಲಿಯೇ ಬಳಸುತ್ತಾರೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಆದರೆ ಅಪರೂಪದ ನೆಂಟರು ಬಂದಾಗ, ಹಿಗ್ಗಿನ ಸಂದರ್ಭ ಇದ್ದಾಗ ಈ ಮೇರೆ ಮೀರುವವರೂ ಇಲ್ಲದಿಲ್ಲ.

ಈ ಜಿಲ್ಲೆಯ ಕಾಡುಗಳಲ್ಲಿ ಮಹುವಾ ವೃಕ್ಷಗಳು ವಿಪುಲವಾಗಿ ಬೆಳೆಯುತ್ತವೆ. ವಸಂತ ಋತುವಿನಲ್ಲಿ ಅವು ಹೂ ಬಿಟ್ಟು ನಿಂತಾಗ, ಅಸಂಖ್ಯಾತ ಜೇನ್ನೊಣಗಳಂತೆ ಆದಿವಾಸಿಗಳು ಧಾವಿಸಿ ಬರುತ್ತಾರೆ. ಹೂವು ಸುಗಂಧಭರಿತವಾಗಿರುವಂತೆ ಮಧು ತುಂಬಿಸಿರುವದರಿಂದ ಸಿಹಿಯಾಗಿಯೂ ಇರುತ್ತದೆ. ಬೆಳಕು ಹರಿಯುವ ಮೊದಲೇ ಕಾಡಿಗೆ ಧಾವಿಸಿ ಮಹುವಾ ಹೂಗಳ ರಾಶಿಯನ್ನು ಕಲೆಹಾಕಿ, ಬುಟ್ಟಿಗಳಲ್ಲಿ ತುಂಬಿ ತರುವದು ನಿತ್ಯದ ಕಾರ್ಯಕ್ರಮಗಳಲ್ಲಿ ಸೇರ್ಪಡೆಯಾಗುತ್ತದೆ. ಅವನ್ನೂ ಹುಳಿಗಟ್ಟುವಂತೆ ನೆನೆಹಾಕಿ 'ಸುರಂಯ್' ಎಂಬ ಮದ್ಯವನ್ನು ಸಿದ್ಧಮಾಡುತ್ತಾರೆ. ಇದು ತೀವ್ರ ಅಮಲು ತರುತ್ತದೆಯಾದ್ದರಿಂದ ವಿಶೇಷ ಸಮಾರಂಭಗಳಲ್ಲಿ ಮಾತ್ರ ಮಿತ ಪ್ರಮಾಣದಲ್ಲಿ ಹಂಚಲಾಗುತ್ತದೆ. ಇದಲ್ಲದೆ ಪರಿಶುದ್ಧವಾದ ಮಹುವಾ ಮದ್ಯವನ್ನು ತಯಾರಿಸುವ ಕಲೆಯನ್ನು ಕರಗತಮಾಡಿಕೊಂಡಿದ್ದಾರೆ. ಈ ಮದ್ಯಕ್ಕಾಗಿ ಬಾಯ್‌ಬಾಯ್ ಬಿಡುವ ಪಟ್ಟಣದವರು ಆದಿವಾಸಿಗಳನ್ನು ಸದಾ ಕಾಡುತ್ತಿರುತ್ತಾರೆ. ಆದರೆ ಇದರ ಸತತವಾದ ಸೇವನೆಯಿಂದ ಬಲು ಬೇಗ ಜನ ಕುಡುಕರ ವರ್ಗಕ್ಕೆ ಸೇರುವಂತಾಗುತ್ತದೆ.

ಹಿತ್ತಿಲಲ್ಲಿ ತಾಳೆಮರ ಇದ್ದವರು, ತಾವು ಪುಣ್ಯವಂತರೆಂದು ಭಾವಿಸುತ್ತಾರೆ. ಪ್ರತಿದಿನವೂ ಅದರಿಂದ ನೀರಾ ಇಳಿಸಿ, ನಂತರ ಹುಳಿಗಟ್ಟಿಸಿ, 'ಸಲ್ಫಿ' ಸೆರೆ ತಯಾರಿಸುತ್ತಾರೆ. ವೃಕ್ಷ ಕಿರಿದಾಗಿದ್ದರೆ ಕೋತಿಯಂತೆ ಹತ್ತುತ್ತಾರೆ. ಎತ್ತರವಾಗಿದ್ದರೆ ಏಣಿಯ ಸಹಾಯ ಪಡೆಯುತ್ತಾರೆ. ಮಡಕೆಯಲ್ಲಿ ಸಂಗ್ರಹವಾದ ನೀರಾ, ಕಳವಾಗುವ ಸಾಧ್ಯತೆ ಇದ್ದುದರಿಂದ, ಮಾಲಿಕನು ಮರದಡಿಯಲ್ಲಿ ಮಂಚಲ ನಿಲ್ಲಿಸಿ ರಾತ್ರಿ ಕಾವಲಾಗಿ ಮಲಗುವದು ಸಾಮಾನ್ಯ ದೃಶ್ಯ. ಹೊರಗೆಲಸ, ಸಂತೆಗಳಿಗೆ ಹೋದಾಗ ಕಳುವಾಗದಂತೆ ಗಟ್ಟಿಮುಟ್ಟಾದ ಬಿದಿರಿನ ಚಾಪೆ, ಮುಳ್ಳು ಬೇಲಿಗಳನ್ನು ಬಿಗಿದಿರುವದುಂಟು. ಇದರಂತೆ ಕಾಡು ಖರ್ಜೂರ ಮರಗಳಿಂದಲೂ ನೀರಾ ಶೇಖರಿಸಿ ಮದ್ಯವನ್ನು ತಯಾರಿಸುತ್ತಾರೆ. ಬಗೆಬಗೆಯ ಮದ್ಯಗಳನ್ನು ತಯಾರು ಮಾಡುವದರಲ್ಲಿ ಅವರು ಇಷ್ಟೊಂದು ಸಿದ್ಧಹಸ್ತರು ಹೇಗಾದರು ? ಎಂದು ಪ್ರಶ್ನಿಸಿದಾಗ ಅವರು ನೀಡುವ ವಿವರಣೆ ಕುತೂಹಲಕಾರಿಯಾಗಿದೆ. ಅವರ ಪೂರ್ವಜರ ತಂಡವೊಂದು ಕಾಡಿನಲ್ಲಿ ಬೇಟೆಗೆ ಹೋದಾಗ, ಅಸಾಮಾನ್ಯವಾದ ಸನ್ನಿವೇಶವೊಂದನ್ನು ನೋಡಿ ಬೆಚ್ಚಿ ಬಿದ್ದರಂತೆ. ಬೃಹದಾಕಾರದ ಮಹುವಾ ವೃಕ್ಷವೊಂದರ ಅಡಿಯಲ್ಲಿ ತಿಳಿದ್ರವ್ಯದಿಂದ ತುಂಬಿದ ಗಮಗಮಿಸುವ ಸುವಾಸನೆಯುಳ್ಳ ಒಂದು ಮಡುವು ನಿಂತಿತ್ತು. ಬಗೆಬಗೆಯ ಪಶು-ಪಕ್ಷಿಗಳು ಅದನ್ನು ಸೇವಿಸಿ ತಮ್ಮ ತಮ್ಮಲ್ಲಿಯ ವೈರಭಾವವನ್ನು ಮರೆತು ಕೇಕೆ ಹಾಕಿ ಕುಣಿಯುತ್ತಿದ್ದವಂತೆ !

ಬೇಟೆಗಾರರು ಕುತೂಹಲದಿಂದ ಇದು ಯಾವ ಜಲವೆಂದು ಪರೀಕ್ಷಿಸಲು ಕುಡಿದರು. ಅತಿ ಉಲ್ಲಾಸದಿಂದ ಹಾಡಲಾರಂಭಿಸಿ ಕುಣಿಯುತ್ತ ಜೊತೆಯಲ್ಲಿ ಹೆಂಗಳೆಯರಿಲ್ಲವಲ್ಲ! ಎಂದು ಪರಿತಪಿಸಿದರಂತೆ. ಕಾದು, ಪರೀಕ್ಷಿಸಿ ವೃಕ್ಷದ ರಸ ಮಹುವಾ ಮದ್ಯವೆಂದು ತಿಳಿದುಕೊಂಡು ಅದನ್ನು ಮಾಡುವ ವಿಧಾನ ಕಲಿಸೆಂದು ಭೀಮುಲ ದೇವರಿಗೆ ಪೀಡಿಸಿ, ಪ್ರಾರ್ಥಿಸಿ ಕೇಳಿಕೊಂಡಾಗ ಅವನು ಸೆರೆಮಾಡುವ ವಿಧಾನಗಳನ್ನೆಲ್ಲ ಹೇಳಿಕೊಟ್ಟು, ''ಸುಖವಾಗಿ ಬಾಳಿ'' ಎಂದು ಹರಸಿ ಕಳಿಸಿಕೊಟ್ಟನಂತೆ. ಹೆಣ್ಣಿನೊಂದಿಗೇ ಹೆಂಡ ಸೇವಿಸು, ಎಂದು ದೇವರೇ ಆಶೀರ್ವದಿಸಿದಾಗ ನಾವು ಅವುಗಳಿಂದ ವಂಚಿತರಾಗುವದು ಸರಿಯೇ? ಎಂದು ಪ್ರಶ್ನಿಸಿ ಮಾಝಿ ಕಣ್ಣು ಮಿಟುಕಿಸಿದ.

ಬಂಗಾಲಿಗಳಲ್ಲಿ ಸಕಲ ಸಮಾರಂಭಗಳಲ್ಲಿ ಮತ್ಸ್ಯ ಭೋಜನಕ್ಕೆ ಅಗ್ರಸ್ಥಾನವಿರುವಂತೆ, ಆದಿವಾಸಿಗಳು ಸುರಾಪಾನ ಮಾಡುವ, ಮಾಡಬಹುದಾದ ಒಂದೂ ಸನ್ನಿವೇಶವನ್ನು ಹುಸಿ ಹೋಗಗೊಡುವದಿಲ್ಲ. ಮಗು ಹುಟ್ಟಿದಾಗ, ತುಂಬಾದಲ್ಲಿ ಸೆರೆ, ಕೈಗಳಲ್ಲಿ ದೊನ್ನೆ ಹಿಡಿದು ಆಪ್ತೇಷ್ಟರಲ್ಲಿ ಹೋಗಿ ಸುದ್ದಿ ಅರುಹಿ, ಸುರಾಪಾನ ಮಾಡಿಸಿ, ಸಂತೋಷ ಹೆಚ್ಚಿಸ ಬೇಕಾಗುವದು. ಅದರಂತೆ ನಾಮಕರಣಕ್ಕೆ ಅವರನ್ನೆಲ್ಲ ಬರಮಾಡಿಕೊಂಡು, ''ಬೈಠಕ್'' ಏರ್ಪಡಿಸಿ ಮದ್ಯಪಾನದ ವ್ಯವಸ್ಥೆ ಮಾಡಬೇಕಾಗುವದು. ಅಂಥ ಸಂದರ್ಭಗಳಲ್ಲಿ ಮಾಂಸಾಹಾರಕ್ಕೆ ವಿಶೇಷ ಪ್ರಾಧಾನ್ಯ ಕೊಡಲಾಗುತ್ತದೆ. ಹಿರಿಯರು ಮೃತಪಟ್ಟಾಗ, ಹೆಣವನ್ನು ಮಣ್ಣು ಮಾಡುವವರಿಗೆ ಸುರಾಪಾನದ ಸರಬರಾಜು ಮಾಡಿಸಬೇಕಾಗುತ್ತದೆ. ಸತ್ತವರ ನೆನಪಿಗೆ ಧಾರ್ಮಿಕ ಮುಖಂಡನಿಂದ ಭಿತ್ತಿಚಿತ್ರಗಳನ್ನು ಬಿಡಿಸಲಾಗುತ್ತದೆ. ಅದಕ್ಕಾಗಿ ಅವನು ಉಪವಾಸ ವಿರಬೇಕೆಂದು ಕಡ್ಡಾಯವಿದ್ದರೂ ಹಸಿದಾಗೊಮ್ಮೆ 'ಲಾಂದಾ' ಪೂರೈಸುತ್ತಾರೆ. ಇನ್ನಿಲ್ಲದವನ ಗೌರವಾರ್ಥವಾಗಿ ಕೊರಡು ಮೃತ್ಯುಸ್ತಂಭ ಇರಬೇಕೆಂದು ಪರಿಪಾಠ, ಹಲವು ಆದಿವಾಸಿಗಳಲ್ಲಿ ಬೆಳೆದುಬಂದಿದೆ. ಆಗಲೂ ಸೆರೆಯ ಸೇವನೆ ಆಗಲೇಬೇಕು. ಯಾರ ಮನೆಯಲ್ಲೂ ಇಷ್ಟೊಂದು ಮದ್ಯ ಒಮ್ಮೆಲೇ ಲಭ್ಯವಿರದ ಕಾರಣ ಅವರು ಆಕ್ಕಪಕ್ಕದವರಿಂದ ಕೈಗಡವಾಗಿ ಪಡೆದು ಅನಂತರ ಹಿಂದಿರುಗಿಸುತ್ತಾರೆ. ಇದರಿಂದಾಗಿ ಸಕಲರಿಗೂ ಒಂದೇ ಬಗೆಯ ಪಾನೀಯ ಪೂರೈಸಲಾಗದೇ ಒಟ್ಟುಗೂಡಿಸಿದ ಲಾಂದಾ, ಸಲ್ಫಿ, ಸೇಂದಿಗಳನ್ನು ಹಂಚಿಕೊಳ್ಳಬೇಕಾಗುತ್ತದೆ.

ಘೋಟುಲದ ಸದಸ್ಯರು ಪ್ರತಿರಾತ್ರಿ ಲಾಂದಾ ಸೇವಿಸಿದರೂ, ವಿಶೇಷ ಸಮಾರಂಭಗಳಲ್ಲಿ ಇನ್ನಿತರ ಸುರೆಯ ಪ್ರಕಾರಗಳನ್ನು ಕುಡಿಯುತ್ತಾರೆ. ಯಾವನಾದರೂ ಅಪರಾಧ ಮಾಡಿದರೆ, ಅವನು ಸಕಲರಿಗೂ ಸುರಾಪಾನ ಮಾಡಿಸಿ ಕ್ಷಮೆ ಕೇಳಬೇಕು. ನೃತ್ಯಕೂಟಗಳಲ್ಲಿ ಪಾಲುಗೊಳ್ಳು ವವರು ಆಗಾಗ ಅಲ್ಪಸ್ವಲ್ಪ ಮದ್ಯ ಸೇವನೆ ಮಾಡುವದು ಸರ್ವಸಾಮಾನ್ಯ. ವಿವಾಹದ ಸಮಯದಲ್ಲಿ ನೃತ್ಯದ ತಂಡದವರನ್ನು ಆಮಂತ್ರಿಸಿ, ಅವರಿಗೆ ಅಡಿಗೆ ಮಾಡಿಕೊಳ್ಳಲು ಕಾಳು ಕಡಿಗಳೊಂದಿಗೆ ಸೆರೆಯನ್ನೂ ಪೂರೈಸಲಾಗುತ್ತದೆ. ಸುರಾಪಾನದಲ್ಲಿ ಸ್ತ್ರೀ ಪುರುಷರೆಂಬ ಭೇದ-ಭಾವ ಕಲ್ಪಿಸದಿದ್ದರೂ ಹೆಂಗಳೆಯರಿಗೆ ಹುಳಿ ನೊರೆಹೆಂಡ ಮಾತ್ರ ಮೀಸಲಂತೆ. ಹೊಸ ತಾಳೆಮದ್ಯ ಅವರಿಗೆ ವರ್ಜ್ಯ. ಹೆಂಗಸರಿಗೆ ಬಲುಬೇಗ ಅಮಲೇರುವದೇ ಈ ನಿರ್ಬಂಧಕ್ಕೆ ಕಾರಣವಿರಬಹುದು. ಮೊಡನಾರ ಹಳ್ಳಿಯ ಪಟೇಲನನ್ನು ಕಾಣಲು ಹೋಗಿದ್ದೆವು. ಅವನು ಯಾವುದೋ ಪಂಚಾಯಿತಿಗೆ ಹೋಗಿದ್ದಾನೆಂದು ತಿಳಿಯಿತು. ಮನೆಯಲ್ಲಿದ್ದ ಹೆಂಗಳೆಯರೆಲ್ಲ ಕುಡಿದು ಮತ್ತರಾಗಿದ್ದರು. ಪಟೇಲನು ಹಿಂದಿರುಗಿದ ನಂತರ ಬರುತ್ತೇವೆಂದು ಹೊರಟು ನಿಂತಾಗ, ಪಟೇಲನ ಹೆಂಡತಿ, ಬಂದು ತೋಳು ಹಿಡಿದು, ಕುಣಿಯಲು ಆಗ್ರಹಿಸಿದಾಗ ಎದೆ ಬಡಿದುಕೊಳ್ಳಲಾರಂಭಿಸಿತು. ಆದಿವಾಸಿಗಳ ಕ್ಷೇತ್ರದಲ್ಲಿ ಅವರ ಹೆಂಡ, ಹೆಣ್ಣುಗಳಿಂದ ಸಾಕಷ್ಟು

ದೂರವಿರುವದೇ ಕ್ಷೇಮಕರವೆಂದು ಅನುಭವಗಳು ಕಿವಿಮಾತು ಹೇಳಿದ್ದವು. ಅಂತೆಯೇ 'ಮಾಂದ್ರಿ' (ಮೃದಂಗ) ನುಡಿಸುವವನನ್ನು ಕರೆತರುತ್ತೇವೆಂದು ನೆವ ಹೂಡಿ ಅಲ್ಲಿಂದ ಜಾರಿಕೊಳ್ಳಬೇಕಾಯಿತು.

ಮಧ್ಯ ಪ್ರದೇಶ ಸರಕಾರಕ್ಕೆ ಧನಲೋಭ ಹೆಚ್ಚಾಗಿ ಸೇಂದಿಯ ಗುತ್ತಿಗೆದಾರರಿಂದ ವಿಪರೀತ ಹಣ ಪಡೆದು ಮದ್ಯ ಮಾರುವ ಅಧಿಕಾರವನ್ನು ಅವರಿಗೆ ಕೊಟ್ಟುಬಿಟ್ಟಿದೆ. ಹಣವಿಲ್ಲದೆಯೇ ಹೆಂಡ ತಯಾರಿಸಿ ಕುಡಿಯುವವರಿಗೆ ಹೆಚ್ಚಿನ ಬೆಲೆ ತೆತ್ತು ಕುಡಿಯುವ ತಾಕತ್ತು ಎಲ್ಲಿಂದ ಬರಬೇಕು ? ಅಂತೆಯೇ ಕಳ್ಳತನದಿಂದ ಸೆರೆ ಇಳಿಸಲಾರಂಭಿಸಿದರು. ಇದರಿಂದ ರೊಚ್ಚಿಗೆದ್ದ ಗುತ್ತಿಗೆದಾರರು, ಪೊಲೀಸಿನವರನ್ನು ಆದಿವಾಸಿಗಳ ಮೇಲೆ ಛೂಬಿಟ್ಟರು. ಪಾಪ! ಸಮವಸ್ತ್ರಧಾರಿಗಳನ್ನು ಕಂಡರೆ ಕಾಡಿಗೆ ಓಡುವವರು ಅವರು. ಅವರನ್ನು ಠಾಣೆಗೆ ಎಳೆದು ಕೊಂಡು ಹೋದರೆ ಅವರ ಮನಃಸ್ಥಿತಿ ಹೇಗಿರಬೇಕೆಂದು ಊಹಿಸುವುದೇ ಕಷ್ಟ. ಇದ್ದುಬಿದ್ದ ಪಾತ್ರೆ, ಪಡಗ ಕಳೆದುಕೊಂಡವರು ಕೆಲವರು. ಕ್ಷಮಾಯಾಚನೆ ಕೋರಿದವರು ಹಲವರು. ಹೀನಾಮಾನ ಬೈಗಳು, ಹೊಡೆತ, ಬಾಸುಂಡೆಗಳ ಹಿಂಸೆ ತಾಳದೇ ಒಂದಿಬ್ಬರು, ಆತ್ಮಹತ್ಯೆ ಕೂಡ ಮಾಡಿಕೊಂಡರು. ಸೇಂದಿ ಅಂಗಡಿಗಳ ಸುಂಡಿ ಮಾಲಿಕರು ಸಾಲದ ಮೇಲೆ ಸುರೆ ಮಾರಲಾರಂಭಿಸಿದಾಗ, ಕೊಳ್ಳುವ ತಾಕತ್ತಿಲ್ಲದ ಆದಿವಾಸಿಗಳು ಕಂಠಪೂರ್ತಿ ಕುಡಿಯುತ್ತ ಕುಡುಕರಾದರು. ಸಾಲ ಮತ್ತು ಬಡ್ಡಿ ತೀರಿಸಲು, ಬೆಳೆದ ಅಲ್ಪಸ್ವಲ್ಪ ಕಾಳುಕಡಿ, ಕಾಡಿನಿಂದ ಕಲೆ ಹಾಕಿದ್ದ ಎಣ್ಣೆಕಾಳು, ಬೀಡಿ ಎಲೆಗಳು, ಜೇನುತುಪ್ಪಗಳೆಲ್ಲ ಗುತ್ತಿಗೆದಾರರ ಪಾಲಾಗಲಾರಂಭಿಸಿದವು. ಆದಿವಾಸಿಗಳ ಉದ್ಧಾರಕ್ಕೆ ಕಂಕಣಬದ್ಧವಾಗಿದ್ದ ಸರಕಾರ, ಇಂಥ ಸುಲಿಗೆಯಲ್ಲಿ ಸಕ್ರಿಯ ಪಾಲ್ಗೊಳ್ಳಲು ಒಪ್ಪಿದ್ದು ಅತ್ಯಂತ ಶೋಚನೀಯ. ಈ ಮೇಲುಪಂಕ್ತಿಯನ್ನು ಇನ್ನಿತರ ವ್ಯಾಪಾರಿಗಳು ತಮ್ಮದನ್ನಾಗಿ ಮಾಡಿಕೊಳ್ಳಲು ಹಿಂಜರಿಯಲಿಲ್ಲ.

# 13. ಆದಿವಾಸಿಗಳ ಅರಸ



ಭಾರತ, ರಾಜ-ಮಹಾರಾಜರ ನಾಡೆಂದು ವಿದೇಶಿ ಪ್ರವಾಸಿಗರನ್ನು ಆಕರ್ಷಿಸಿದರೂ ಇಸ್ಪೀಟ ರಾಜರನ್ನಷ್ಟೇ ಅವರು ನೋಡಿ ಹಿಂತಿರುಗಬೇಕಾದ ಪರಿಸ್ಥಿತಿ ನಿಜಕ್ಕೂ ಶೋಚನೀಯ. ಅವರ ಕೋಟೆ-ಕೊತ್ತಳಗಳನ್ನು, ಅರಮನೆ, ರಾಜವಾಡೆಗಳನ್ನು ತಮ್ಮ ದರಬಾರೆಂಬಂತೆ ಪ್ರವಾಸಿ ಉದ್ದಿಮೆಯವರು ಬಳಸುತ್ತಿದ್ದದ್ದು ಇನ್ನೂ ವಿಷಾದನೀಯ. ಮೈಸೂರು, ಹೈದರಾಬಾದ್, ಬಡೋದೆಗಳಂತೆ, ಚಿಕ್ಕ ಪ್ರಮಾಣದಲ್ಲಿ ಆದರೂ ಬಸ್ತರ ಸಂಸ್ಥಾನ (ಮಧ್ಯಪ್ರದೇಶ) ಒಮ್ಮೆ ಆಳರಸರ ಕಾಲಕ್ಕೆ ಶಾಂತಿ-ಸೌಂದರ್ಯಗಳ ಬೀಡಾಗಿತ್ತು. ರಾಜಧಾನಿ ಜಗದಲಪುರ, ವಿವಿಧ ಚಟುವಟಿಕೆಗಳ ಕೇಂದ್ರವಾಗಿತ್ತು. ಆದರೆ ಇಂದು... ಸ್ಮಶಾನ ಶಾಂತಿ ತಾಂಡವವಾಡುವ ಹಾಳುಬಿದ್ದ ಕೊಂಪೆಯಾಗಿದೆ. ಇದರ ಕಾರಣಗಳನ್ನು ಅರಿಯಲು ಒಮ್ಮೆ ಅಲ್ಲಿ ಹೋಗಬೇಕು.

ಚಳಿಗಾಲದ ಮುಂಜಾವಿನ ಮಂಜು ಎಲ್ಲೆಡೆ ಹಬ್ಬಿದೆ. ಊರ ಹೃದಯ ಸ್ಥಾನದಲ್ಲಿ ನಿಂತ ಅರಮನೆಯ ಗೋಪುರ, ದೇವಸ್ಥಾನದ ಕಳಸಗಳು ಮುಸುಕು ಹೊತ್ತು ತಲೆ ತಗ್ಗಿಸಿದ ಕೋಮಲಾಂಗಿಯರಂತೆ ಭಾಸವಾದವು. ಮಂಜಿನಂತೆಯೇ ದೂರದ ಅರಮನೆ ಆಕರ್ಷಕವಾಗಿ ಕಂಡು ಹತ್ತಿರ ಹೋದಾಗ ಕರಗಿ ಹೋಗಿದ್ದಿತು. ಮಹಾದ್ವಾರ, ಕಮಾನುಗಳು, ಹೂದೋಟಗಳೆಲ್ಲ ಬಡಕಲಾಗಿ ನಿರ್ಜೀವವಾಗಿ ನಿಂತಿದ್ದವು. ರಾಜ-ರಾಣಿಯರಿಗೆ ವಿಲಾಸದ ತಾಣವಾಗಿದ್ದ ಭವ್ಯ ಉದ್ಯಾನ ಊರವರಿಗೆ ಕಕ್ಕಸಿನ ಸ್ಥಳವಾಗಿದ್ದು ನೋಡಿ ಕರುಳು ಕಿವುಚಿದಂತಾಯಿತು. ಅರಸರ ವಿಹಾರ, ಅತಿಥಿಗಳ ಬಿಡಾರಕ್ಕೆ ಮೀಸಲಾಗಿದ್ದ ಅಶ್ವರಥ ಮುರಿದು ಒಂದೆಡೆ ಬಿಕೋ ಎಂದು ನಿಂತಿತ್ತು, ಅದರ ಕುದುರೆಗಳು ಹೊಟ್ಟೆಗಿಲ್ಲದೇ ಅದೆಲ್ಲೋ ಪ್ರವಾಸಿಗರ ಟಾಂಗಾ ಎಳೆಯುತ್ತಿರಬೇಕು. ಪ್ರಭುವನ್ನು ದೂರದೂರಿಗೆ ಹೊತ್ತು ಓಡುವ ಶ್ವೇತವರ್ಣದ ರೋಲ್ಸ್‌ರಾಯ್ಸ ಕಾರು ಪೊರ್ಟಿಕೋದಲ್ಲಿ ಜಂಗು ತಿನ್ನುತ್ತ ನಿಂತಿದೆ. ಅದರ ಎಂಜಿನ್ನು ಕದ್ದೊಯ್ದು ವರ್ಷಗಳೇ ಕಳೆದಿರಬೇಕು. ಅವಸರದ ಕೆಲಸಕ್ಕೆ ಮೀಸಲಾಗಿದ್ದ ಜೀಪ್ ನರನಾಡಿ ಕಳೆದುಕೊಂಡು, ಬಸ್ತರ್-28 ಎಂಬ ಫಲಕವೊಂದನ್ನು ಗತಸ್ಮೃತಿಯ ಕುರುಹಾಗಿ ಹೊತ್ತು ನಿಂತಿದೆ. ಅರಮನೆಯ ಧೀಮಂತರು ಓದಿ ಅರಗಿಸಿಕೊಳ್ಳಬೇಕಾಗಿದ್ದ ಗ್ರಂಥಗಳು ಹಸಿದ ವರಲೆ (ಗೆದ್ದಲು)ಗೆ ಆಹಾರವಾಗಿದ್ದವು. ಮುಚ್ಚಿದ ಗಾಜಿನ ಬಾಗಿಲೊಳಗಿಂತ ಆದಿವಾಸಿ ಹೆಂಗಳೆಯರ ತಂಡವೊಂದು ಕುತೂಹಲದಿಂದ ಗಾಜಿನ ಒಳಗಿನ ನೋಟ ವೀಕ್ಷಿಸುತ್ತಿತ್ತು. ಒಳಗಾದರೋ ಗೊಂಡ ಯುವತಿಯೊಬ್ಬಳು ಹಲವಾರು ಮಾಸಗಳಿಂದ ಸಂಚಯವಾದ ಕಸ ಬಳಿಯುವದರಲ್ಲಿ ತೊಡಗಿದ್ದಳು !

ಬಾಗಿಲೀಚೆಯ ಹಿರಿಯಳೊಬ್ಬಳು ಮೆಲುದನಿಯಲ್ಲಿ, ''ಪ್ರವೀರ ಪ್ರಭುಗಳು ಬದುಕಿದ್ದಾಗ ಅರಮನೆಯು ಬಂಗಾರದಂತೆ ಹೊಳೆಯುತ್ತಿತ್ತು. ಅವರೇ ಹೋದ ನಂತರ ಕೇಳುವವರ್‍ಯಾರು ? ನೋಡುವ ನಮಗೇ ಇಷ್ಟು ನೋವಾಗುವಾಗ ಅವರ ಆತ್ಮ ಅದೆಷ್ಟು ಚಡಪಡಿಸುತ್ತದೋ...'' ಎಂದು 'ಅರಸರು ಕೇಳಿಸಿಕೊಳ್ಳದಿರಲಿ' ಎಂದು ಪಿಸುಮಾತಿನಲ್ಲಿ ಉಸುರಿದಳು. ''ಪ್ರಭುಗಳ ಅಕಾಲಿಕ ಮೃತ್ಯುವಿಗೆ ಕಾರಣ ನಿಮಗೆ ಗೊತ್ತೇ ?'' ಎಂದು ನಡುವಯಸ್ಕಳನ್ನು ವಿಚಾರಿಸಿದಾಗ ''ಅದೆಲ್ಲ ನನಗೆ ತಿಳಿಯದು. ಊರ ಮಾಂಝಿ (ಹಳ್ಳಿಯ ಹಿರಿಯ)ಗೆ ಗೊತ್ತು ಎಂದು ಹಿರಿಯಳು ಜಾರಿಕೊಳ್ಳಲು ಯತ್ನಿಸಿದಳು. ''ಅರಸು-ಅರಸಿಯ ದರ್ಶನ ಮಾಡಿಸುವ ದಿಲ್ಲೇನಮ್ಮಾ ?'' ಎಂದು ಮಗಳು ನಡುವೆಯೇ ಕೇಳಿದ ಪ್ರಶ್ನೆಗೆ, ''ಪ್ರಭುಗಳು ಸೂರ್ಯವಂಶಕ್ಕೆ ಸೇರಿದವರಂತೆ. ಹೆಂಡತಿಯೂ ಆ ದೇವರ ವಂಶದವಳು. ಆದರೆ ಈಗಿನ ಯುವರಾಜನ ತಾಯಿ ಶೂದ್ರ ಮನೆತನದವಳಾದ್ದರಿಂದ ಅರಸು ಮನೆತನಕ್ಕೆ ಅಳಿಗಾಲ ಬಂತೆಂದು ಜನ ಆಡಿಕೊಳ್ಳುತ್ತಾರೆ'' ಎಂದು ಹಿರಿಯಳು ವಿವರಣೆ ಕೊಡುತ್ತಿದ್ದಂತೆ ಮುಚ್ಚಿದ ಬಾಗಿಲು ತೆರೆದುಕೊಂಡದ್ದರಿಂದ ಹಳ್ಳಿಯ ಹೆಂಗಸರ ತಂಡ ಬೆಚ್ಚಿಬಿದ್ದು ಹಿಂದೆ ಸರಿಯಿತು. ಮೆಟ್ಟಿಲುಗಳನ್ನು ಗುಡಿಸಲು ಬಂದ ಗೊಂಡತಿಗೆ, ಹಿರಿಯಳು, ''ಇವರಿಗೆಲ್ಲ ಒಳಗೆ ತೋರಿಸಿಕೊಂಡು ಬರಲೇನಮ್ಮಾ ?'' ಎಂದು ಕೇಳಿದಾಗ, ಆಕೆ ತಾನೇ ಅರಸಿ ಎಂಬ ಭಾವ ತಳೆದು, ''ಸಂಜೆಗೆ ಬನ್ನಿ, ಈಗ ಸಾಧ್ಯವಿಲ್ಲ'' ಎಂದು ಅಸಡ್ಡೆಯಿಂದ ಹೋಗಿಯೇಬಿಟ್ಟಳು. ''ಇವರ ಸೊಕ್ಕು ಇನ್ನೂ ಇಳಿದಿಲ್ಲ, ಪ್ರಭುಗಳಾದರೋ ನಮ್ಮನ್ನೆಲ್ಲಾ ಬರಮಾಡಿಕೊಂಡು ತಾವೇ ತೋರಿಸಿ ಊಟ ಹಾಕಿ ಕಳಿಸುತ್ತಿದ್ದರು...'' ಎಂದು ತನ್ನ ಕಾಲ್ಪನಿಕ ಅರಸರ ಗುಣಗಾನ ಮಾಡುತ್ತ ತಂಡದವರೊಡನೆ ಕಾಲುಕಿತ್ತಳು.

ಅರಮನೆಯ ಒಳಭಾಗದ ದರ್ಶನ ಸಾಯಂಕಾಲದ ತನಕ ಸಾಧ್ಯವಾಗದ್ದರಿಂದ ನಾಳಾಕ್ಕೆ

ಒಳ್ಳೆಯ ಹೋಟೆಲನ್ನು ಹುಡುಕುತ್ತ ಹೊರಟಾಗ ಎಲ್ಲ ಬೀದಿಗಳಲ್ಲೂ ಪೊಲೀಸರೇ ಅಧಿಕ ಸಂಖ್ಯೆಯಲ್ಲಿರುವದು ಗಮನಕ್ಕೆ ಬಂದಿತು. ಬೀರಬಲ್ ಹೋಟೆಲ್ ಮಾಲೀಕನೇ ಪೂರಿ-ಭೋಲೆ (ಕಡಲೆಪಲ್ಯ) ಪೂರೈಸಿದ. ಅರಮನೆಯ ಅಧೋಗತಿಯ ಬಗ್ಗೆ ಆತನನ್ನು ವಿಚಾರಿಸಿದಾಗ ಅರಸರ ಮೇಲಿನ ಅಭಿಮಾನದಿಂದಲೋ, ಆಗಂತುಕರ ಕುತೂಹಲದಿಂದ ಪ್ರಭಾವಿತನಾಗಿಯೋ ಕೆಲಸವನ್ನು ಆಳಿಗೊಪ್ಪಿಸಿ ತಾನೇ ಈ ಅತಿಥಿಗಳಿಗೆ ವೈಯಕ್ತಿಕ ಲಕ್ಷ್ಯ ಪೂರೈಸಿ ವಿವರಿಸಲಾರಂಭಿಸಿದ. ''ನಾನು ಉತ್ತರ ಪ್ರದೇಶದವನು, ಬಾಬೂಜಿ, ಎರಡು ದಶಕಗಳ ಹಿಂದೆ, ಭವಿಷ್ಯ ಹುಡುಕುತ್ತ ಜಗದಲಪುರ ತಲುಪಿದಾಗ ರಾಜಾ ಪ್ರವೀರ ಚಂದ್ರ ಭಾಂಜದೇವರು ಅರಸರಾಗಿದ್ದರು. ಅವರ ತಾರುಣ್ಯ-ಸೌಂದರ್ಯ, ಸ್ನೇಹಪರತೆ, ಸರಳತೆ ಗಳಿಂದ ಪ್ರಭಾವಿತರಾಗಿದ್ದ ಜನಕೋಟಿಯಲ್ಲಿ ನಾನೂ ಒಬ್ಬ. ಅವರು ಯಾವುದೇ ಲಂಪಟತನ ತೋರದೆ ನೆಮ್ಮದಿಯಿಂದ ಬಾಳಲು ಜನರಿಗೆ ಸರ್ವವಿಧದಿಂದಲೂ ಸಹಾಯ ಮಾಡಿದ್ದರಿಂದ, ಸರ್ವರೂ, ಅದರಲ್ಲೂ ಆದಿವಾಸಿಗಳು ಅವರನ್ನು ದೇವರೆಂದೇ ಪರಿಗಣಿಸುತ್ತಿದ್ದರು. ಅವರ ಆದೇಶ-ನಿರ್ಣಯಗಳನ್ನು ಶಿರಸಾವಹಿಸುತ್ತಿದ್ದರು. ಇಂಥ ವಿಶ್ವಾಸವೇ ಅವರಿಗೆ ಮೃತ್ಯುವಾಗಿ ಬಂದಿತೇ ಎಂದು ದುಃಖವಾಗುತ್ತದೆ...'' ಎನ್ನುತ್ತಿದ್ದಂತೆ ಮಾತು ನಿಲ್ಲಿಸಿ, ಹೊರಗೆ ಯಾರಾದರೂ ತನ್ನ ಮಾತು ಕೇಳಿಸಿಕೊಳ್ಳುತ್ತಿದ್ದಾರೆಯೇ ಎಂದು ಪರೀಕ್ಷಿಸಿ ಇಲ್ಲವೆಂದು ಖಚಿತಪಡಿಸಿ ಮಾತು ಮುಂದುವರಿಸಿದ.

''ಚುನಾವಣೆಯ ಹೊತ್ತಿಗೆ ಅವರ ವರ್ಚಸ್ಸನ್ನು ಬಳಸಿಕೊಳ್ಳುವದಕ್ಕಾಗಿ ದಿಲ್ಲಿ-ಭೋಪಾಳಗಳ ರಾಜಕಾರಣಿಗಳು ಧಾವಿಸಿ ಬರುತ್ತಿದ್ದರು. ಅವರ ಅಸಹಾಯಕತೆ ಅರಿತು, ತಮ್ಮ ಪ್ರಜೆಗಳ ಅಭ್ಯುದಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಆಶ್ವಾಸನೆ ಪಡೆದೇ ಅರಸರು ನೆರವು ನೀಡುತ್ತಿದ್ದರು. ಹುಲಿಯ ಹಾಲಿಗೂ ಒಪ್ಪಿಕೊಂಡವರು. ಒಮ್ಮೆ ತಮ್ಮ ಕೆಲಸವಾದ ನಂತರ ಹಸುವಿನ ಹಾಲಿಗೂ ಸೊನ್ನೆ ಕೊಡಲು ಹವಣಿಸಿದಾಗ, ಅರಸರ ವಿಶ್ವಾಸ ಕಳೆದುಕೊಳ್ಳದೇ ಇರುತ್ತಾರೆಯೇ ? ಆ ನಂತರ ಪ್ರವೀರಚಂದ್ರರು ಅವರೊಡನೆ ಸಹಕರಿಸಲು ನಿರಾಕರಿಸಿದಾಗ, ರಾಜಕಾರಣಿಗಳು ರೊಚ್ಚಿಗೆದ್ದು ಅವರನ್ನು ಅಧಿಕಾರದಿಂದ ಇಳಿಸುವದು ಒಂದೇ ಮಾರ್ಗವೆಂದು ಸಲ್ಲದ ಆರೋಪಗಳ ಮೇಲೆ ಪದಚ್ಯುತಿ ಮಾಡಿ, ಬಂಧನದಲ್ಲಿಡಿಸಿ, ಅವರ ತಮ್ಮ ವಿಜಯಚಂದ್ರರನ್ನು ರಾಜನನ್ನಾಗಿ ಮಾಡಿದರು. ಆತ ಮದುವೆಯಾದದ್ದು ಜನಸಾಮಾನ್ಯ ಳೊಬ್ಬಳನ್ನು. ಯುವರಾಜನೆಂದೇ ಆತನನ್ನು ಸ್ವೀಕರಿಸದಿದ್ದ ಆದಿವಾಸಿಗಳು ರಾಜನೆಂದು ಒಪ್ಪಿಕೊಂಡಾರೇ ? ಗಲಭೆ ಪ್ರಾರಂಭವಾಯಿತು. ತಮಗಾಗಿಯೇ ರಾಜಾ ಪ್ರವೀರಚಂದ್ರರು ಕಾರಾಗೃಹದಲ್ಲಿರುವಂತಾಯಿತೆಂದು ಜನರಿಗೆಲ್ಲ ಗೊತ್ತಿದ್ದರಿಂದ ಅವರ ಬಗ್ಗೆ ಗೌರವ ಇನ್ನೂ ಹೆಚ್ಚುವಂತಾಯಿತು. ಸರಕಾರ ಪ್ರವೀರರನ್ನು ಬಿಡುಗಡೆ ಮಾಡಲೇಬೇಕಾಯಿತು. ಆದರೆ ರಾಜರು ಬಗ್ಗಿ ನಡೆಯುವವರಲ್ಲ. ಮತ್ತೆ ಅವರನ್ನು ಬಂಧಿಸುವದು, ಬಿಡುಗಡೆ ಮಾಡುವದು, ಕೆಲಕಾಲ ನಡೆಯಿತು. ಹತ್ತು ಹನ್ನೆರಡು ವರ್ಷಗಳ ಹಿಂದೆ ಈ ನಾಟಕ ಪ್ರಕೋಪಕ್ಕೆ ಹೋಯಿತು. ಅರಸನಿಗಾಗಿ ದಂಗೆಯೆದ್ದ ಪ್ರಜೆಗಳು-ಪೊಲೀಸರಲ್ಲಿ ಚಕಮಕಿ ನಡೆಯಿತು. ಪ್ರಜೆಗಳು ಗುಂಡಿಗಾಹುತಿಯಾಗುವದನ್ನು ನೋಡಲಾಗದೆ, ಶಾಂತಗೊಳಿಸಲು ಹೊರಗೆ ಬಂದ ಪ್ರಭುವನ್ನು ಬೀದಿನಾಯಿಯನ್ನು ಕೊಲ್ಲುವಂತೆ ಗುಂಡಿಕ್ಕಿ ಕೊಂದರು ಕೊಲೆಗಡುಕರು – ಬಾಬೂಜಿ...'' ಮಾಲಿಕನ ಕೊರಳುಬ್ಬಿ ಕಣ್ಣು ತೇವವಾದುವು. ಸುಧಾರಿಸಿಕೊಂಡು ಮಾತು ಮುಂದುವರಿಸುವದರಲ್ಲಿದ್ದಾಗ ''ಪೊಲೀಸ್ ಸಾಹೇಬರು ಕೂಗುತ್ತಿದ್ದಾರೆ ಸಾಬ್'' ಎಂಬ ಆಳಿನ ವರದಿಯಿಂದ ಲಗುಬಗೆಯಿಂದ ಎದ್ದುಹೋದ.

ಮಾಲಕನ ಮಾತುಗಳನ್ನು ಕೇಳಿಸಿಕೊಂಡ ಸೇವಕನಿಗೆ ಅಂದಿನ ನೆನಪು ಮರುಕಳಿಸಿತು. ''ಬಾಬೂಜಿ, ಆಗ ನಾನಿನ್ನು ನಾಲ್ಕಾಣೆ ದಿನಕೂಲಿಯ ಕೆಲಸಕ್ಕೆ ಹೋಗುವ ಹುಡುಗ. ಗೋಳಿಬಾರಿನಲ್ಲಿ ಮೃತಪಟ್ಟವರನ್ನು ಲಾರಿ ತುಂಬ ಚಿತ್ರಕೂಟಕ್ಕೆ ಸಾಗಿಸಿದ್ದನ್ನು ಅರೆ ನಿಮಿಷ ಕಟ್ಟಡದ ಮರೆಯಲ್ಲಿ ನಿಂತು ನೋಡಿದ್ದೇನೆ. ರಾಜನನ್ನು ಕಳೆದುಕೊಂಡ ನಾವೆಲ್ಲ ಅತ್ತು ಅತ್ತು ಕಣ್ಣು ಊದಿಸಿಕೊಂಡಿದ್ದೆವು. ಲಕ್ಷಾಂತರ ಜನರಿಗೆ ಆಘಾತವಾಗಿದ್ದಿತು. ಯಾರ ಮನೆಯಲ್ಲೂ ಅಂದು ದೀಪ ಉರಿಯಲಿಲ್ಲ, ಅಡಿಗೆ ಆಗಲಿಲ್ಲ. ಇಂದ್ರಾವತಿ ನದಿಯಲ್ಲೂ ಹೆಣಗಳು ತೇಲಿದ್ದನ್ನು ಜನ ಆಡಿಕೊಳ್ಳುತ್ತಿದ್ದರು...'' ಎನ್ನುತ್ತಿದ್ದಂತೆ ಮ್ಯಾನೇಜರರು ಬಂದು, ''ಪೊಲೀಸ್ ಅಧಿಕಾರಿಗಳು ತಮ್ಮನ್ನು ಕಾಣಬೇಕೆಂದು ಆಸೆಪಡುತ್ತಾರೆ'' ಎಂದು ಹೇಳಿದಾಗ ಇದೇನು ಗ್ರಹಚಾರ ಬಂತೆಂದು ಅಲ್ಲಿಗೆ ಹೋದಾಗ ''ಬನ್ನಿ ಸಾರ್, ಪ್ರಭುಗಳ ಬಗ್ಗೆ ತಮಗಿರುವ ಆದರ-ಅಭಿಮಾನಗಳ ಬಗ್ಗೆ ಮ್ಯಾನೇಜರ ಹೇಳಿದರು. ಕಳೆದ ಹನ್ನೊಂದು ವರ್ಷಗಳಲ್ಲಿ ಹೃದಯಾಂತರಾಳದಲ್ಲಿ ಅದುಮಿಟ್ಟು ಕೆಲ ಮಾತುಗಳನ್ನು ತಮಗರುಹಿ, ಚಿತ್ತಶಾಂತಿ ಪಡೆಯೋಣವೆಂದು ತೊಂದರೆ ಕೊಡುವ ಸಾಹಸ ಮಾಡಿದೆ'' ಎಂದು ಚಹಾ ಕಪ್ಪು ಬರಿದು ಮಾಡಿ, ಬಿಟ್ಟಿ ಸಿಗರೇಟು ಹೊತ್ತಿಸಿ ಪೊಲೀಸನು ಎಲ್ಲಿಂದ ಪ್ರಾರಂಭಿಸಬೇಕು ಎಂದು ಗೊತ್ತಾಗದೇ, ಒಂದು ನಿಮಿಷ ಗಗನಮಂಡಲದಲ್ಲಿ ಧೂಮಚಕ್ರಗಳನ್ನು ಕಳಿಸುತ್ತ ಮೆಲುದನಿಯಲ್ಲಿ ಪ್ರಾರಂಭಿಸಿದ.

''ಆ ದಿನಗಳಲ್ಲೆಲ್ಲ ಪೊಲೀಸ್ ಖಾತೆ ಸೇರಿದ್ದಕ್ಕಾಗಿ ಎಷ್ಟು ಸಲ ಪರಿತಪಿಸಿದ್ದೆನೋ! ಪ್ರಭುಗಳು ನೆಲಕ್ಕುರುಳಿದ್ದನ್ನು ಕಣ್ಣಾರೆ ನೋಡಿದಾಗ ರಾಜೀನಾಮೆ ಕೊಡಬೇಕೆಂದು ಈ ಹತಭಾಗಿ ದೃಢಸಂಕಲ್ಪ ಮಾಡಿದರೂ ಹೆಂಡಿರು ಮಕ್ಕಳಿಂದಾಗಿ ಧೈರ್ಯವಿರಲಿಲ್ಲ. ಆ ಘಟನೆ ಇಂದಿಗೂ ಕಣ್ಣಿಗೆ ಕಟ್ಟಿದೆ. ಅರಸರ ಎಲ್ಲ ಬೇಡಿಕೆಗಳನ್ನು ಮನ್ನಿಸಲು ಆಳುವ ಪಕ್ಷದ ಧುರೀಣರಾಗಿದ್ದ ಸೂರ್ಯಪಾಲ ತಿವಾರಿಯ ಮನ ಒಲಿಸಲು ಆದಿವಾಸಿಗಳ ತಂಡ ಒಂದು ಅವರ ಗೃಹಕ್ಕೆ ತೆರಳಿತು. ಇದರಿಂದ ಶಾಂತತೆಗೆ ಭಂಗ ಬರುವ ಸಾಧ್ಯತೆ ಇದೆ! ಎಂಬ ಊಹೆಯ ಮೇಲೆಯೇ ನೂರನಾಲ್ವತ್ತನಾಲ್ಕನೆಯ ಕಲಮು ಜಾರಿಗೆ ತರಲಾಯಿತು. ಅದರ ಕಾರ್ಯಾಚರಣೆಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸಶಸ್ತ್ರ ಪಡೆಯನ್ನು ಅರಮನೆಯ ಆವಾರದಲ್ಲಿಡ ಲಾಯಿತು. ಸೂರ್ಯನು ನಡುನೆತ್ತಿಗೇರಿದಾಗ, ಬಂಧಿತ ಆದಿವಾಸಿ ಮುಖಂಡರನ್ನು ಜೈಲಿಗೆ ಸಾಗಿಸುತ್ತಿದ್ದಾಗ ಓರ್ವ ಹುಂಬನು ಜೈಜೈಕಾರ ಹಾಕಲಾರಂಭಿಸಿದ. ಉಳಿದವರೂ ಸೇರಿದರು. ತಮಾಷೆಯೇನೋ ನಡೆದಿರಬೇಕೆಂದು ಓಡಿಬಂದ ಹಳ್ಳಿಗರನ್ನು ಪೊಲೀಸರು ಹೀನಮಾನವಾಗಿ ಬೈಯ್ಯಲಾರಂಭಿಸಿದರು. ಈ ಗದ್ದಲದಲ್ಲಿ ಕೈದಿಗಳು ತಪ್ಪಿಸಿಕೊಂಡದ್ದರಿಂದ, ಸುತ್ತುವರಿದ ಹಳ್ಳಿಗರ ಮೇಲೆ ಪೊಲೀಸರು ಆಕ್ರೋಶ ತೀರಿಸಿಕೊಂಡರು. ಆದಿವಾಸಿಗಳೂ ಸಿಟ್ಟಿಗೆದ್ದು ಬಾಣಗಳಿಂದ ಉತ್ತರಿಸಿದರು. ಓರ್ವ ಪೊಲೀಸ ನೆಲಕ್ಕೆ ಬಿದ್ದ. ಈ ಮುಂಡೇ ಮಕ್ಕಳಿಗೆ ನಮ್ಮ ಮೇಲೆ ಕೈ ಮಾಡುವಷ್ಟು ಧೈರ್ಯ ಬಂದೀತೇ ? ಎಂದು ಪೊಲೀಸ್ ಪಡೆಯವರು ಕೋವಿಗಳನ್ನು ಹೊತ್ತು ಬಿಲ್ಲು ಬಾಣದವರನ್ನು ಬೆನ್ನಟ್ಟಿದರು. ಸರಿ ಆದಿವಾಸಿಗಳು ನೆರೆಯುತ್ತಿದ್ದಂತೆ ಗುಂಡು-ಬಾಣಗಳ ಕದನ ಪ್ರಾರಂಭವಾಯಿತು. ಇದು ಅತಿರೇಕಕ್ಕೆ ಹೋಗಬಾರದೆಂದು ಅರಸರು, ಬೆಂಗಾವಲಿನ ಪರಿವೆ ಇಲ್ಲದೇ ಅವಸರದಿಂದ ಅರಮನೆಯ ಹೊರಾಂಗಣಕ್ಕೆ ಧಾವಿಸಿಬಂದರು. ಇದೇ ಅವಕಾಶಕ್ಕಾಗಿ ಕಾದಿದ್ದಂತೆ, ಕೋವಿಯೊಂದು ಅವರತ್ತ ತಿರುಗಿ ಗುಂಡಿನೇಟಿನಿಂದ ನೆಲಕ್ಕುರುಳಿಸಿತು. ಅವರ ಸಂರಕ್ಷಣೆಗೆ ಓಡಿದ ಎಂಟು ಆದಿವಾಸಿ ಮುಖಂಡರೂ ಮೃತಪಟ್ಟರು. ಕೈಯಲ್ಲಿ ಬೆತ್ತವನ್ನೂ ಹಿಡಿಯದ ಮಹಾಪುರುಷನನ್ನು ನಮ್ಮವರು ಈ ರೀತಿ ಹತ್ಯೆ

ಮಾಡಬಹುದೆಂದು ನಮಗೇ ನಂಬಲು ಅಸಾಧ್ಯವಾದಾಗ ಜನಸಾಮಾನ್ಯರಿಗೆ ಹೆಚ್ಚಿನ ಆಘಾತವಾದದ್ದರಲ್ಲಿ ಏನೂ ಆಶ್ಚರ್ಯವಿಲ್ಲ. ಈ ಘಟನೆ ಇಂದಿಗೂ ನೆನಪಾದಾಗ ನಿದ್ರೆಯಿಲ್ಲದೇ ರಾತ್ರಿಯನ್ನು ಕಳೆಯಬೇಕಾಗುತ್ತದೆ...'' ಎನ್ನುತ್ತಿದ್ದಂತೆ ಇದಕ್ಕೂ ಮುಂದೆ ಹೇಳಬೇಕೇ ಎಂದು ಸ್ವಲ್ಪ ಹಿಂಜರಿದು ಹೇಳಿದರೆ ತಪ್ಪೇನು ಎಂಬ ಭಾವದಿಂದ ಮುಂದುವರಿದ.

''ಅಧಿಕಾರಿಗಳು ಹೇಳುವಂತೆ ಪ್ರವೀರಚಂದ್ರರು ಆಕಸ್ಮಿಕವಾಗಿ ಗೋಳಿಬಾರಿಗೆ ಸಿಕ್ಕು ಮಡಿದಿದ್ದರೆ, ಅವರ ಆಸ್ತಿ ಪಾಸ್ತಿಗಳನ್ನು ಜಪ್ತಿ ಮಾಡಿ ಸಾಮಾನುಗಳನ್ನು ಒಂಬತ್ತು ಪೆಟ್ಟಿಗೆಗಳಲ್ಲಿ ತುಂಬಿಸಿ ಸರಕಾರಿ ಬೊಕ್ಕಸದಲ್ಲಿಡಿಸುವ ಅವಶ್ಯಕತೆ ಏನಿತ್ತು? ಈ ದುಷ್ಕೃತ್ಯದ ಹಿಂದೆ ಏನಾದರೂ ಸಂಚು ಇದ್ದಿರಬೇಕು ಎಂದು ವಿಚಾರವಂತರಿಗೆಲ್ಲ ಅನಿಸದಿರಲಿಲ್ಲ. ಇಂತಹವರ ಬಾಯಿ ಮುಚ್ಚಿಸಲು ಕೆಲವರಿಗೆ ಅಧಿಕಾರದ ತಡೆಯಾಜ್ಞೆ ಹಾಕಿದರೆ ಹಲವರನ್ನು ವರ್ಗಾಯಿಸಲಾಯಿತು. ನಮ್ಮ ಕಣ್ಣಿಗೆ ಮಣ್ಣೆರಚಿದರೂ ದೇವರು ಕಣ್ಣು ಮುಚ್ಚಿರುವುದಿಲ್ಲವಲ್ಲ? ಈ ಘಟನೆ ನಡೆದ ಒಂದೇ ತಿಂಗಳಿನಲ್ಲಿ ಬಸ್ತರದ ಕಲೆಕ್ಟರ ಸಾಹೇಬರು (ಮೊಹಮ್ಮದ ಕಬರರು) ಪಾರ್ಶ್ವವಾಯುವಿನಿಂದ ಮರಣ ಹೊಂದಿದರು. ದಷ್ಟಪುಷ್ಟರಾಗಿದ್ದ ಸಹಾಯಕ ಕಲೆಕ್ಟರ್ ಮುಕುಟೇಶ್ವರ ಸಿಂಗರು ಮಲೇರಿಯದಿಂದ ಹಾಸಿಗೆ ಹಿಡಿದರು. ಪೊಲೀಸ್ ಸರ್ವಾಧಿಕಾರಿಯಾಗಿದ್ದ ಎಸ್. ಪಿ. ಸಿಂಗರು ಅಪಘಾತದಲ್ಲಿ ಮೃತಪಟ್ಟರು. ಪೊಲೀಸ್ ಆ್ಯಕ್ಷನ್‌ಗೆ ಅನುಮತಿಯಿತ್ತ ಕಮೀಷನರ್ ಸಿ. ಎಸ್. ನೊರೊನ್ಹಾರು ತಮ್ಮ ಉತ್ತಮ ಜನಸೇವೆಗೆ, ಈ ದುಷ್ಕೃತ್ಯದ ಕಲಂಕ ಹೊತ್ತೇ ಮರುಗುತ್ತ ನಿವೃತ್ತರಾಗಬೇಕಾಯಿತು. ದಂತೇಶ್ವರಿ ಮಾತೆಯ ಶಾಪ ನನಗೂ ತಟ್ಟಿರಬೇಕು. ಜೊತೆಯವರೆಲ್ಲ ಮೇಲಿನ ಹುದ್ದೆಗೆ ಹೋದರೂ ನಾನು ಮಾತ್ರ ಜಮಾದಾರನಾಗಿಯೇ ಇರಬೇಕಾಯಿತು'' ಎಂದು ಪುಕ್ಕಟೆ ನಾಶ್ತಾ-ಸಿಗರೇಟುಗಳನ್ನು ಮುಗಿಸುತ್ತ ಪೊಲೀಸನೆಂದ.

''ಈ ಘಟನೆಯ ಬಗ್ಗೆ ವಿಚಾರಣೆ ನಡೆಯಲಿಲ್ಲವೇ ?'' ಎಂದು ಪ್ರಶ್ನಿಸಿದಾಗ, ''ಆ ನಾಟಕ ಆಡದೆ ಇರಲು ಸಾಧ್ಯವೇ ? ರಾಜ್ಯದ ಹೈಕೋರ್ಟ್ ನ್ಯಾಯಾಧೀಶ ಕೆ. ಎಲ್. ಪಾಂಡೆಯವರಿಗೆ ಈ ಜವಾಬ್ದಾರಿ ನಿರ್ವಹಿಸಿದರು. ಈ ತನಿಖೆಗೆ ಲಕ್ಷಾಂತರ ರೂಪಾಯಿ ಖರ್ಚಾದರೂ ಒಂದು ಪಿಳ್ಳೆಗೂ ಶಿಕ್ಷೆಯಾಗದಿರುವದೇ ಅದರ ವೈಶಿಷ್ಟ್ಯ ! ದಸರಾ ಹಬ್ಬದ ನಿಮಿತ್ತ ಇಂದು ಸಂಜೆ ಅರಮನೆಗೆ ಸಾರ್ವಜನಿಕರಿಗೆ ಪ್ರವೇಶವಿದೆ. ಪ್ರವೀರಚಂದ್ರರು ಮಡಿದ ಸ್ಥಳದ ದರ್ಶನವಾದರೂ ಪಡೆಯಲು ಸಾಧ್ಯವಾದೀತು. ಜೊತೆಗೆ ರಾಜಮಾತೆ ಹಿತೇಂದ್ರದೇವಿ, ಯುವರಾಜ ಭರತಸಿಂಗರನ್ನು ಕಾಣಬಹುದು'' ಎಂದು ಕುಹಕದಿಂದ ನುಡಿದು, ಕೈಗಡಿಯಾರ ನೋಡಿ ದಿನಚರಿಯನ್ನು ಕೈಗೆತ್ತಿಕೊಂಡು, ಬೆತ್ತವನ್ನು ಕಂಕುಳಿಗೇರಿಸಿ, ''ನನ್ನ ಹೆಸರು ಎಲ್ಲಿಯೂ ಬಾರದಂತೆ ನೋಡಿಕೊಳ್ಳಿ ಸಾರ್'' ಎಂದು ಹೊರಡಲು ಸಿದ್ಧನಾದ. ''ನಿಮ್ಮ ಹೆಸರು ಕೇಳಲೂ ಇಲ್ಲ, ನೀವಾಗಿ ಹೇಳಲೂ ಇಲ್ಲ'' ಎಂದು ನೆನಪು ಮಾಡಿದಾಗ ತನ್ನ ಮಂಕುತನಕ್ಕೆ ಮರುಗಿ ಹೊರಟುಹೋದ.

ಮೈಸೂರಿನ ನಾಲ್ಮಡಿ ಕೃಷ್ಣರಾಜ ಒಡೆಯರಂತೆ ಪ್ರವೀರಚಂದ್ರರು ತಮ್ಮ ಪ್ರಜೆಗಳಲ್ಲಿ ಅತ್ಯಂತ ಜನಪ್ರಿಯರಿದ್ದರು ಎಂಬುದು ಇಷ್ಟೆಲ್ಲ ವರ್ಷಗಳ ನಂತರವೂ ಮನೆಮನೆಯಲ್ಲಿ ಅವರ ಭಾವಚಿತ್ರವನ್ನು ಇಟ್ಟು ಹೂವೇರಿಸುತ್ತಿದ್ದ ಪರಿಪಾಠ ಸಾಕ್ಷಿ ಹೇಳಿತು. ದಸರಾಕ್ಕೆ ಮೂಲೆಮೂಲೆಗಳಿಂದ ಬರುತ್ತಿದ್ದ ಆದಿವಾಸಿಗಳು ಹಿಂದಿನ ನೆನಪಿನಿಂದ ಗಲಭೆ ಮಾಡಬಾರದೆಂದು ಅಷ್ಟೊಂದು ಪೊಲೀಸ್ ಪಡೆ ಇಟ್ಟಿರಬೇಕೆಂದು ಅನಿಸಿತು. ದೂರದೂರದ ಹಳ್ಳಿಗಳಿಂದ ತಮ್ಮ ಅತ್ಯುತ್ತಮ ವೇಷಭೂಷಣಗಳಲ್ಲಿ ಬಂದ ಆದಿವಾಸಿಗಳು ಅರಮನೆಯ ಒಳ-ಹೊರಗೆ

ನೆರೆದಿದ್ದರು. ಅದೊಂದು ಯಾತ್ರಾಸ್ಥಳವೆಂಬಂತೆ, ಅಲ್ಲಿಯ ಪ್ರತಿಯೊಂದು ವಸ್ತುವನ್ನು ಗೌರವ ಭಾವದಿಂದ ಕಾಣುತ್ತಿದ್ದರು. ಪ್ರವೀರರ ಬೈಠಕಖಾನೆಯಲ್ಲಿಯೇ 'ಯುವರಾಜ' ಭರತ ಚಂದ್ರನ 'ದರ್ಬಾರು' ಏರ್ಪಟ್ಟಿತ್ತು. ಸುಣ್ಣ ಬಣ್ಣಗಳಿಲ್ಲದೆ ಗೋಡೆಗಳ ಮೇಲೆ ಕಾಡು-ಕೋಣ ಜಿಂಕೆಗಳ ಅಲಂಕೃತ ಶಿರಗಳು ಧೂಳು ಝಾಡಿಸುವವರಿಗೂ ಗತಿ ಇಲ್ಲದೇ ಅನಾಥವಾಗಿದ್ದವು. ಮೂಲೆಯೊಂದರಲ್ಲಿ ಪ್ರವೀರರ ಭಾವಚಿತ್ರಕ್ಕೆ ಹಾಕಿದ ಹೂಮಾಲೆ ಬಾಡಿಹೋಗಿತ್ತು. ಅವರ ಪಟ್ಟದ ರಾಣಿ, ನೇಪಾಳ ರಾಜಮನೆತನದ ವೇದವತಿಯ ತೈಲಚಿತ್ರ ಹತ್ತಿರದಲ್ಲೇ ತೂಗಹಾಕಿದ್ದರು. ಸೌಮ್ಯ ಅರಳಿದ ಮುಖ ಭಾವ. ಪ್ರವೀರರೇ ಹಿಂದೊಮ್ಮೆ ಅದನ್ನು ಮಾಡಿಸಿರಬೇಕು ಅನಿಸಿತು. ವಿಜಯಚಂದ್ರರ ವಿಧವೆ ಹಿತೇಂದ್ರದೇವಿ ಸೋಫಾದಲ್ಲಿ ಆಸೀನಳಾಗಿದ್ದರು. ಮುಖದಲ್ಲಿ ಇರಬೇಕಾದ ರಾಜಕಳೆಯ ಬದಲಾಗಿ ಜೀವನದ ಭೀಕರತೆ ಹಣಕಿತ್ತು. ಇನ್ನೊಂದು ಆಸನದಲ್ಲಿ ಸುಂದರ ಕೃಶವಾದ ದೇಹದ ಯುವರಾಜ ಭರತಚಂದ್ರ ದೇವನು ಹೇಗೆ ವರ್ತಿಸಬೇಕೆಂದು ತಿಳಿಯದೇ ನಾಚುತ್ತ ಕುಳಿತಿದ್ದ. ಮುಂಜಾನೆ ದರ್ಪ ತೋರಿದ ಗೊಂಡಿತಿಯೇ ಪಟ್ಟದಾನೆಯಾಗಿ ಬಟ್ಟೆಯ ಬೀಸಣಿಗೆಯಿಂದ ರಾಜಮಾತೆಗೆ ಗಾಳಿ ಬೀಸುತ್ತ ನಿಂತಿದ್ದಳು. ಆಗಂತುಕ ಆದಿವಾಸಿಗಳ ಭಯ-ಭಕ್ತಿಗಳು ಕಣ್ಣೀರು ತರಿಸುವಂತಿದ್ದವು. ದೇವರಿಗೆ ಸಲ್ಲಬೇಕಾದ ಭಯಭಕ್ತಿಗಳಿಂದ ರಾಜಪರಿವಾರದವರನ್ನು ನಮಿಸಿ ಐದು-ಹತ್ತು ಪೈಸಾಗಳ ಕಾಣಿಕೆ ಒಪ್ಪಿಸುತ್ತಿದ್ದರು. ಎರಡು ವರ್ಷದ ಹುಡುಗಿಯೊಬ್ಬಳು ಜೊತೆಯಲ್ಲಿ ತಂದ ಒಂದು ಪೈಸಾ ಪ್ರವೀರರ ಭಾವಚಿತ್ರದೆದುರು ಇಟ್ಟಾಗ ಮನಸ್ಸು ಕರಗದೇ ಇದ್ದೀತೇ? ಕಡುಬಡವರಾದ ಆದಿವಾಸಿಗಳ ರಾಜನಿಷ್ಠೆ ಸಂಪನ್ನವಿದ್ದದ್ದು ಸ್ಪಷ್ಟವಿತ್ತು.

ಪ್ರವೀರಚಂದ್ರರು ಇನ್ನಿತರ ರಾಜರುಗಳಿಗಿಂತ ಬೇರೆಯಾಗಿದ್ದರು, ಎಂದು ಖಚಿತವಾದ ನಂತರ ಅವರ ಮನೆತನದ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಲು ವಾಚನಾಲಯಗಳಿಗೆ ಎಡತಾಕಬೇಕಾಯಿತು. ಒರಿಸ್ಸಾದಿಂದ ಬಂದ ಭಾಂಜದೇವ್ (ಮಯೂರಭಂಜ ಜಿಲ್ಲೆ) ಕುಟುಂಬದವರು ಮೊದಲು ಮರಾಠರ ಮಾಂಡಲಿಕರಾಗಿದ್ದು ನಂತರ ಬ್ರಿಟಿಷರ ಆಧಿಪತ್ಯಕ್ಕೆ ಒಳಗಾದರು. 1908ರಲ್ಲಿ ರುದ್ರಪ್ರತಾಪದೇವನು ಪಟ್ಟವೇರಿದರೂ ಪ್ರಜೆಗಳ ಅಸಂತುಷ್ಟಿಯಿಂದ ಎರಡೇ ವರ್ಷಗಳಲ್ಲಿ ಬಂಡಾಯವೆದ್ದು, ಮಗಳು ಪ್ರಫುಲ್ಲದೇವಿ ರಾಜ್ಯ ಕಾರಭಾರ ವಹಿಸಿಕೊಂಡು 1936ರ ವರೆಗೆ ದಕ್ಷತೆಯಿಂದ ಪ್ರಜೆಗಳ ಯೋಗಕ್ಷೇಮ ನೋಡಿಕೊಂಡಳು. ನಂತರದ ದಶಕದ ಅರಸನೂ ದುರ್ಬಲನಾಗಿ 1947ರಲ್ಲಿ ಹದಿನೆಂಟರ ಹರೆಯದ ಪ್ರವೀರಚಂದ್ರರು ರಾಜ್ಯ ಕಾರಭಾರ ವಹಿಸಿಕೊಂಡರು. ಬಸ್ತರ ಸಂಸ್ಥಾನ 1948ರಲ್ಲಿ ಭಾರತ ಒಕ್ಕೂಟದಲ್ಲಿ ವಿಲೀನವಾಯಿತು. ಮಧ್ಯಪ್ರದೇಶದ ಜಿಲ್ಲೆಯ ಈ ಕ್ಷೇತ್ರ ದಟ್ಟವಾದ ಕಾಡು, ಎತ್ತರವಾದ ಪರ್ವತಾವಳಿ, ಹಳ್ಳಕೊಳ್ಳಗಳಿಂದ ಕೂಡಿದ್ದು, ಜನವಸತಿ ಅತಿ ವಿರಳವಾಗಿದೆ. ಇವರಲ್ಲಿ ಶೇಕಡಾ ಎಂಬತ್ತರಷ್ಟು ಮೂಲ ಬುಡಕಟ್ಟಿನವರು ಎಂಬುದು ಗಮನಾರ್ಹ. ಶತಕಗಳಿಂದ ನಡೆದುಬಂದ ಅವರ ಜೀವನ ಪದ್ಧತಿಯಲ್ಲಿ ಪ್ರವೀರರು ಕೈಹಾಕಲಿಲ್ಲ. 'ಸುಧಾರಣೆ'ಯನ್ನು ಹೇರಲಿಲ್ಲ. ಆದರೆ ಒಳಿತನ್ನು ನಿರ್ಲಕ್ಷಿಸದ್ದರಿಂದ ಬಲು ಬೇಗ ಜನಪ್ರಿಯರಾದರು. ಹೀಗಾಗಿ ಅವರು ಒಪ್ಪದ ಯಾವ ಕೆಲಸವೂ ಬಸ್ತರದಲ್ಲಿ ನಡೆಯ ದಾಯಿತು. ಅರಸರು ಬೆಂಬಲ ಕೊಡದ್ದರಿಂದ 1952ರ ವಿಧಾನಸಭೆಯ ಚುನಾವಣೆಯಲ್ಲಿ ಹತ್ತರಲ್ಲಿ ಎರಡು ಸ್ಥಾನಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳಲು ಆಡಳಿತ ಪಕ್ಷಕ್ಕೆ ಕಷ್ಟಸಾಧ್ಯವಾಯಿತು. ಎರಡನೇ ಚುನಾವಣೆಯಲ್ಲಿ ಪ್ರವೀರರ ಬೇಡಿಕೆಗಳಿಗೆ ಆಶ್ವಾಸನೆಗಳನ್ನು ಕೊಟ್ಟದ್ದರಿಂದ ಎಲ್ಲಾ ಸ್ಥಾನಗಳೂ ಆಳುವ ಪಕ್ಷಕ್ಕೆ ಹೋದವು.

ಗೆದ್ದ ನಂತರ ಕೊಟ್ಟ ಆಶ್ವಾಸನೆಗಳನ್ನು ನೆರವೇರಿಸಲು ಪ್ರವೀರಚಂದ್ರನು ಒತ್ತಾಯಿಸಿದ್ದರಿಂದ ಭೋಪಾಲ ಸರ್ಕಾರಕ್ಕೆ ಅಧಿಕ ಪ್ರಸಂಗತನವೆನಿಸಿರಬೇಕು. ಈ ಆದಿವಾಸಿ ಅರಸನಿಗೆ ಒಳ್ಳೆಯ ಪಾಠ ಕಲಿಸಬೇಕೆಂಬ ಒಪ್ಪಂದ, ಕೇಂದ್ರ-ರಾಜ್ಯ ಸರಕಾರಗಳಲ್ಲಿ ಆಗಿರಬೇಕು. ಅಂತೆಯೇ ರಾಜರ ಕರ್ತವ್ಯಚ್ಯುತಿಯ ಬಗ್ಗೆ ಹಲವಾರು ಆಪಾದನೆಗಳು ಬಂದವು. ಬಸ್ತರದಲ್ಲಿ ಮತ್ಸ್ಯ ನ್ಯಾಯ ಪದ್ಧತಿಯಿದೆಯೆಂದರು. ನಿರ್ಗತಿಕ ಆದಿವಾಸಿ ಕನ್ಯೆಯರನ್ನು ವೇಶ್ಯಾವಾಟಿಕೆಗಳಿಗೆ ಸಾಗಿಸುವದರಲ್ಲಿ ಅರಸರ ಪಾತ್ರವಿದೆಯೆಂದರು. ಗಣಿಗಳಲ್ಲಿ ಸಂಪನ್ನವಾದ ಈ ಪ್ರದೇಶ ಹಿಂದುಳಿಯಲು ಆತನೇ ಕಾರಣವೆಂದರು. (ಸಂಪನ್ಮೂಲಗಳು ಸಮೃದ್ಧವಾದ ಬಿಹಾರ ಆಗೂ ಈಗೂ ಅಷ್ಟೇ ಹಿಂದುಳಿದಿದೆ.) ದೇಶದ ಅಭ್ಯುದಯದಲ್ಲಿ ಹಿಂದಿದ್ದಾಗ ಆದಿವಾಸಿಗಳ ಅಭ್ಯುದಯವನ್ನು ರಾಜಪ್ರಮುಖ ಅಲಕ್ಷಿಸಿದನಂತೆ! ಈ ಎಲ್ಲ ಆರೋಪಗಳಾಧಾರದ ಮೇಲೆ ಪ್ರವೀರರನ್ನು ಪದಚ್ಯುತಿಗೊಳಿಸಿ, 12-2-1961ರಲ್ಲಿ ಬಂಧಿಸಿ, ತಮ್ಮ ವಿಜಯಚಂದ್ರನನ್ನು ಅವರ ಸ್ಥಾನಕ್ಕೆ ತಂದರು. ಇದರಿಂದ ಆದಿವಾಸಿಗಳ ಅಭಿಮಾನ ಕೆರಳಿ, ಪ್ರತಿಭಟನೆ, ದಂಗೆ-ದೊಂಬಿಗಳು ತಲೆದೋರಿ ಎರಡೇ ತಿಂಗಳಲ್ಲಿ ಅರಸರನ್ನು ಬಿಡುಗಡೆ ಮಾಡಬೇಕಾಯಿತಲ್ಲದೆ ಅವರ ಸೊತ್ತನ್ನೆಲ್ಲ ಹಿಂದಿರುಗಿಸಬೇಕಾಯಿತು.

ರಾಜಕಾರಣಿಗಳು ಹೊತ್ತಿಸಿದ ದ್ವೇಷಾಗ್ನಿ ವಿಜಯಚಂದ್ರನಲ್ಲಿ ಪ್ರಖರವಾಗಿ ಉರಿಯ ಹತ್ತಿತು. ತಾನೇ ಅಧಿಕೃತ ನಾಯಕನಾದ್ದರಿಂದ ರಾಜಸ್ವವೆಲ್ಲ ನ್ಯಾಯವಾಗಿ ತನ್ನದೇ ಎಂದು ಮೊಕದ್ದಮೆ ಹೂಡಿದನಲ್ಲದೇ ತನಗೆ ಆದ ಮೂರುಕಾಲು ಲಕ್ಷ ರೂಪಾಯಿಗಳ ಹಾನಿಯನ್ನು ತುಂಬಿಕೊಡಬೇಕೆಂದು ಕೋರಿದನು. ಈ ಗೊಂದಲದಿಂದಾಗಿ 1962ರ ಚುನಾವಣೆಯಲ್ಲಿ ಒಂದೇ ಒಂದು ಸ್ಥಾನ ಗೆಲ್ಲಲು ಆಡಳಿತ ಪಕ್ಷಕ್ಕೆ ದುಸ್ತರವಾಯಿತು. ಸರಿ, ಮತ್ತೆ ಪ್ರವೀರಚಂದ್ರರ ಮೇಲೆ ಕತ್ತಿ ಮಸೆಯಲಾರಂಭಿಸಿದರು. ರಾಜ್ಯಕ್ಕೆ ಸೇರಿದ ಆಸ್ತಿ ಮಾರಿ ಹಣ ಸಂಪಾದನೆ ಮಾಡುತ್ತಿದ್ದಾರೆ. ಅನಧಿಕೃತವಾಗಿ ಬೊಕ್ಕಸದ ಬೆಲೆ ಬಾಳುವ ಒಡವೆ ಮಾರಿದ್ದಾರೆ ಎಂಬ ಆಪಾದನೆಗಳಿಂದಾಗಿ 'ದೇಶದ್ರೋಹಿ' ಎಂಬ ಬಿರುದು ದಯಪಾಲಿಸಿದರು. ಶಿಸ್ತುಭಂಗದ ಆರೋಪದ ಮೇಲೆ 8-12-65ರಲ್ಲಿ ಮತ್ತೆ ಬಂಧಿಸಿದರು. ನಂತರ ಜಾಮೀನಿನ ಮೇಲೆ ಬಿಟ್ಟರು. ಸರಕಾರದ ಕುತಂತ್ರದ ವಿರುದ್ಧ ಪ್ರವೀರರು ಉಪವಾಸ ಕೈಗೊಂಡರು. ಸಾವಿರಾರು ಆದಿವಾಸಿಗಳು ಸಹಾನುಭೂತಿ ತೋರಿದರು. ನಂತರ ಪ್ರತಿಬಂಧ ದಸ್ತಗಿರಿ, ಮತ ಪ್ರದರ್ಶನಗಳ ಕಣ್ಣುಮುಚ್ಚಾಲೆ ಆಟಗಳು ನಡೆದೇ ಇದ್ದವು. ಈ ಅವಧಿಯಲ್ಲಿ ಶಾಂತತೆಗೆ ಭಂಗ ತರಲಾಯಿತೆಂಬ ಆಪಾದನೆಯ ಮೇಲೆ ಕೆಲ ಆದಿವಾಸಿಗಳನ್ನು ಬಂಧಿಸಿದ್ದರು. ಅವರನ್ನು ಜೈಲಿಗೆ ವರ್ಗಾಯಿಸುವಾಗ ಕೋಲಾಹಲವೆದ್ದು ಶಾಂತತೆ ಸ್ಥಾಪಿಸಲು ಹೊರಬಂದ ಪ್ರವೀರ ಚಂದ್ರರು 25-3-1966ರಂದು ಮರಣ ಹೊಂದಿದರೆಂದು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಅಂದಿನ ದಿನಗಳಲ್ಲಿ ಕೂಡ ಚುನಾವಣೆಯಲ್ಲಿ ಆರಿಸಿ ಬರಲು ಆಳುವ ಪಕ್ಷ ಪ್ರಜಾತಂತ್ರ ಬಳಸುವ ಬದಲಾಗಿ ವಿರೋಧಿಯನ್ನು ನಿರ್ನಾಮ ಮಾಡುವ ಕುತಂತ್ರ ಬಳಸುವದರಲ್ಲಿ ಎಂದೂ ಹಿಂದೆ ಬೀಳಲಿಲ್ಲ ಎಂಬುದಕ್ಕೆ ಇದಕ್ಕೂ ಉತ್ತಮವಾದ ಬೇರೆ ಯಾವ ಉದಾಹರಣೆ ಬೇಕು ?

ವಿಜಯಚಂದ್ರ, ಅರಸೊತ್ತಿಗೆಯ ಅಂತಸ್ತನ್ನು ಅನುಭವಿಸಲು ಹೆಚ್ಚು ಕಾಲ ಬದುಕಲಿಲ್ಲ. ಪ್ರವೀರರಿಗೆ ಸಂತಾನವಿರಲಿಲ್ಲ. ಹಿತೇಂದ್ರದೇವಿಯ ಮಕ್ಕಳು ತೀರ ಚಿಕ್ಕವರು. ಹೀಗಾಗಿ ಅಧಿಕಾರವನ್ನು ಸರಕಾರ ಸ್ವತಃ ವಹಿಸಿಕೊಂಡಿತು. ಇಷ್ಟಾದರೂ ಅರಸನ ದುರ್ಮರಣ ಜನತೆಯ ಮನಸ್ಸಿನಲ್ಲಿ ಹಸಿರಾಗಿಯೇ ಇದ್ದುದರಿಂದ 1967ರ ಚುನಾವಣೆಯಲ್ಲಿ ಕೇವಲ ಎರಡೇ ಸ್ಥಾನಗಳು ಸಿಕ್ಕವು. ಪ್ರವೀರಚಂದ್ರರ ಮರಣದ ನಂತರ ಜಪ್ತಿ ಮಾಡಿದ ಒಂಬತ್ತು

ಪೆಟ್ಟಿಗೆ ತುಂಬ ಅರಸೊತ್ತಿಗೆಯ ಸಾಮಾನುಗಳ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸಲು ಇಬ್ಬರೂ ವಿಧವೆಯರು ಯತ್ನಿಸಿದ್ದರಿಂದ ಇಂದಿಗೂ ಅವು ಜಗದಲಪುರದ ಖಜಾನೆಯಲ್ಲಿ ಬೆಚ್ಚನೆ ಕುಳಿತಿವೆ. 1980ರಲ್ಲಿ ಅವುಗಳ ಬಿಡುಗಡೆಗೆ ಕೋರ್ಟು ಆಜ್ಞೆ ಕೊಟ್ಟರೂ ಅದನ್ನು ಯಾರ ವಶಕ್ಕೆ ಕೊಡುವದೆಂದು ತಿಳಿಯದೆ ಹಾಗೆ ಉಳಿದುಕೊಂಡಿದೆ. ಆಸ್ತಿಯ ಮನಸ್ತಾಪದಿಂದಾಗಿ ಅರಮನೆಯ ರಾಜಕಾರಣಕ್ಕೆ ಹೊಸ ತಿರುವು ಬಂದಿದೆ. 1977ರ ಚುನಾವಣೆಯಲ್ಲಿ ವೇದವತಿ ದೇವಿ ಜನತಾಪಕ್ಷಕ್ಕೆ ಬೆಂಬಲ ಕೊಟ್ಟರೂ ಈಗ ಆಳುವ ಪಕ್ಷಕ್ಕೆ ಸೇರಿದ್ದಾರೆ. ಇದಕ್ಕೆ ಮುಖ್ಯ ಕಾರಣ ಹಿತೇಂದ್ರದೇವಿ ವೃತ್ತಪತ್ರಿಕೆಗೆ ಕೊಟ್ಟ ಜಾಹೀರಾತು. ಅರಮನೆಯ ಆವಾರದ ಹೆಚ್ಚಿನ ಭಾಗವನ್ನು ಚಲಚ್ಚಿತ್ರ, ಹೋಟೆಲ, ವಸತಿಗೃಹ ಕಟ್ಟಲು ಬಯಸುವವರಿಗಾಗಿ ಮಾರಲಾಗುವದು ಎಂದು ಸಾರಿದ್ದರಿಂದ, ಕೋಟ್ಯಂತರ ಹಣ ಬರುವ ಈ ವ್ಯವಹಾರ ತಡೆ ಹಿಡಿಯುವದು ಆಳುವ ಪಕ್ಷದಿಂದ ಮಾತ್ರ ಸಾಧ್ಯವೆಂದು ಹಿಂದಿನ ಹಿರಿಯ ಅರಸಿ ಈ ಪಕ್ಷಾಂತರ ಮಾಡಿರಬೇಕು.

ಸಣ್ಣ ಪುಟ್ಟ ಸಂಸ್ಥಾನಗಳನ್ನು ಭಾರತದಲ್ಲಿ ವಿಲೀನಗೊಳಿಸುವಾಗ ಅವುಗಳ ಆಳರಸರಿಗೆ ಜೀವನ ಪರ್ಯಂತ ವರ್ಷಾಸನ ಕೊಡಲಾಗುವದೆಂದು ಸಾರ್ವತ್ರಿಕವಾಗಿ ಆಶ್ವಾಸನೆ ಕೊಡಲಾಗಿದ್ದರೂ ನಾವು ಸುಧಾರಕರು, ಸಮಾಜವಾದಿಗಳೆಂದು ವಿಶ್ವಕ್ಕೆ ಸಿದ್ಧಮಾಡಿ ತೋರಿಸಲು ಅದನ್ನು ರದ್ದುಗೊಳಿಸಬೇಕಾಯಿತು! ರಾಜಕೀಯವಾಗಿ ತಲೆ ಎತ್ತಿದ ''ರಾಜಕುಮಾರ'' ಯುವರಾಜರ ಒಂದು ದಿನದ ರಾಜ್ಯದ ರಾಜಧಾನಿಯ ಭೇಟಿಗೆ ಕೋಟ್ಯಂತರ ರೂಪಾಯಿಗಳ ಹೊಳೆ ಹರಿಸಿದ ನಮಗೆ ಸರ್ವಸ್ವವನ್ನೂ ಕಳೆದುಕೊಂಡ ಈ ರಾಜ ಮಹಾರಾಜರಿಗೆಲ್ಲ ಒಟ್ಟು ಸೇರಿಸಿ, ಒಂದು ವರ್ಷಕ್ಕೆ ಕೊಡಬೇಕಾಗಿದ್ದ ಕೇವಲ ಐದು ಕೋಟಿ ರೂಪಾಯಿಗಳ ವರ್ಷಾಸನ ಕೊಡುವ ತ್ರಾಣವಿಲ್ಲದೇ ಹೋಯಿತು (ಸಾಮಾನ್ಯ ಭಾರತೀಯನಿಗೆ ತಲಾ ಹತ್ತು ಪೈಸೆಯ ಮೊತ್ತವೂ ಬೀಳಲಿಲ್ಲ!) ತಮ್ಮನ್ನೇ ನಂಬಿದ ಆದಿವಾಸಿಗಳಿಗೆ ನೆಮ್ಮದಿಯ ಬಾಳನ್ನು ನಡೆಸಿಗೊಟ್ಟ ಪ್ರವೀರಚಂದ್ರರಿಗೆ ದೊರೆತ ನ್ಯಾಯ ಎಂಥಾದ್ದು? ಈ ದಿಸೆಯಲ್ಲಿ ನ್ಯಾಯಮೂರ್ತಿ ಪಾಂಡೆಯವರು ತಮ್ಮ ವರದಿಯಲ್ಲಿ ಹೇಳಿದ ಕೆಲ ಮಾತುಗಳು ಅತಿ ಗಮನೀಯ. ''ಪೊಲೀಸ್ ಪಡೆಯುವರು ಮುಂಜಾಗ್ರತೆಯಿಂದ ವರ್ತಿಸಿದ್ದರೆ, ಪ್ರವೀರಚಂದ್ರರ ಮೃತ್ಯುವನ್ನು ತಪ್ಪಿಸಬಹುದಾಗಿತ್ತು. ಅವರ ಅಕಾಲ ಮರಣ ಅನವಶ್ಯಕವಾಗಿತ್ತು'' ಎಂದು ಅಭಿಪ್ರಾಯಪಟ್ಟಿದ್ದಾರೆ. ಚುನಾವಣೆ ಗೆಲ್ಲಲು ಆತಂಕ ತಂದೊಡ್ಡುವವರನ್ನು ಪರಲೋಕಕ್ಕೆ ಕಳಿಸುತ್ತ ಹೊರಟರೆ, ದೇಶದ ಪ್ರಜಾಪ್ರಭುತ್ವದ ಬೆಲೆ 1966ರ ಈ ಘಟನೆಯ ಹಿನ್ನೆಲೆಯಲ್ಲಿ ಏನು ಉಳಿದಿದೆ? ಎಂದು ಧೀಮಂತರು ತಲೆಕೆಡಿಸಿಕೊಳ್ಳಬೇಕಾದ ಕಾಲ ಬಂದಿದೆ.

# 14. ಆದಿವಾಸಿಗಳ ಬಾಬಾ



ಭಾರತೀಯ ಆದಿವಾಸಿಗಳನ್ನು ಕ್ರೈಸ್ತಧರ್ಮಕ್ಕೆ ಪರಿವರ್ತಿಸಬೇಕೆಂಬ ಏಕಮೇವ ಧ್ಯೇಯದಿಂದ ಮಿಷನರಿಯಾಗಿ ವೆರಿಯರ್ ಎಲ್ವಿನ್‌ರು ಇಲ್ಲಿಗೆ ಆಗಮಿಸಿದವರು. ಹೆಚ್ಚಿನ ಕಾಡು ಜನಾಂಗಗಳು ತೀರಾ ಕೆಳಮಟ್ಟದ ಪಶುಜೀವನ ನಡೆಸುತ್ತಿದ್ದುದರಿಂದ ಅವರಿಗೆ ಅನ್ನ, ಆಶ್ರಯ, ಆಚ್ಛಾದನ, ಆರ್ಥಿಕ ಸಹಾಯಗಳ ಆಸೆ ತೋರಿದಾಕ್ಷಣ ಅವರೆಲ್ಲ ಯೇಸುಕ್ರಿಸ್ತನು ತಮಗಾಗಿ ಜೀವನವನ್ನೇ ಮುಡಿಪಾಗಿ ಇಟ್ಟವನೆಂದು ಒಪ್ಪಿಕೊಂಡು ಅವನ ಧರ್ಮವನ್ನು ಸ್ವೀಕರಿಸಬಹುದೆಂದು ನಂಬಿದ ಎಲ್ವಿನ್‌ರಿಗೆ, ಆದಿವಾಸಿಗಳೊಡನೆ ಹೆಚ್ಚಿನ ಸಂಪರ್ಕ ಬಂದಾಗ ಆಘಾತವಾಯಿತು. ಈ ಕಾಡಿನ ಮಕ್ಕಳು ಜೀವನದ ಬಗ್ಗೆ ತಮ್ಮಿಂದ ಹೆಚ್ಚೇನೂ ಕಲಿಯಬೇಕಾಗಿಲ್ಲವಾದರೂ ಅವರಿಂದ ತಾವು ಜ್ಞಾನೋದಯ ಮಾಡಿಕೊಳ್ಳಬೇಕಾಗಿದೆ! ಎಂದು

ಅರಿಯುವಂತಾಯಿತು. ಯುವ ಆದಿವಾಸಿಯೊಬ್ಬನಿಗೆ ಹೊಸ ಧರ್ಮ ಸ್ವೀಕರಿಸಲು ಸೂಚಿಸಿದಾಗ ಆತ ಮತಾಂತರದ ಬಗ್ಗೆ, ಜೀವನದ ಬಗ್ಗೆ ತಳೆದ ಧೋರಣೆಯನ್ನು ಎಲ್ವಿನ್ನರಿಗೆ ಬೋಧಿಸಿದ. ''ನೀವು 'ಘರೇವಾ' ಪಂಗಡದವರನ್ನು ಕ್ರೈಸ್ತರನ್ನಾಗಿ ಮಾಡಿದಿರಿ. ಆದರೆ ಅವರ ಜೀವನ ಪದ್ಧತಿ ಏನೇನೂ ಬದಲಾಗಲಿಲ್ಲ. ಅವರು ನಮ್ಮವರ ಗೋರಿಗಳನ್ನು ಅಗೆದು ಅದರಲ್ಲಿ ಹುಗಿದ ಸಾಮಗ್ರಿಗಳನ್ನು ಕದಿಯುವುದನ್ನು ನಿಲ್ಲಿಸಿದರೇ? ಧರ್ಮಾಂತರದ ನಂತರವೂ ಮುಂದುವರಿಸಿದ್ದಾರೆ. ನನ್ನ ಪೂರ್ವಜರು ಈ ಕಾಡುಗಳಲ್ಲಿಯೇ ಹುಟ್ಟಿ ಸತ್ತರು. ನಾನೂ ಅದನ್ನೇ ಮಾಡುತ್ತೇನೆ. ಅವರು ಬಿಲ್ಲು-ಬಾಣಗಳಿಂದ ಉದರ ಪೋಷಣೆ ಮಾಡಿಕೊಂಡರು. ನಾನು ಅದನ್ನೇ ಮಾಡುತ್ತಿದ್ದೇನೆ. ಅವರು ಎಂದೂ ಬೇರೆಯವರ ಸಂಪತ್ತಿಗೆ, ಅನ್ಯಾಯದ ಸಿರಿವಂತಿಗೆಗೆ ಕೈಚಾಚಲಿಲ್ಲ. ನಾನೂ ಅವರನ್ನೇ ಅನುಕರಿಸುತ್ತೇನೆ. ತಲೆಮಾರುಗಳಿಂದ ಬಂದ ಧರ್ಮವನ್ನು ಅವರು ಚಾಚೂ ತಪ್ಪದೇ ಪಾಲಿಸಿದರು. ನಾನೂ ಅದನ್ನು ಮುಂದುವರೆಸಿದರೆ ತಪ್ಪೇನು? ರವಿವಾರ ಯಾವ ಕೆಲಸವನ್ನೂ ಮಾಡದೇ ಕ್ರಿಸ್ತನನು ಭಜಿಸಲು ಚರ್ಚಿಗೆ ಹೋಗಬೇಕು ಎನ್ನುತ್ತೀರಿ. ರವಿವಾರ ನೀವು ನೀರು ಕುಡಿಯುವದಿಲ್ಲವೇ? ಊಟ-ನಿದ್ರೆ ಮಾಡುವದಿಲ್ಲವೇ? ಇವೆಲ್ಲವುಗಳಂತೆ ಕೆಲಸ ಮಾಡಿದರೆ ತಪ್ಪೇನು? ನಿಮ್ಮ ಯಾವ ತರ್ಕದಲ್ಲಿಯೂ ನನಗೆ ವಿಶ್ವಾಸವಿಲ್ಲ'' ಎಂದು ಕಡ್ಡಿ ಮುರಿದಂತೆ ಹೇಳಿದಾಗ, ಎಲ್ವಿನ್‌ರಿಗೆ ತಮ್ಮ ಮಿಶನರಿತನದಲ್ಲಿ ಹೆಚ್ಚಿನ ಆಶ್ವಾಸನೆ ಕಾಣಲಿಲ್ಲ. ಆದಿವಾಸಿಗಳ ಮತಾಂತರ ಮಾಡಬಂದವರು, ಆದಿವಾಸಿ ಯುವತಿಯನ್ನು ವರಿಸಿ, ಆ ಜನಾಂಗದವರ ರೀತಿ ನೀತಿಗಳ ಅಭ್ಯಾಸಕ್ಕೆ ಜೀವನ ಮುಡಿಪಾಗಿ ಇಟ್ಟಿದ್ದು ರೋಚಕ ಕಥೆ.

ಎಲ್ವಿನ್ನರ ನಂತರವೂ ಅನೇಕ ಮಿಷನರಿಗಳ ಗುಂಪುಗಳು ಬಸ್ತರ ಆದಿವಾಸಿಗಳ ಮತಾಂತರಕ್ಕಾಗಿ ಯತ್ನಿಸಿದ್ದಾರೆ, ಯತ್ನಿಸುತ್ತಿದ್ದಾರೆ. ಅವರಿಗೆ ಕ್ರಿಸ್ತನ ಕೆಲೆಂಡರ, ಚಿತ್ರಪಟಗಳನ್ನು ಹಂಚಿದಾಗ, ಸಂತೋಷದಿಂದ ಅವನ್ನು ಸ್ವೀಕರಿಸಿ ತಮ್ಮ ಮನೆಗಳ ಅನಾಕರ್ಷಕತೆಯನ್ನು ಮುಚ್ಚಲು ಅವನ್ನು ಉಪಯೋಗಿಸುತ್ತಿದ್ದುದುಂಟು. ಪುಟ್ಟ ಗುಡಿಸಲನ್ನು ಹಜಾಮನ ಅಂಗಡಿಯಾಗಿ ಮಾಡಿದ್ದುಂಟು. ಆಗಾಗ ಮಿಶನರಿಗಳು ಸಮಾಜ ಸುಧಾರಕರ ಹೆಸರಿನಲ್ಲಿ ಕಗ್ಗಹಳ್ಳಿಗಳಿಗೂ ಪ್ರಯಾಣ ಬೆಳೆಸಿ ಅಲ್ಲಿಯ ಮಾರಿಯ, ಮುರಿಯ, ಅಬುಜ ಮಾರಿಯ ಮೊದಲಾದ ಆದಿವಾಸಿ ತಂಡಗಳ ವಿಚಾರ ಸರಣಿಯಲ್ಲಿ ಪರಿವರ್ತನೆ ತರಲು ಯತ್ನಿಸಿದರೂ ನಿರಾಸೆಯೇ ಅವರ ಪಾಲಿಗೆ ಬಂದ ಪ್ರತ್ಯುತ್ತರ. ಮೇಘಾಲಯ, ಅಸ್ಸಾಂಗಳಲ್ಲಿಯ ನಾಗಾ ಮತ್ತು ಇನ್ನಿತರ ಮೂಲ ಬುಡಕಟ್ಟಿನವರು ಸುಲಭವಾಗಿ ಕ್ರಿಶ್ಚಿಯನ್ನರಾದರೂ ಬಸ್ತರದ ಆದಿವಾಸಿಗಳು ತಮ್ಮವರಲ್ಲದವರನ್ನು ನಂಬುವದೇ ಇಲ್ಲ. ನಿಸ್ವಾರ್ಥದಿಂದ ಅವರ ಅಭ್ಯುದಯಕ್ಕಾಗಿ ದುಡಿಯುತ್ತಿರುವೆವೆಂದು ಯಾರೂ ಸಿದ್ಧಮಾಡುವ ಸಾಹಸ ತೋರಿಸಲಿಲ್ಲ! ಅವರಷ್ಟಕ್ಕೆ ಅವರನ್ನು ಬಿಟ್ಟರೆ, ಅವರಷ್ಟು ಸಂತೋಷಪಡುವವರು ಬೇರೊಬ್ಬರಿರಲಿಕ್ಕಿಲ್ಲ. ಈ ಧೋರಣೆಯಿಂದಲೇ ಶತಕಗಳಿಂದಲೂ ಕಾಯ್ದಿಟ್ಟುಕೊಂಡಿರುವ ತಮ್ಮತನ ಅವರದಾಗಿ ಉಳಿಯಲು ಸಾಧ್ಯವಾಗಿದೆ.

ಬಸ್ತರದ ಅರಸು, ಪ್ರವೀರಚಂದ್ರ ಭಾಂಜದೇವನು ತನ್ನ ಬಹುಸಂಖ್ಯಾತ ಪ್ರಜೆಗಳಾಗಿದ್ದ ಆದಿವಾಸಿಗಳ ಆಸೆ-ಆಕಾಂಕ್ಷೆ, ಜ್ಞಾನ-ಅಜ್ಞಾನ, ನಂಬಿಕೆ-ಅಪನಂಬಿಕೆಗಳನ್ನು ಸರಿಯಾಗಿ ಅರಿತು, ಅವರಿಗೆ ಯಾವ ದೃಷ್ಟಿಯಿಂದಲೂ ನೋವಾಗದಂತೆ ಎಚ್ಚರಿಕೆ ವಹಿಸಿದ್ದನು. ಶತಕಗಳಿಂದ ನಡೆದುಬಂದ ರೀತಿ-ನೀತಿ, ಆಚಾರ-ವಿಚಾರ, ಬೇಕು-ಬೇಡಗಳಲ್ಲಿ ಯಾವ ರೀತಿಯಿಂದಲೂ ಹಸ್ತಕ್ಷೇಪ ಮಾಡದೇ ದಂತೆವಾಡದ ದಂತೇಶ್ವರಿಯೇ ತನ್ನ ಮೂಲಕ

ರಾಜ್ಯವಾಳುತ್ತಿದ್ದಾಳೆಂದು ಸಾರಿ ಅವರೆಲ್ಲರ ವಿಶ್ವಾಸ ಗೆದ್ದುಕೊಂಡನು. ಬೇರೆ ಬೇರೆ ತಂಡಗಳಲ್ಲಿ ಹಳ್ಳಿ, ಗೋತ್ರಗಳ ಕುಲದೇವರು ಬೇರೆ ಬೇರೆ ಇದ್ದರೂ ಅವರಿಗೆಲ್ಲ ದಂತೇಶ್ವರಿ ಮಾತೆಯಲ್ಲಿ ಅಚಲವಾದ ವಿಶ್ವಾಸ, ಅಂತೆಯೇ ತೀರ ಚಿಕ್ಕ ಹಳ್ಳಿಗಳಲ್ಲೂ ಈ ದೇವಿಗೆ ದೇವಸ್ಥಾನ ಕಟ್ಟಿ ಆರಾಧಿಸುತ್ತಾರೆ. ಪ್ರಜೆಗಳು ದೇವರ ಸಮಾನವೆಂದು ನಂಬಿದ ಪ್ರವೀರಚಂದ್ರನು, ಅವರನ್ನು ಪೊಲೀಸ್ ಅತ್ಯಾಚಾರದಿಂದ ರಕ್ಷಿಸುವ ಯತ್ನದಲ್ಲಿದ್ದಾಗ ಆಕಸ್ಮಿಕ (ಬುದ್ಧ್ಯಾಪೂರ್ವಕ ?) ಗುಂಡಿಗೆ ಆಹುತಿಯಾಗಿದ್ದರಿಂದ ಎಲ್ಲದಕ್ಕೂ ಅರಸನನ್ನೇ ಅವಲಂಬಿಸಿದ ಆದಿವಾಸಿಗಳಿಗೆ ಆ ನಂತರ ಶೂನ್ಯತ್ವ ಆವರಿಸಿದರೆ ಆಶ್ಚರ್ಯವಿಲ್ಲ.

ಅರಸನ ನಿಧನದ ಕೆಲಕಾಲದ ನಂತರ, ಅಲ್ಲಲ್ಲಿ ಎದ್ದ ಪಿಸುಮಾತುಗಳಿಂದ ಗಾಳಿ ಸುದ್ದಿಗಳಿಂದ ಅವರೆಲ್ಲ ಮತ್ತೆ ಚೇತರಿಸಿಕೊಳ್ಳುವಂತೆ ಆಯಿತು. ಈ ವದಂತಿಯ ಪ್ರಕಾರ ಪೊಲೀಸರು ಗೋಳಿಬಾರ್ ಮಾಡುವ ಮೊದಲೇ ಅದರ ಸುಳಿವು ಹತ್ತಿದ ಪ್ರವೀರಚಂದ್ರನು ಗುಪ್ತಮಾರ್ಗದಿಂದ ಪಲಾಯನ ಮಾಡಿಬಿಟ್ಟಿದ್ದನು. ಮುಂದಾಲೋಚನೆಯಿಂದ, ತನ್ನ ಇರುವಿಕೆಯ ಸುಳಿವು ಗುಪ್ತಚಾರರಿಗೂ ಸಿಗಬಾರದೆಂದು ತನ್ನನ್ನೇ ಹೋಲುವ ಕೃತಕ ಪ್ರವೀರನನ್ನು ನಿರ್ಮಿಸಿದ. ಅಂದು ಗೋಳಿಬಾರಿನಲ್ಲಿ ಮೃತಪಟ್ಟವನು ಕೃತಕ ಪ್ರವೀರನೇ ಹೊರತು ನಿಜವಾದ ಅರಸನಲ್ಲ, ಕೆಲಕಾಲ ತಲೆಮರೆಸಿಕೊಂಡಿದ್ದ ದೊರೆ, ಈಗ ತನ್ನ ಪ್ರಜೆಗಳ ಯೋಗಕ್ಷೇಮ ಗಮನಿಸಿರಬೇಕು. ಅಂತೆಯೇ ಅವರಿಗೆ ಅಭಯವನ್ನು ನೀಡಲು, ತ್ಯಾಗಿಯ ರೂಪದಲ್ಲಿ ಬಸ್ತರದ ಚಪಕಾದಲ್ಲಿ ಬಂದಿಳಿದಿದ್ದಾರೆ. ಆಶೀರ್ವಾದ ಪಡೆಯಲು ಇಚ್ಛಿಸುವವರು ಅವರ ಆಶ್ರಮಕ್ಕೆ ಇರುವೆಗಳಂತೆ ಮುತ್ತುತ್ತಿದ್ದಾರೆ ! ಎಂಬ ಸುದ್ದಿ ಎಲ್ಲೆಡೆ ಹರಡಿತು. ಸುಸಂಸ್ಕೃತರೆನಿಸಿಕೊಳ್ಳುವವರೇ ಪವಾಡ ಪುರುಷರ ಮೂಲಸ್ಥಿತಿಯನ್ನು ಶೋಧಿಸುವ ತೊಂದರೆ ತೆಗೆದು ಕೊಳ್ಳದಿದ್ದಾಗ ಈ ಸರಳ ಜೀವಿಗಳು ಈತನೇ ತಮ್ಮರಸ! ಎಂದು ನಂಬಿದ್ದರಲ್ಲಿ ಆಶ್ಚರ್ಯವಿರಲಿಲ್ಲ.

ಪ್ರವೀರಚಂದ್ರರನ್ನು ಸುಮಾರಾಗಿ ಹೋಲುತ್ತಿದ್ದ ಬಾಬಾ ಬಿಹಾರಿದಾಸನು ಉದ್ದ ಕೂದಲು, ಗಡ್ಡ ಬೆಳೆಸಿ, ಹೋಲಿಕೆ ಸ್ಫುಟವಾಗುವಂತೆ ಮುನ್ನೆಚ್ಚರಿಕೆ ವಹಿಸಿದ್ದ. ಎಲ್ಲ ದೇವದೂತರು, ಪವಾಡ ಪುರುಷರು, ಮಹರ್ಷಿಗಳು, ಸಂತರು, ಭಗವಾನರು ತಾವು ತ್ಯಾಗಿಗಳೆಂದು ಘಂಟಾ ಘೋಷವಾಗಿ ಸಾರುವಂತೆ ಮತ್ತು ಅದಕ್ಕೆ ವ್ಯತಿರಿಕ್ತವಾಗಿ ಐಷಾರಾಮದ ಜೀವನ ನಡೆಸುವಂತೆ, ಬಿಹಾರಿದಾಸನೂ ಅಪವಾದವಾಗಿರಲಿಲ್ಲ. ಆದಿವಾಸಿಗಳ ಅಭ್ಯುದಯವಾಗಬೇಕಾದರೆ ಅವರು ಮದ್ಯ-ಮಾಂಸಗಳ ಸೇವನೆಯನ್ನು ಸಂಪೂರ್ಣವಾಗಿ ನಿಲ್ಲಿಸಬೇಕು. ಹಾಗೆ ಮಾಡಿದವರಿಗೆ ದೀಕ್ಷೆ ಕೊಟ್ಟು ಉತ್ತಮ ಶಿಷ್ಯರಾಗಿ ಮಾಡುವದಾಗಿ ಬಿಹಾರಿದಾಸ ಘೋಷಿಸಿದ. ಈ ಹೇಳಿಕೆ ಹೊರನೋಟಕ್ಕೆ ಅತ್ಯಂತ ಸಭ್ಯವಾಗಿ ಕಂಡರೂ ಅದನ್ನು ಕಾರ್ಯಾಚರಣೆಯಲ್ಲಿ ತಂದ ರೀತಿಯನ್ನು ನೋಡಿದಾಗ ಹೌಹಾರುವಂತಾಯಿತು. ಬಾಬಾನ ದಲಾಲಿಗಳೆಲ್ಲ ಆದಿವಾಸಿ ಹಳ್ಳಿಗಳನ್ನು ಸಂದರ್ಶಿಸಿ ಮಾಂಸಾಹಾರ ತ್ಯಾಜ್ಯವೆಂದರೆ ಕುರಿ, ಕೋಳಿ, ಹಂದಿಗಳನ್ನು ಸಾಕುವದೂ ಪಾಪ; ಬೇಟೆಯೂ ವರ್ಜ್ಯ ಎಂದು ಸಾರಿದರು. ಬಾಬಾನ ಶಿಷ್ಯರಾಗಲು ಹಾತೊರೆಯುವ ಜನರಿಂದ ಪುಕ್ಕಟೆಯಾಗಿಯೋ ಅತ್ಯಂತ ಕಡಿಮೆ ಬೆಲೆಗೋ ಈ ಪ್ರಾಣಿಗಳನ್ನು ತಮಗೇ ಕೊಡುವಂತೆ ನೋಡಿಕೊಂಡು, ಅವುಗಳನ್ನು ಟ್ರಕ್‌ಗಳಲ್ಲಿ ತುಂಬಿ ಜಗದಲಪುರಕ್ಕೋ ರಾಯಪುರಕ್ಕೋ ಸಾಗಹಾಕಿ ಲಕ್ಷಾವಧಿ ರೂಪಾಯಿಗಳನ್ನು ಜೇಬಿಗೆ ಸೇರಿಸಿದರು.

ಚಪಕಾದ ಬಾಬಾನ ಆಶ್ರಮದಲ್ಲಿ ಜಪ-ತಪ ಹೋಮ ಹವನಗಳಿಗೆ ಕೊರತೆಯಿರಲಿಲ್ಲ. ಇವುಗಳನ್ನು ಕಂಡರಿಯದ ಆದಿವಾಸಿಗಳಿಗೆ ತಾವು ದೇವಲೋಕದಲ್ಲಿಯೇ ಇದ್ದೇವೆಂಬ

ಭ್ರಮೆಯಾಯಿತು. ಆದಿವಾಸಿಗಳಿಗೆ ದೀಕ್ಷೆ ಕೊಡುವಾಗ ಅವರ ಕೊರಳಿಗೊಂದು ಮಂತ್ರಿಸಿದ ಕಂಠಿ ಕಟ್ಟುವದರಿಂದ 'ಕಂಠೀಬಾಬಾ' ಎಂದೇ ಬಿಹಾರಿದಾಸನ ಹೆಸರು ಪ್ರಸಿದ್ಧವಾಗಿತ್ತು. ಈ ದೀಕ್ಷಾ ವಿಧಾನವೂ ಲಾಭದಾಯಕವಾಗುವಂತೆ ಯೋಜಿಸಲಾಗಿತ್ತು. ದೀಕ್ಷೆ ಪಡೆಯುವಾತ ಬಾಬಾನಿಗೆ ಎರಡು ಪಾಯಲಿ (ಸುಮಾರು ನಾಲ್ಕು ಕಿಲೋ) ಅಕ್ಕಿ, ಒಂದು ತೆಂಗಿನಕಾಯಿ, ಹತ್ತು ರೂಪಾಯಿ ದಕ್ಷಿಣೆ ಸಲ್ಲಿಸಬೇಕಾಗುತ್ತಿತ್ತು. ಹೊರನೋಟಕ್ಕೆ 'ಇದೇನು ಮಹಾ!' ಅನಿಸಿದರೂ ಬಡ ಆದಿವಾಸಿಗೆ ಮೀರಿದ ವೆಚ್ಚ. ಆದರೂ ಒಂದೂವರೆ ಲಕ್ಷ ಆದಿವಾಸಿಗಳು ಕಂಠಿಬಾಬಾರ ಅನುಯಾಯಿಗಳಾದರೆಂದು ಪರಿಗಣಿಸಿದಾಗ, ಬಾಬಾನು ದೋಚಿಕೊಂಡ ಮೊತ್ತದ ಕಲ್ಪನೆ ಬರುತ್ತದೆ. ಹಣದ ರೂಪದಲ್ಲಿ ಪಡೆದದ್ದೇ ಹದಿನೈದು ಲಕ್ಷ ರೂಪಾಯಿಗಳಾದವು. ತೆಂಗಿನಕಾಯಿಗೆ ಒಂದೂವರೆ ಲಕ್ಷ, ಅಕ್ಕಿಗೆ ಆರು ಲಕ್ಷ ರೂಪಾಯಿಗಳಾದವು. ಇದಲ್ಲದೆ ಪ್ರಾಣಿಗಳನ್ನು ಮಾರಿಬಂದ ಉತ್ಪನ್ನ ಬೇರೆ.

ಇನ್ನಿತರ ಬಾಬಾಗಳಂತೆ ಕಂಠೀಬಾಬಾನಿಗೆ ಗಾಳಿಯಿಂದ ವಿಭೂತಿ, ಮಂಗಳಸೂತ್ರ, ಕೈಗಡಿಯಾರ, ಉಂಗುರಗಳನ್ನು ಪ್ರತ್ಯಕ್ಷಗೊಳಿಸುವ ತೊಂದರೆಯಿರಲಿಲ್ಲ! ಅವನ ಅನುಯಾಯಿಗಳಿಗೆ ಅವುಗಳ ಅವಶ್ಯಕತೆಯೇ ಇರಲಿಲ್ಲ. ಹಣದ ವಿನಿಮಯಕ್ಕಾಗಿ ಕಾಲೇಜು-ಆಶ್ರಮ ಸ್ಥಾಪನೆಯ ಅವಶ್ಯಕತೆಯಿರಲಿಲ್ಲ. ಆದಿವಾಸಿಗಳು ನಿರಕ್ಷರಿಗಳು ತಾನೇ ? ಆದಿವಾಸಿ ಅಭ್ಯುದಯ ಪ್ರತಿಷ್ಠಾನ ಸ್ಥಾಪಿಸಿ ಸರ್ವಾಧಿಕಾರಿಯಾಗಬಹುದಿತ್ತು. ಆದರೆ ಸೇವಾ ಪ್ರತಿಷ್ಠಾನದ ಜನಕ (ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ) ಇನ್ನೂ ಅಜ್ಞಾತವಾಸದಲ್ಲಿಯೇ ಇದ್ದುದರಿಂದ, ಈ ಅದ್ಭುತ ವಿಚಾರ ಹೊಳೆಯದ ಕಂಠೀಬಾಬಾ ತನ್ನ ಸಂಪತ್ತನ್ನು ಬೆಳ್ಳಿ-ಬಂಗಾರ-ವಜ್ರ ಹವಳಾದಿಗಳನ್ನು ಕೊಳ್ಳುವದರಲ್ಲಿ ವಿನಿಯೋಗಿಸಿದ. ಒಂದೂವರೆ ಲಕ್ಷ ಓಟುಗಳನ್ನು ನಿಯಂತ್ರಿಸುವ ಬಾಬಾನ ನೆರವನ್ನು ರಾಜಕಾರಣಿಗಳು ಚುನಾವಣೆಯ ಕಾಲದಲ್ಲಿ ಮಾಡಿಕೊಳ್ಳುವ ಹೊಂಚಿನಲ್ಲಿದ್ದರಿಂದ ಆತನ ಚಟುವಟಿಕೆಗಳ ಮೇಲೆ ಕಣ್ಣಿಡುವ ಸಾಹಸವನ್ನು ಮಾಡಲಿಲ್ಲ.

ಭೋಟಿ ಡೊಂಗರದ ಲೋಕೋಪಯೋಗಿ ಖಾತೆಯ ಪ್ರವಾಸಿ ಗೃಹದ ಮೇಲ್ವಿಚಾರಕ-ಪಾಕಶಾಸಕ-ಬಟ್ಲರ್-ಸೀತಾರಾಮನು ಕಂಠೀಬಾಬಾನ ಅನುಯಾಯಿ. ಈ ಹಲ್ಬೀ ಆದಿವಾಸಿಯ ಹಿಂದಿನ ಹೆಸರು ಚಮಾರಾಮ. ಕಂಠೀಯನ್ನು ಕೊಡುವ ಜೊತೆಗೆ ಆತನಿಗೆ ಸೀತಾರಾಮನೆಂಬ ಹೊಸ ಅಭಿಧಾನವನ್ನೂ ಬಾಬಾನು ಅನುಗ್ರಹಿಸಿದ. ಈ ರೂಢಿಯನ್ನು ಮಿಶನರಿ, ಆರ್ಯ ಸಮಾಜ, ಮತ್ತಿತರ ಮತಾಂತರ ಸಂಸ್ಥೆಗಳಿಂದ ಬಾಬಾನು ಸ್ವೀಕರಿಸಿರಬೇಕು. ಮಾಂಸ-ಮದ್ಯಪಾನದ ಸೇವನೆಯಿಂದ ರೂಢಿಯಿದ್ದ ಅಧಿಕಾರಿಗಳು ಬಂದಿಳಿದಾಗ ಏನು ಮಾಡುತ್ತೀಯಾ ? ಎಂದು ವಿಚಾರಿಸಿದಾಗ, ಕಣ್ಣು ಮೇಲೇರಿಸಿ 'ರಾಮ್ ರಾಮ್' ಎಂದು, ಇಂಥ ಕೆಲಸಗಳನ್ನು ಮಾಡಲು ಸಹಾಯಕನನ್ನು ನೇಮಿಸಿದ್ದೇನೆಂದು ಮಾಂಸದ ಅಡಿಗೆಯ ಸಿದ್ಧತೆಯಲ್ಲಿದ್ದ ಹತ್ತು ವರ್ಷದ ಕುವರನನ್ನು ಬೊಟ್ಟು ಮಾಡಿ ತೋರಿಸಿದ. ಸೀತಾರಾಮನು, ಬಾಬಾ ಹೇಳಿಕೊಟ್ಟ ನೇಮ-ಆಚರಣೆಯನ್ನು ತಪ್ಪದೇ ನಡೆಸುತ್ತಾನೆ. ಎಲ್ಲ ಕೆಲಸಗಳಾದ ಮೇಲೆ ತಣ್ಣೀರಿನ ಸ್ನಾನ ಮಾಡಿ ತುಳಸೀ ಕಟ್ಟೆಗೆ ಪೂಜೆ ಸಲ್ಲಿಸಿದ ನಂತರವೇ ಆಹಾರ ಸೇವಿಸುತ್ತಾನೆ. ಆದಿವಾಸಿಗಳ ಮೇಲೆ ಬಾಬಾನ ವರ್ಚಸ್ಸು ನೋಡಿ ವಿಸ್ಮಯಪಡುವಂತಾಯಿತು.

ಹೆಚ್ಚಿನ ಜನರಿಗೆ ದೀಕ್ಷೆ ಲಭಿಸಿ, ಉತ್ಪನ್ನ ಕಡಿಮೆಯಾದಾಗ ಹೊಸ ಅವಕಾಶಗಳನ್ನು ಹುಡುಕುವ ಯತ್ನ ನಡೆಯಿತು. ದಿನವೆಲ್ಲ ಮೈಮುರಿ ದುಡಿಯುವ ಆದಿವಾಸಿಗಳಿಗೆ, ಮನೆಗೆ ಹಿಂದಿರುಗಿದಾಗ ಕುಡಿಯಲು ಮದ್ಯವಿಲ್ಲ, ಊಟದಲ್ಲಿ ಮಾಂಸವಿಲ್ಲದಿದ್ದಾಗ ಏನೋ ಕಳೆದುಕೊಂಡಂತೆ ಅನಿಸಲಾರಂಭಿಸಿತು. ಈ ಕಠಿಣ ವ್ರತ ತಮ್ಮಿಂದ ಅಸಾಧ್ಯವೆಂದು

ಮನವರಿಕೆಯಾದಾಗ, ಬಾಬಾರಿಗೆ ಈ ವ್ರತದಿಂದ ಮುಕ್ತಗೊಳಿಸುವಂತೆ ಗೋಗರೆದರು. ಕಂಠಿಯನ್ನು ಕಟ್ಟುವಾಗ ಕೊಟ್ಟಷ್ಟೇ ಹಣವನ್ನು ತಪ್ಪು ಕಾಣಿಕೆಯಾಗಿ ಕೊಟ್ಟರೆ ವ್ರತಮುಕ್ತರನ್ನಾಗಿ ಮಾಡುವ ಹೊಣೆಯನ್ನು ಬಾಬಾ ಹೊತ್ತ. ಆದಿವಾಸಿಗಳು ಕುಡಿಯುವದನ್ನು ನಿಲ್ಲಿಸಿದ್ದರಿಂದ ಸೆರೆ-ಸೇಂದಿಗಳ ಗುತ್ತಿಗೆದಾರರು ದಿವಾಳಿ ತೆಗೆಯುವದರಲ್ಲಿದ್ದರು. ಕಂಠಿಬಾಬಾ, ಅವರ ಪಾಲಿಗೂ ದೇವರಾದ. ಅವರ ವ್ಯಾಪಾರದ ಅಭಿವೃದ್ಧಿಗೆ ಕಾರಣನಾಗಿದ್ದರಿಂದ, ಅವರಿಂದಲೂ ಕರ ವಸೂಲಿ ಮಾಡದೆ ಇರಲಿಲ್ಲ!

ಪ್ರತಿ ಚುನಾವಣೆಯಲ್ಲಿಯೂ ಕಂಠೀಬಾಬಾನಿಗೆ ನಮಿಸಿ, ಆಶೀರ್ವಾದ ಪಡೆದು, ನೆರವು ಕೇಳುವದು ಆಡಳಿತ ವರ್ಗದ ಪುಢಾರಿಗಳ ಜಾಯಮಾನಕ್ಕೆ ಒಪ್ಪಿಗೆಯಾಗದಿದ್ದರೂ ಖುರ್ಚಿ ಕಾಯ್ದಿಟ್ಟುಕೊಳ್ಳಲು ಹಾಗೆ ಮಾಡದೇ ಗತ್ಯಂತರವಿಲ್ಲದಾಯಿತು. ಪ್ರವೀರಚಂದ್ರರ ಅಕಾಲ-ಅಕಾರಣ, ಮೃತ್ಯುವಿನಿಂದ ಆದಿವಾಸಿಗಳಲ್ಲಿ ಆದ ಕ್ಷೋಭೆಯ ಆಳವನ್ನು ಅರಿತ ಮುಖಂಡರು ಅಂತಹ ಸಾಹಸಕ್ಕೆ ಕೈಹಾಕಲು ಹಿಂಜರಿಯುತ್ತಿದ್ದುದರಿಂದ ಬಾಬಾನ ಚಟುವಟಿಕೆಗಳು ನಿರಾತಂಕವಾಗಿ ಮುಂದುವರಿದವು. ಆದರೆ ಅವನ ವರ್ಚಸ್ಸನ್ನು ಕಡಿಮೆ ಮಾಡಲು ಹೊಂಚು ಹಾಕಿದ್ದ ರಾಜಕಾರಣಿಗಳಿಗೆ ತುರ್ತುಪರಿಸ್ಥಿತಿ ದೇವರ ದೇಣಿಗೆಯಾಗಿ ಬಂದಿತು. ಆದಾಯಕರ ಖಾತೆಯ ಮುಖವಾಡ ಧರಿಸಿ ಚಪಕಾ ಆಶ್ರಮದ ಮೇಲೆ ದಾಳಿ ನಡೆಸಿದಾಗ ಅಲ್ಲಿಯ ಐಶ್ವರ್ಯ ಕಂಡು ಆಲಿಬಾಬಾನೂ ಆಶ್ಚರ್ಯಚಕಿತನಾಗುತ್ತಿದ್ದಾನೋ ಏನೋ! ಭಕ್ತರಿಗೆ ಮೋಸಮಾಡಿ ಧನಸಂಗ್ರಹ ಮಾಡಿದ ಆಪಾದನೆ ಹೊರಿಸುವ ಬದಲಾಗಿ ಸರಕಾರಕ್ಕೆ ಆದಾಯಕರ ಕೊಡದೇ, ಸಂಪತ್ತು ಕೂಡಿ ಹಾಕಿದ್ದಕ್ಕಾಗಿ, ಅದನ್ನೆಲ್ಲ ಜಪ್ತಿ ಮಾಡಿದ್ದಲ್ಲದೇ ಬಾಬಾನನ್ನು ಬಂಧಿಸಿ ಕಾರಾಗೃಹ ದಲ್ಲಿರಿಸಿದರು. ಅವನು ತಿರುಗಿ ಕೀರ್ತಿಯನ್ನು ಪಡೆಯದಂತೆ ಅವನ ಪೂರ್ವೇತಿಹಾಸದ ಸಂಶೋಧನೆಯನ್ನು ಗುಪ್ತಚಾರ ಪಡೆ ವಹಿಸಿಕೊಂಡಿತು. ಅವನು ಮೂಲತಃ ಆಂಧ್ರದ ಕಡೆಯವನೆಂದೂ, ಆದಿವಾಸಿಗಳೂ ಕೀಳು! ಎಂದು ಪರಿಗಣಿಸುವ ದೋಮ ಜಾತಿಯವನೆಂದೂ, ಆದಿವಾಸಿಗಳು ಪ್ರವೀರಚಂದ್ರರಲ್ಲಿಟ್ಟಿದ್ದ ಪ್ರೀತಿ-ವಿಶ್ವಾಸಗಳನ್ನು ತನ್ನ ಲಾಭಕ್ಕಾಗಿ ಬಳಸಿಕೊಂಡನೆಂಬ ಸಂಗತಿ, ಎಲ್ಲ ವೃತ್ತಪತ್ರಗಳಲ್ಲಿ ಬರುವಂತೆ ನೋಡಿಕೊಂಡರು. ಆದರೆ ಓದು-ಬರೆಹ ಬಾರದ ಆದಿವಾಸಿಗಳಿಗೆ ಅದರಿಂದ ಹೆಚ್ಚಿನ ಅಂತರ ಬೀಳಲಿಲ್ಲ.

ಹೊಸ ಸರಕಾರ, ಕಂಠೀಬಾಬಾನನ್ನು ಬಿಡುಗಡೆ ಮಾಡಿದರೂ ಹಿಂದಿನ ಆಟ ಪ್ರಾರಂಭಿಸಲು ಧೈರ್ಯ ಸಾಲದೇ ಆತ ಹೊಸ ಹಂಚಿಕೆ ಹೂಡಿದ. ಬಸ್ತರದ ಆದಿವಾಸಿಗಳು ತಮ್ಮ ಪ್ರತಿದಿನದ ಪ್ರತಿಯೊಂದು ಸಾಮಗ್ರಿಗಾಗಿ ಕಾಡನ್ನೇ ಮೊರೆಹೊಕ್ಕಿದ್ದಾರೆ. ಸಾಲ-ಸಾಗವಾನಿಗಳಂತಹ ಇಮಾರತಿ ಕಟ್ಟಿಗೆಗೆ ವಿಪರೀತ ಬೆಲೆಯಾಗಿದ್ದು ದಿಲ್ಲಿಯಿಂದ ಕಲಕತ್ತಾದವರೆಗೆ ಬೇಡಿಕೆಯಿದ್ದುದರಿಂದ ಗುತ್ತಿಗೆದಾರರು ದೊಡ್ಡ ಪ್ರಮಾಣದಲ್ಲಿ ಕಾಡನ್ನು ಕಡಿಯುತ್ತಿದ್ದಾರೆ. ಹೀಗೆ ಮುಂದುವರಿಯಗೊಟ್ಟರೆ ಅನ್ನವಿಲ್ಲದೇ ಬರೀ ಹೊಟ್ಟೆಯಲ್ಲಿ ಮಲಗಬೇಕಾದ ದಿನಗಳು ದೂರವಿಲ್ಲ ಎಂದು ಎಚ್ಚರಿಸಿ ಆದಿವಾಸಿಗಳ ಮುಖಂಡರನ್ನು ಸಂಘಟಿಸಿದ್ದಾನೆ. ಕೊಂಡಾಗಾಂವ ತಹಶೀಲವನ್ನು ವಿವಿಧ ಭಾಗಗಳಾಗಿಮಾಡಿ, ಅವುಗಳ ಆಡಳಿತ, ತಾನೇ ನೇಮಿಸಿದ ಮಾಂಝಿಗಳಿಗೆ ಒಪ್ಪಿಸಿದ್ದಾನೆ. ಅವರು ನ್ಯಾಯದಾನ, ಕರವಸೂಲಿಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಜನರಿಗೆ ಪರಿಹಾರ ಧನವನ್ನು ಕೊಡುತ್ತಿದ್ದಾರೆ. ಮೊದಲು ಮರ ಕಡಿಯದಂತೆ ಆದಿವಾಸಿಗಳು ಮರಗಳನ್ನು ತಬ್ಬಿ ಹಿಡಿಯುವ 'ಚಿಪ್ಕೋ' ತರಹದ ಚಳವಳಿ ಹರಡುವಂತೆ ಯತ್ನ ನಡೆದಿದೆ. ಗುತ್ತಿಗೆದಾರರು, ಅರಣ್ಯಾಧಿಕಾರಿಗಳು ತಮ್ಮ ಹಳ್ಳಿಗಳಲ್ಲಿ ಕಾಲಿಡದಂತೆ ಎಚ್ಚರಿಸುತ್ತಿದ್ದಾರಲ್ಲದೇ, ಬಂದವರನ್ನು

ಶಿಕ್ಷಿಸುವುದಕ್ಕಾಗಿ ಬಿಲ್ಲು-ಬಾಣಗಳೊಂದಿಗೆ ಅಲೆಯುತ್ತಿದ್ದಾರೆ. ದೂರದ ಆದಿವಾಸಿಗಳೊಡನೆ ಸಂಪರ್ಕ ಬೆಳೆಸಲು ಕಹಳೆ ಊದುತ್ತಾರೆ.

ಈ ಹೊಸ ಉಪಟಳದಿಂದ ಬೇಸತ್ತ ಸರಕಾರಿ ಅಧಿಕಾರಿಗಳು ಕಂಠಿಬಾಬಾನಿಗೆ ಹಿಂಸೆ ಕೊಡಲಾರಂಭಿಸಿದ್ದರಿಂದ ಕಳೆದ ಒಂದು ವರ್ಷದಿಂದ ಅವನು ತನ್ನ ಕಾರ್ಯಾಲಯವನ್ನು ಓಡಿಸಾದ ರಾಯಗಡಕ್ಕೆ ಸ್ಥಳಾಂತರಿಸಿದ್ದಾನೆ. ಇಂದಿಗೂ ಅವನಿಗೆ ಸುಮಾರು 50 ಸಾವಿರ ಅನುಯಾಯಿಗಳಿದ್ದಾರೆಂದರೆ ಅವನ ವರ್ಚಸ್ಸಿನ ಕಲ್ಪನೆ ಬಾರದಿರದು. ಕಂಠಿಬಾಬಾನು ಹಾಕಿಕೊಟ್ಟ ಮೇಲುಪಂಕ್ತಿಯನ್ನು ಅನುಸರಿಸಿ, ಆಂಧ್ರಪ್ರದೇಶದ ಯುವ ನಕ್ಸಲೀಯರು ಬಿಜಾಪುರ ತಹಶೀಲದಲ್ಲಿಯ ಆದಿವಾಸಿಗಳನ್ನು ಸುಲಿಯಹತ್ತಿದ್ದಾರೆ. ತಮಗೆ ಸಲ್ಲಬೇಕಾದ ಕಾಳು-ಕಡಿಯೊಂದಿಗೆ ತಲಾ ಒಂದು ರೂಪಾಯಿಯನ್ನು ವಸೂಲಿ ಮಾಡುತ್ತಿದ್ದಾರೆ. ಜೊತೆಗೆ ಪೊಲೀಸರಿಗೇನಾದರೂ ತಮ್ಮ ಸುಳಿವು ಕೊಟ್ಟರೆ ಹಳ್ಳಿಯನ್ನೇ ಇಲ್ಲದಂತೆ ಮಾಡುತ್ತೇವೆ ಎಂದು ಬೆದರಿಕೆ ಬೇರೆ. ಈ ಉಭಯ ಸಂಕಟದೊಳಗೆ ಸಿಕ್ಕ ಆದಿವಾಸಿಗಳು ಕಂಗಾಲಾಗಿದ್ದಾರೆ. ಸರಕಾರಿ ಅಧಿಕಾರಿಗಳು ರಾಜ್ಯದ ನಾಯಕರು, ಅರಣ್ಯದ ಗುತ್ತಿಗೆದಾರರು, ಕಂಠೀಬಾಬಾ, ಯುವ ಜನರೆಲ್ಲ ಸೇರಿ ಆದಿವಾಸಿಗಳನ್ನು ಸುಲಿದರೆ ಅವರನ್ನು ಸಂರಕ್ಷಿಸುವವರು ಯಾರು ?

# 15. ಮಾರಿಯಾ ಜನರ ನಗೆ ನಲಿವಿನ ಬದುಕು



ನೃತ್ಯ, ಮಾರಿಯರ 'ಘೋಟುಲ್' ದಲ್ಲಿಯ ಒಂದು ಮುಖ್ಯವಾದ ಚಟುವಟಿಕೆ. ಪ್ರತಿ ರಾತ್ರಿ ದೈನಂದಿನ ಚಟುವಟಿಕೆಗಳು ಮುಗಿದ ನಂತರ ಮಲಗುವ ಮುನ್ನ ಕೆಲ ಹೊತ್ತಾದರೂ ನೃತ್ಯದ ತಾಲೀಮು ಮಾಡುವದಕ್ಕಾಗಿ ಮೀಸಲಿಡಲಾಗುತ್ತದೆ. ಢೋಲಿನ ಮೇಲೆ ಕೈಯಾಡಿಸಿ ಕೊಳಲಿನ ನಾದ ಹೊರಡಿಸಿದರೆಂದರೆ, ಯುವಕ-ಯುವತಿಯರು ಧಾವಿಸಿ, ಗ್ರಾಮದ ಬೈಲಿನಲ್ಲಿ ಇಳಿಯುತ್ತಾರೆ. ಇಬ್ಬರಿಂದ ಹಿಡಿದು ಇನ್ನೂರು ಜನ ಇದ್ದರೂ ನರ್ತಿಸುವ ಕಲೆಯನ್ನು ಅವರು ಕರಗತ ಮಾಡಿಕೊಂಡಿದ್ದಾರೆ. ನರ್ತಕರ ಅಭಾವವಿದ್ದಾಗ ಮುಂಭಾಗದಲ್ಲಿ ಯುವಕರು, ಅವರನ್ನು ಹಿಂಬಾಲಿಸಿ ಹೆಂಗಳೆಯರು, ಮುಂದಿನವರು ಹಾಡಿದ್ದನ್ನೇ ಪುನರುಚ್ಚರಿಸುತ್ತ ಕುಣಿಯುವರು. ಕಿರಿದಾದ ಹೆಜ್ಜೆ ಹಾಕುತ್ತ ಮುಂದೆ ಹೋಗಿ ನಂತರ ಹಿಂಗಾಲು ಹಾಕಿ

ಹೊರಟಲ್ಲಿ ಬರುವದು ಅವರ ವಾಡಿಕೆ. ಪ್ರಾರಂಭದಲ್ಲಿ 'ಲಿಂಗೊ' ದೇವರನ್ನು ಕುರಿತು ಹಾಡುವದು ಸಂಪ್ರದಾಯ. ನಂತರ ಉಳಿದ ಹಾಡುಗಳನ್ನು ಹಾಡುವರು. ತೀರ ಕ್ಷೀಣ ಸ್ವರದಲ್ಲಿ ಪ್ರಾರಂಭಿಸಿ ನಡುವೆ ಒಮ್ಮೆಲೇ ತಡೆ ಹಾಕಿ, ತಿರುಗಿ ಹಾಡುವದರಿಂದ, ಮಲೆನಾಡಿನ ತುಂತುರುಮಳೆ ಮಾಡಿನ ಮೇಲೆ ಬಿದ್ದು ಹೊರಡಿಸುವ ನಾದ ನೆನಪಿಗೆ ಬರುತ್ತದೆ. ನರ್ತಕರು ಬಹು ಸಂಖ್ಯೆಯಲ್ಲಿ ಇದ್ದರೆ ಗಂಡಸರು ಅರ್ಧ ವರ್ತುಲಾಕಾರದಲ್ಲಿ (ವರ್ತುಲ ನೃತ್ಯ), ಯುವತಿಯರು ಇನ್ನೊಂದು ಅರ್ಧದಲ್ಲಿ ನಿಂತು ವರ್ತುಲ ಪೂರ್ಣಗೊಳಿಸಿ ನರ್ತಿಸುತ್ತಾರೆ. ನೃತ್ಯಗಾರರು ತಮ್ಮ ಬಲದಿಕ್ಕಿಗೆ ಹೆಜ್ಜೆ ಹಾಕುವದರಿಂದ ಈ ವರ್ತುಲ ಗಡಿಯಾರದ ಚಲನೆಯ ವಿರುದ್ಧ ದಿಕ್ಕಿಗೆ ತಿರುಗುತ್ತದೆ. ಹಿರೆ ಮಾಣಿಯನ್ನು ಯುವ, ಯುವತಿ, ನೃತ್ಯಗಾರರು ವರ್ತುಲಾಕಾರದಲ್ಲಿ ಸುತ್ತುವರಿದಾಗ ಅವನು ಮಾಂದ್ರಾ (ಮೃದಂಗ) ನುಡಿಸುತ್ತಾ, ನರ್ತಿಸುತ್ತಾ, ಮಾರ್ಗದರ್ಶನ ಮಾಡುವನು.

ತುಂಬ ಸಮಯದ ತನಕ ಸತತವಾಗಿ ನರ್ತಿಸುವದರಿಂದ ಮಾರಿಯರ ಕುಣಿತವೆಂದರೆ ಕಠಿಣ ವ್ಯಾಯಾಮವಿದ್ದಂತೆ. ಈ ಕಲೆಯಲ್ಲಿ ಸಂಪೂರ್ಣ ಸಿದ್ಧಿ ಸಾಧಿಸಿದ ಹೊರತು ಘೋಟುಲ್‌ನ ಹೊರಗೆ ನೃತ್ಯ ಮಾಡಕೂಡದೆಂಬ ಕಡ್ಡಾಯವಿದೆ.

ಸಾಮಾನ್ಯವಾಗಿ ಸಿಂಗರಿಸಿಕೊಂಡ ವಾದ್ಯಗಾರರು, ಹೆಂಗಳೆಯರು, ಜೊತೆಗೂಡಿ ನರ್ತಿಸುವದು ವಾಡಿಕೆಯಾದರೂ ಅಲಂಕಾರ-ವಾದ್ಯಗಳಿಲ್ಲದಿದ್ದರೂ ಕುಣಿಯಬಲ್ಲರು. ನೃತ್ಯಾಲಂಕಾರಗಳನ್ನು ತಮ್ಮ ಅಮೂಲ್ಯ ಆಸ್ತಿಯೆಂಬಂತೆ ಬಹಳ ಜೋಪಾನವಾಗಿ ಸಂಗ್ರಹಿಸಿಡುತ್ತಾರೆ. ವಾದ್ಯಗಳಿಗೂ ಪೂಜೆ ಸಲ್ಲಿಸುವ ಪರಿಪಾಠ ನಡೆದುಬಂದಿದೆ. ನೆರೆಹೊರೆಯ ಹಳ್ಳಿಯಲ್ಲಿ ಎಲ್ಲಿಯೇ ಹಬ್ಬ-ಜಾತ್ರೆಯಿರಲಿ, ಮದುವೆಯಿರಲಿ, ಘೋಟುಲದ ತಂಡ, ಅಲ್ಲಿಗೆ ಹೋಗಿ ನರ್ತಿಸಿ, ಆಹಾರ-ಮದ್ಯಗಳನ್ನು ಪಡೆಯುವರು. ಬೇರೆ ಊರಿಗೆ ಹೋಗಬೇಕಾದರೆ, ನಸುಕಿನಲ್ಲಿಯೇ ಎದ್ದು ತಮ್ಮ ಅಲಂಕಾರದ ಸಾಮಾನುಗಳಿದ್ದ ಬೆತ್ತದ ಬುಟ್ಟಿಗಳನ್ನು ಹೊತ್ತು ಹೊರಡುತ್ತಾರೆ. ಶಾಂತವಾದ ನದಿಯ ದಡದಲ್ಲಿ ಇಲ್ಲವೇ ಹೆಮ್ಮರವೊಂದರ ಆಶ್ರಯದಲ್ಲಿ ಬೀಡು ಬಿಟ್ಟು ಮದುವೆ ಮನೆಯನ್ನು ಅಣಿಗೊಳಿಸುವದರಲ್ಲಿ, ಇತರ ಕೆಲಸಗಳಲ್ಲಿ ಸಹಾಯ ಮಾಡಿ ಆಹಾರ-ಸೆರೆಗಳನ್ನು ಪಡೆದು, ಬೀಡಿಗೆ ಹಿಂದಿರುಗಿ, ಅಡಿಗೆ ಮಾಡಿ ಉಂಡು, ಹರಟೆ, ಹಾಡು, ತಮಾಷೆಗಳಲ್ಲಿ ಕಾಲ ಕಳೆಯುವರು. ಈ ಚಟುವಟಿಕೆಗಳಲ್ಲಿ ಸ್ತ್ರೀಯರೂ ನಿಸ್ಸಂಕೋಚವಾಗಿ ಭಾಗವಹಿಸುತ್ತಾರೆ. ಬೇರೆ ಬೇರೆ ಘೋಟುಲ್‌ದ ತಂಡಗಳು ಆಗಮಿಸಿದಾಗ ಅವರೊಡನೆ ಗೆಳೆತನ ಬೆಳೆಸಿ ಒಂದಾಗಿ ನಡೆದುಕೊಳ್ಳುವರು.

ಸುಗ್ಗಿ ಹಬ್ಬದ ಕುಣಿತವೆಂದರೆ, ಕಾಡಿನ ಎಳೆಯರಿಗೆ ಶಾಲೆ-ಕಾಲೇಜುಗಳ ವಾರ್ಷಿಕೋತ್ಸವ ಇದ್ದಂತೆ. ಆ ದಿನವನ್ನು ಘೋಟುಲದ ಸದಸ್ಯರು ಸದಾಕಾಲ ಎದುರು ನೋಡುತ್ತಿರುತ್ತಾರೆ. 30-40 ಕಿಲೋಮೀಟರ್ ದೂರದಿಂದಲಾದರೂ ಭಾಗವಹಿಸಲು ಸಮಾರಂಭದ ಸ್ಥಾನಕ್ಕೆ ನಡೆದುಬರುತ್ತಾರೆ. ತೀರ ತಿಳಿ ಹೃದಯದ ತರುಣ ಜನಾಂಗ, ಗಂಡು-ಹೆಣ್ಣೆಂಬ ಭೇದಭಾವವಿಲ್ಲದೆ ನಗುತ್ತ, ಕಲೆಯುತ್ತ ಹಾಡುತ್ತ ಕುಣಿಯುತ್ತ ದೂರದ ಹಾದಿ ತುಳಿದು ಬರುವದನ್ನು ನೋಡುವದೇ ಒಂದು ಆನಂದ. ಅವರೆಲ್ಲ ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಬೆಳೆದು ಬಂದವರಾದ್ದರಿಂದ ಪಾಲಕರ ಮಾರ್ಗದರ್ಶನವಿಲ್ಲದೆ ತಮ್ಮ ಚಟುವಟಿಕೆಗಳನ್ನೆಲ್ಲ ಸಾಂಘಿಕ ತಳಹದಿಯ ಮೇಲೆಯೇ ರೂಪಿಸಿಕೊಳ್ಳುತ್ತಾರೆ. ಪ್ರತಿ ವ್ಯಕ್ತಿಯೂ ತಾನು ಘೋಟುಲದ ಒಂದು ಅಂಗವೆಂದು ನಂಬಿರುವದರಿಂದ ಸ್ವಾರ್ಥಕ್ಕೆ, ಸಂಕುಚಿತ ವಿಚಾರಕ್ಕೆ ಆಸ್ಪದವಿಲ್ಲ. ನರ್ತನದ ಸ್ಥಳಕ್ಕೆ ಆಗಮಿಸಿದ ನಂತರ ತಮ್ಮೆಲ್ಲ ಸಾಮಾನು-ಸರಂಜಾಮುಗಳನ್ನು ಗಿಡ-ಮರಗಳ

ಆಶ್ರಯದಲ್ಲಿ ಇಟ್ಟು ವಿರಮಿಸುವರು. ಹೊಸಬರ ಪರಿಚಯ ಮಾಡಿಕೊಳ್ಳುತ್ತ, ಪರಿಚಿತರೊಡನೆ ವಿಚಾರ ವಿನಿಮಯ, ನಗೆ ಚಾಟಿಕೆ ನಡೆಸುವರು. ಅವಶ್ಯಕ ವಸ್ತುಗಳ ಕೊಡು-ಕೊಳ್ಳಿಯನ್ನು ನಡೆಸುವರು.

ಸುಗ್ಗಿ ಹಬ್ಬ, ಮಾರಿಯ ಆದಿವಾಸಿಗಳು ವಾಸಿಸುವ ಎಲ್ಲ ಕಡೆ ಪ್ರಚಲಿತವಿದ್ದರೂ ಅವುಗಳಲ್ಲಿ ಕೆಲವು ಮಾತ್ರ ಹೆಸರುವಾಸಿಯಾಗಿವೆ. ಬಸ್ತರ್ ಜಿಲ್ಲೆಯ ನಾರಾಯಣಪುರ, ತಾಲೂಕಿನ ಮುಖ್ಯ ಊರಾಗಿದ್ದರಿಂದ ಮತ್ತು ಅದರ ನಾಲ್ಕೂ ಕಡೆ ಗ್ರಾಮಗಳ ಘೋಟುಲ್‌ಗಳು ಇದ್ದುದರಿಂದ ಅಲ್ಲಿಯ 'ಮೇಲಾ' (ಜಾತ್ರೆ) ಖ್ಯಾತಿ ಪಡೆದಿದೆ. ಕೊಂಡಾಗಾಂವ್, ದೌಡಾಯಿ, ಭೋಟಿ ಡೊಂಗರಗಳ ಸುಗ್ಗಿ ಹಬ್ಬಗಳು ನಾರಾಯಣಪುರಕ್ಕಿಂತ ಕಿರು ಪ್ರಮಾಣದಲ್ಲಿ ನಡೆಯುವಂಥವು.

ದೇವರ ಹೆಸರಿನಲ್ಲಿ ನಡೆಯುವ ಈ ನೃತ್ಯಗಳು ರಾತ್ರಿ ಸುಮಾರು ಒಂಬತ್ತು ಗಂಟೆಗೆ ಪ್ರಾರಂಭವಾಗಿ, ಬೆಳಗಾಗುವ ತನಕ ನಡೆಯುವಂಥವು. ಸೂರ್ಯದೇವನು ದಿನದ ಕರ್ತವ್ಯ ನಿರ್ವಹಿಸಿ, ಗೃಹಾಭಿಮುಖಿಯಾದಾಗ, ನರ್ತಕರು ಚುರುಕಾಗುತ್ತಾರೆ. ತಮ್ಮ ಕವಡೆ- ಹರಳುಗಳ ಅಲಂಕಾರಗಳ ಬುಟ್ಟಿಯನ್ನು ಎಳೆದು, ಹಳೆಯದೋ, ಒಡೆದದ್ದೋ ಕನ್ನಡಿಯೆದುರು ಕುಳಿತು ಅಲಂಕರಿಸಿಕೊಳ್ಳುವರು. ಕೆಲವರು ಹತ್ತಿರದ ಹೊಂಡ ಕೆರೆಗಳಿಗೆ ಹೋಗಿ ಕೈ-ಕಾಲು ಮುಖ ತೊಳೆದುಕೊಂಡರೆ, ಇನ್ನೂ ಕೆಲವರು ಗಡ್ಡ-ಮೀಸೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುವರು. ನಂತರ ಬೇಕಾದ ಅಲಂಕಾರದ ಒಡವೆಗಳನ್ನು ತೊಟ್ಟುಕೊಳ್ಳುವರು. ಯಕ್ಷಗಾನ ಮೇಳದವರಂತೆ ಪ್ರತಿಯೊಬ್ಬ ನರ್ತಕನೂ ಹೇಗೆ ಅಲಂಕರಿಸಿಕೊಳ್ಳಬೇಕೆಂದು ತಾನೇ ನಿರ್ಧರಿಸುತ್ತಾನೆ.

ಮಾರಿಯ ಗಂಡಸರಿಗೆ ಉದ್ದವಾಗಿ ಕೂದಲು ಬೆಳೆಸುವದೆಂದರೆ ತುಂಬ ಇಷ್ಟ. ಕೆಲವರು ಮುಂದಲೆಯ ಕೂದಲಷ್ಟೇ ಕತ್ತರಿಸಿ ಹಿಂದಿನದನ್ನು ಉದ್ದ ಬೆಳೆಸುತ್ತಾರೆ. ಕೂದಲನ್ನು ನಡುವೆ ಬೈತಲೆ ತೆಗೆದು ಗಾಳಿಯಲ್ಲಿ ತೂರಬಿಡಬಹುದು. ಇಲ್ಲವೇ ಹಿಂದಕ್ಕೆ ಬಾಚಿ ಮುಡಿಕಟ್ಟಬಹುದು. ಮುಡಿ ಎತ್ತರವಾಗಿ ಹೊರಗೇ, ಕಾಣುವಂತೆ ರುಮಾಲನ್ನು ಸುತ್ತಿಕೊಳ್ಳುವರು. ನೃತ್ಯ ಮಾಡುವಾಗ ರುಮಾಲು ಬಿಚ್ಚಿಕೊಳ್ಳದಂತೆ ನೂಲಿನಿಂದಾಗಲೀ, ಕ್ಲಿಪ್‌ಗಳಿಂದಾಗಲೀ ಭದ್ರಗೊಳಿಸುವರು. ಕೆಂಪು-ಬಿಳಿ ಮಣಿಗಳ ಸರಗಳನ್ನು, ಕವಡೆ ಸರಗಳನ್ನು ಎಡ, ಬಲಭಾಗಗಳಿಂದ ತೂಗಿಬಿಡುವರು. ಹಲವರ ಬಳಿ ಇಂಥ 3-4 ಸರಗಳು ಇದ್ದರೆ, ಕೆಲವರ ಬಳಿ ಇಪ್ಪತ್ತರಿಂದ ಮೂವತ್ತು ಸರಗಳು ಇರುತ್ತವೆ.

ನರ್ತಕರು, ತಲೆಯ ಹಿಂಭಾಗವನ್ನು ಅತಿ ಜಾಗರೂಕತೆಯಿಂದ ಸಿಂಗರಿಸಿಕೊಂಡಿರುತ್ತಾರೆ. ಕಾಡು ಹಂದಿಯ ಜೋಡಿ ಕೋರೆ ಹಲ್ಲುಗಳನ್ನು ವರ್ತುಲಾಕಾರದಲ್ಲಿ ರುಮಾಲಿಗೆ ಜೋಡಿಸಿಕೊಂಡಿರುತ್ತಾರೆ. ಈ ಕೋರೆಗಳಿಗೆ ಕೆಂಪು, ಬಿಳಿ, ಹಳದಿ, ನೀಲಿ ಮಣಿಸರಗಳನ್ನು ತೂಗಬಿಡುತ್ತಾರೆ. ಸರಗಳ ತುದಿಗೆ ಕೆಂಪು ವರ್ಣದ ಗೊಂಡೆಗಳು ಇರುವದರಿಂದ ಇನ್ನೂ ಹೆಚ್ಚು ಆಕರ್ಷಕವಾಗಿ ಕಾಣುತ್ತದೆ. ಈ ಅಲಂಕಾರಕ್ಕೆ ಕಲಶವಿಟ್ಟಂತೆ ಗರಿಗಳ ತುರಾಯಿ ಕಟ್ಟಿ ಜೋಡಿಸುತ್ತಾರೆ. ತೀರಾ ವಿರಳವಾದ ಹಕ್ಕಿಗಳ ಗರಿಗಳೂ ಇದ್ದು, ಅವನ್ನು ಬಲು ಜೋಪಾನವಾಗಿ ಕಾದಿರಿಸುತ್ತಾರೆ. ಆದಿವಾಸಿಗಳ ಲೆಕ್ಕಾಚಾರದಲ್ಲಿ ಕೂಡ, ಇಂಥ ಗರಿಗೊಂಚಲುಗಳು ನೂರಾರು ರೂಪಾಯಿ ಬೆಲೆ ಬಾಳುವಂಥವು. ಇಷ್ಟು ಬೆಲೆ ಬಾಳುವ ಗರಿ-ಗೊಂಚಲು ಇಲ್ಲದವರು ಇತರ ಹಕ್ಕಿಗಳ ಗರಿಗಳನ್ನು ಧರಿಸುತ್ತಾರೆ. ಕೆಲವರು ನವಿಲು ಗರಿಗಳ ತುರಾಯಿ ಧರಿಸುತ್ತಾರೆ. ಹೆಚ್ಚು ಆಭರಣಗಳಿಲ್ಲದವರು ಆಕರ್ಷಣೆಗಾಗಿ ಗೊಂಡೆ ಹೂಗಳನ್ನೇ ಮುಡಿಯುವದುಂಟು. ಕೆಲವರು ಕಿರಿಗಾಜು ಕನ್ನಡಿಗಳನ್ನು ರುಮಾಲಿಗೆ ಜೋಡಿಸಿಕೊಂಡರೆ ಇನ್ನೂ ಕೆಲವರು ಇಳಿಬಿಟ್ಟ ಕೂದಲಿಗೆ ಬಾಚಣಿಗೆಯನ್ನು ಸಿಕ್ಕಿಸಿಕೊಂಡಿರುತ್ತಾರೆ.

ಕೊರಳಿಗೆ ಎರಡರಿಂದ ಇಪ್ಪತ್ತರವರೆಗೆ ವಿವಿಧ ಬಣ್ಣಗಳ ಮಣಿಗಳ ಸರಗಳನ್ನು ತೊಡುವರಲ್ಲದೆ ಹೆಂಗಳೆಯರು ತೊಡುವಂತಹ ಬೆಳ್ಳಿಯ ಗೋಟುಗಳನ್ನು ಧರಿಸುವರು. ಕೆಲವರು ಯಕ್ಷಗಾನ ಪಾತ್ರಧಾರಿಗಳಂತೆ ರಬ್ಬಾದ ಕಂಠದ ಅಲಂಕಾರಗಳನ್ನೂ ಧರಿಸುವರು. ನೃತ್ಯಕ್ಕೆ ಹಿಮ್ಮೇಳ ಪೂರೈಸುವ ಢೋಲುಗಳನ್ನು ಮಾರಿಯರು ಸೊಂಟಕ್ಕೇ ಬಿಗಿದುಕೊಳ್ಳುವರು. ಭಾರವಾದ ಗೆಜ್ಜೆ, ಗಂಟೆಗಳನ್ನು ಹೊತ್ತು ನರ್ತಿಸಬೇಕಾಗಿರುವದರಿಂದ ಅವನ್ನು ಸಮತೋಲ ಕಾದು ಕುಣಿಯಲು ಸಾಧ್ಯವಾಗುವಂತೆ ಹತ್ತು ಸಲ ಕಟ್ಟಿ, ಬಿಡಿಸಿ, ಮತ್ತೆ ಕಟ್ಟಬೇಕಾಗುವದು. ಈ ಗೆಜ್ಜೆ ಸೊಂಟ ಪಟ್ಟಿಗಳನ್ನೆಲ್ಲ ಗಟ್ಟಿಯಾದ ದಪ್ಪ ಹುರಿ ಇಲ್ಲವೇ ತೊಗಟೆಗೆ ಪೋಣಿಸಿ ಇಡುವದರಿಂದ ಹರಿದು ಬೀಳುವ ಸಂಭವ ಇರುವದಿಲ್ಲ. ಕೆಂಪು, ಹಸಿರು ಗೀಟು ಇರುವ ಘಟಕಿ ವಸ್ತ್ರವನ್ನು ಮುಕ್ಕಾಲು ಕಾಲು ಮುಚ್ಚುವಂತೆ ನರಿಗೆ ಹಾಕಿ ಹೆಂಗಳೆಯರ ಪರಿಕರಕ್ಕೆ ಹೋಲುವಂತೆ ಉಡುತ್ತಾರೆ. ಕರಿ ಇಲ್ಲವೇ ಬಿಳಿ ಬನಿಯನ್ ತೊಡುತ್ತಾರೆ.

ಬಾಣ-ಬಿಲ್ಲು ಹೆಗಲಿಗೇರಿಸಿ, ಕಾಡೆಲ್ಲ ಅಲೆಯುವ ಮಾರಿಯರಿಗೆ ನರ್ತಿಸುವಾಗಲೂ ಏನಾದರೊಂದು ಹೆಗಲ ಮೇಲೆ ಇರಲೇಬೇಕು. ಸರ್ವ ಸಾಧಾರಣವಾಗಿ ಇವರು ಬಳಸುವ ಆಯುಧ, ಹರಿತವಾದ ಕಿರಿಕೊಡಲಿ (ಟಾಂಗಿ)ಯನ್ನು ಕೆಲವರು ಹಿಡಿದರೆ, ಇನ್ನು ಕೆಲವರು ಕುರಿ, ಕೋಳಿ, ಹಂದಿಗಳನ್ನು ಬಲಿ ಕೊಡುವದಕ್ಕಾಗಿ ಬಳಸುವ, ಕಂಡರೇ ಹೆದರಿಕೆಯಾಗು ವಂತಹ, ಭಾರಿ ಕೊಡಲಿ (ಪರ್ಸಿ)ಯನ್ನು ಹೊತ್ತಿರುತ್ತಾರೆ. ಇಂಥ ಕ್ರೂರ ಆಯುಧಗಳಲ್ಲಿ ವಿಶ್ವಾಸವಿಡದವರು, ತಮ್ಮ ಕೊಡೆ ಇಲ್ಲವೇ ಲಾಠಿಗೆ ಒಂದು ಅಂಗವಸ್ತ್ರವನ್ನು ಪತಾಕೆಯಂತೆ ಸುತ್ತಿ ಬಳಸುವರು.

ಯುವಕರ ಅಲಂಕಾರಕ್ಕೆ ಹೋಲಿಸಿದಾಗ, ಯುವತಿಯರು, ಅಷ್ಟೊಂದು ಆಕರ್ಷಣೀಯವಾಗಿ ಅಲಂಕರಿಸಿಕೊಳ್ಳುವದಿಲ್ಲ. ಇದು ನಾಗರಿಕರೆಂದುಕೊಳ್ಳುವ ಸಮಾಜದ ಅಭ್ಯಾಸಗಳಿಗೆ ವಿರುದ್ಧವಾದ ಪದ್ಧತಿ. ಬಹುಶಃ ಇವರು ಪ್ರತಿದಿನ ನೋಡುವ ಪಶುಪಕ್ಷಿಗಳನ್ನು ಅನುಕರಿಸಿ, ಆಚರಣೆಯಲ್ಲಿ ತಂದಿರಬೇಕು. ಆಕರ್ಷಕ ಗರಿಗಳನ್ನು ಹರವಿ ನರ್ತಿಸುವದು ಗಂಡು ನವಿಲು. ಸುಂದರ ಕಂಠದಿಂದ ಹಾಡುವದು ಗಂಡು ಹಕ್ಕಿಗಳ ಹಕ್ಕು. ಮಾಟವಾದ ಕೊಂಬುಗಳನ್ನು ಹೊಂದಿ ಕಂಗೊಳಿಸುವದು ಗಂಡು ಚಿಗರೆ, ಆನೆ, ಸಿಂಹ, ಇತ್ಯಾದಿ. ಎಲ್ಲಾ ಪ್ರಾಣಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಅವುಗಳಲ್ಲಿ ಹೆಣ್ಣು ಗಂಡಿಗೆ ಆಕರ್ಷಿತ ವಾಗುತ್ತದೆಯೇ ಹೊರತು ಮಾನವನಂತಲ್ಲ! ಬಹುಶಃ ಮಾರಿಯರು ಈ ಜೀವಿಗಳೊಂದಿಗೆ ಹಾಸುಹೊಕ್ಕಾಗಿ ಹೋಗಿರುವದರಿಂದ, ಯುವತಿಯರು ತಮ್ಮತ್ತ ಆಕರ್ಷಿತರಾಗುವಂತೆ ಯುವಕರು ಅಲಂಕರಿಸಿಕೊಂಡರೆ ಆಶ್ಚರ್ಯವಿಲ್ಲ.

ಹೆಂಗಳೆಯರು ತಲೆ ಸುತ್ತ ಎರಡರಿಂದ ಆರು ಬಿಳಿ ಮಣಿ ಸರಗಳನ್ನು ಧರಿಸುತ್ತಾರೆ. ಹಿಂಬದಿಗೆ, ಅವುಗಳಿಗೆ ಪುರುಷರಂತೆ ಕೆಂಪು ಗೊಂಡೆಗಳನ್ನು ತೂಗಬಿಡುತ್ತಾರೆ. ಅಲ್ಯುಮಿನಿಯಂ ಮುಳ್ಳುಗಳನ್ನು ಚುಚ್ಚಿಕೊಂಡಿರುತ್ತಾರೆ. ಕೇಶರಾಶಿಯನ್ನು ಮುಡಿಯಾಗಿ ಬಿಗಿದುಕೊಂಡು ಬಾಚಣಿಗೆ ಸಿಗಿಸುತ್ತಾರೆ. ಕೆಲವರು ಕನ್ನಡಿ, ಇನ್ನು ಕೆಲವರು ರಿಬ್ಬನ್ನಿನಿಂದ ತಯಾರಿಸುವ ಹೂವುಗಳನ್ನು ಜೋಡಿಸಿರುತ್ತಾರೆ. ಅಲ್ಲೊಬ್ಬಳು, ಇಲ್ಲೊಬ್ಬಳು, ಕಾಗದದ ಬೀಸಣಿಗೆ, ತಿರುಗು ಚಕ್ರ (ಗಿರಗಿಟ್ಲೆ) ಸಿಗಿಸುವದೂ ಉಂಟು. ಕಿವಿಗೆ ಬುಗುರಿಯಾಕಾರದ ಹಿತ್ತಾಳೆ ಬೆಂಡೋಲೆ ಧರಿಸಿದರ ಮೂಗಿಗೆ ಚಿಕ್ಕ ಮೂಗುತಿ ಧರಿಸಿರುತ್ತಾರೆ. ಕೊರಳಿಗೆ ಬೆಳ್ಳಿ ನಾಣ್ಯಗಳ ಸರ ಇದ್ದೇ ಇರುತ್ತದೆ. ಅದು ನಿಯಮ. ಅದರೊಟ್ಟಿಗೆ ಬೆಳ್ಳಿ ಸರ, ಮಣಿಸರಗಳೂ ಇರಬಹುದು. ಕೈಗೆ ದಿನಬಳಕೆಯ ಬಳೆಗಳು, ಬೆರಳಿಗೆ ಬೆಳ್ಳಿಯ ಉಂಗುರಗಳು, ಹೆಚ್ಚಿನವರು

ಕಾಲಿಗೆ ಏನೂ ಧರಿಸುವದಿಲ್ಲ. ಒಂದಿಬ್ಬರು ಮಾತ್ರ ಬಂಗಾರದಂತೆ ಹೊಳೆಯುವ ಹಿತ್ತಾಳೆಯ ಕಡಗಗಳನ್ನು ತೊಟ್ಟಿದ್ದರು. ಕಿರಿ ಸೆರಗು ಉಬ್ಬೆದೆಯನ್ನು ಮುಚ್ಚಲು ಅಸಮರ್ಥವಾಗಿರುವ ದರಿಂದ, ನರ್ತಿಸುವಾಗ ಬೇರೆಯೇ ಬಟ್ಟೆಯಿಂದ ಎದೆಯನ್ನು ಮುಚ್ಚಿಕೊಂಡಿರುತ್ತಾರೆ. ಕೆಲವೇ ಹೆಂಗಳೆಯರು ನರ್ತಿಸುವಾಗ ಕೋಲು ಹಿಡಿದಿರುತ್ತಾರೆ.

ಕಗ್ಗತ್ತಲು ರಾಜ್ಯವಾಳತೊಡಗಿದೊಡನೆ ಕೆಲವು ಯುವಕ-ಯುವತಿಯರು ನರ್ತನದ ಸ್ಥಳಕ್ಕೆ ಬಂದು ಮೆಲುದನಿಯಲ್ಲಿ ಹಾಡುತ್ತ ಕುಣಿತ ಪ್ರಾರಂಭಿಸುವರು. ಹಾಡುಗಾರಿಕೆ ಮತ್ತು ಗಂಟೆಗಳ ಸದ್ದು ಇತರರಿಗೆ ಆಮಂತ್ರಣವಿದ್ದಂತೆ. ಅವರೂ ಬರಲಾರಂಭಿಸುವರು. ಯುವಕರು ಮೊದಲು ಹಾಡಿ ಅದಕ್ಕನುಗುಣವಾಗಿ ಏಕಕಾಲಕ್ಕೆ ಸೊಂಟದ ಗಂಟೆಯಿಂದ ನಾದ ಹೊರಡಿಸಿಯಾದ ಮೇಲೆ ಅವರನ್ನು ಹಿಂಬಾಲಿಸಿ ಹೆಂಗಳೆಯರೂ ಹಾಡಿ ಹೆಜ್ಜೆ ಹಾಕುವರು. ಇಂಥ ನೃತ್ಯಕೂಟ ಗಳಲ್ಲಿ ಪುರುಷರೇ ಬಹು ಸಂಖ್ಯಾತರಿರುವುದು ವಾಡಿಕೆ. ಈ ನೃತ್ಯಗಳಿಗೆ ಶಾಸ್ತ್ರ, ಪದ್ಧತಿಗಳ ಕಾನೂನು ಇಲ್ಲವಾದ್ದರಿಂದ ಹೆಂಗಳೆಯರು ಹರಟುತ್ತ ನರ್ತಿಸಿದರೆ, ಗಂಡಸರು ಬೀಡಿ ಸೇದುತ್ತ ಹೆಜ್ಜೆ ಹಾಕುತ್ತಿರುತ್ತಾರೆ.

ಮನಸ್ಸಿಗೆ ಬಂದಾಗ ಗೆಳೆಯ-ಗೆಳತಿಯರು, ನೃತ್ಯ ಸಮೂಹ ಬಿಟ್ಟು ಉರಿಯುವ ಬೆಂಕಿಯಿಂದ ಕಾಸಿಕೊಂಡು, ಮದ್ಯ ಸೇವನೆಯಿಂದ ಕಾವೇರಿಸಿಕೊಂಡು, ತಿರುಗಿ ಬಂದು ನೃತ್ಯದಲ್ಲಿ ಸೇರಿಕೊಳ್ಳುವರು. ಈ ಪದ್ಧತಿಯಿಂದಾಗಿ ಮಾರಿಯರ ನೃತ್ಯ ಪಾಶ್ಚಿಮಾತ್ಯರದನ್ನು ನೆನಪಿಗೆ ತರುತ್ತದೆ. ನರ್ತಕರು ಹೆಚ್ಚಾದಾಗ, ಎರಡು, ಮೂರು, ನಾಲ್ಕು ತಂಡಗಳು ವಿವಿಧ ವರ್ತುಲಗಳನ್ನಾಗಿ ಮಾಡಿಕೊಂಡು ಕುಣಿಯುತ್ತಾರೆ. ಆಗೊಮ್ಮೆ ಈಗೊಮ್ಮೆ ಒಂದು ತಂಡ ನಿರ್ಗಮಿಸಿ, ಇನ್ನೊಂದು ತಂಡ ಬಂದು ಸೇರಿಕೊಳ್ಳುತ್ತದೆ. ಮೋಜಿನ ವಿಚಾರವೆಂದರೆ ಈ ನೃತ್ಯಕ್ಕೆ ಮಾರ್ಗದರ್ಶಕರೂ ಇರುವದಿಲ್ಲ. ನಿರ್ದೇಶನ ಮಾಡುವವರೂ ಇರುವದಿಲ್ಲ.

ಕಾಡಿನ ನಡುವೆ ನಡೆಯುವ ಈ ನೃತ್ಯಕೂಟಗಳಿಗೆ ನಡುರಾತ್ರಿಯಲ್ಲಿ ನಡುಕ ಬರುವದು ಸಹಜವಿದೆ. ಆದರೆ ಕುಣಿದು ರಕ್ತಚಲನೆ ತೀವ್ರವಾಗಿ ಸೇವಿಸಿದ ಸೆರೆಯ ಪ್ರಮಾಣವೂ ಹೆಚ್ಚಾಗಿ ಅವರ ಹೆಜ್ಜೆಗಳು ನಿಧಾನವಾಗುವ ಬದಲಾಗಿ ತೀಕ್ಷ್ಣವಾಗುತ್ತವೆ. ಜೊತೆಗೆ ಗಂಡು-ಹೆಣ್ಣುಗಳ ನಡುವೆ ಆಕರ್ಷಣೆಯೂ ಹೆಚ್ಚಾಗುತ್ತದೆ. ಜೋಡಿ, ಜೋಡಿಗಳು ಚಳಿ ಕಾಸಲು ಸೆರೆ ಸೇವಿಸಲು ಹೋಗಿ ಬರುವ ಪ್ರಮಾಣವು ಜಾಸ್ತಿಯಾಗುತ್ತದೆ. ಎಲ್ಲೆಡೆ ಕಗ್ಗತ್ತಲು. ನೃತ್ಯಕೂಟದ ಸುತ್ತಲೂ ಮಂದವಾಗಿ ಉರಿಯುವ ಬೆಂಕಿ, ಎತ್ತರವಾಗಿ ಬೆಳೆದುನಿಂತ ಮರಗಳೆಲ್ಲ ಕಣ್ಣಿಗೆ ಹಬ್ಬವಾದರೆ ಆಶ್ಚರ್ಯವಿಲ್ಲ. ಕಾಮದೇವನಿಗೂ ಇಂತಹ ವಾತಾವರಣ ಇಷ್ಟವೆಂದು ತೋರುತ್ತದೆ. ಅಂತೆಯೇ ಆತನ ಆಶೀರ್ವಾದದಿಂದ ಯುವ ಜೋಡಿಗಳು ನೃತ್ಯಕೂಟದಲ್ಲಿ ನಡುನಡುವೆ ಬಿಟ್ಟು ಮರದ ಮರೆಯಲ್ಲಿ ಪವಡಿಸಿ, ಸುಖಪಟ್ಟು ಹಿಂದಿರುಗುತ್ತಿರುತ್ತಾರೆ. ಈ ವಾತಾವರಣದಲ್ಲಿ ವಿವಾಹಿತರಿಗೂ ಪರಸ್ತ್ರೀಯ ಬಗ್ಗೆ ಆಸೆಯಾದರೆ ಅದೇನೂ ತ್ಯಾಜ್ಯವಲ್ಲ. ಮಂದವಾಗಿ ಉರಿಯುವ ಮೇಣದ ಬತ್ತಿಗಳ ಬೆಳಕಿನಲ್ಲಿ ಇಂಥ ಚಟುವಟಿಕೆಗಳಲ್ಲಿ ಮೈಮರೆಯುವ ಪಾಶ್ಚಿಮಾತ್ಯರಿಂದ ಹಿಂದುಳಿದ ಜನಾಂಗವೆನಿಸಿಕೊಳ್ಳುವ ಮಾರಿಯರು ಯಾವ ದೃಷ್ಟಿಯಲ್ಲಿ ಕಡಿಮೆ ಎಂದೆನಿಸದೇ ಇರುವದಿಲ್ಲ.

# 16. ಆದಿವಾಸಿಗಳ ಶಿಕ್ಷಣ



ಅಸಹಾಯಕರು, ಹಿಂದುಳಿದವರು ಎಂದು ಆದಿವಾಸಿಗಳ ಬಗ್ಗೆ ನಮ್ಮ ದೇಶದ ನಾಯಕರು ಬಾರದ ಕಣ್ಣೀರು ಸುರಿಸುತ್ತಲೇ ಬಂದರೂ, ಈ ದುರ್ದೈವಿಗಳ ಸ್ಥಿತಿ-ಗತಿ ಕಳೆದ ಮೂರು ದಶಕಗಳಲ್ಲಿ ಸ್ವಲ್ಪವಾದರೂ ಬದಲಾಗಿದೆಯೇ ಎಂದು ಸರಕಾರವಾಗಲೀ ಸಮಾಜವಾಗಲೀ ತಲೆಕೆಡಿಸಿಕೊಂಡಿಲ್ಲ. ಇನ್ನಿತರ ಕ್ಷೇತ್ರಗಳಲ್ಲಿ ಸ್ಥಾಪಿಸಿದ ಹೊಸ ವಿಕ್ರಮಗಳಂತೆ ಆದಿವಾಸಿಗಳ ಹೆಸರಿನಲ್ಲಿ ಮಾಡಿದ ದುಂದುಗಾರಿಕೆಯೇ ಅವರ ಕಲ್ಯಾಣದ ಮಾಪನವಾದ್ದರಿಂದ ಕೇವಲ ಅಂಕಿಸಂಖ್ಯೆಗಳನ್ನೇ ನಂಬಿ ನೆಮ್ಮದಿ ಪಡಬೇಕಾಗಿದೆ! ಸಮಸ್ಯೆಯೊಂದನ್ನು ಆಳವಾಗಿ ಅರಿಯದೇ ಅದಕ್ಕೆ ನಿವಾರಣೋಪಾಯವನ್ನು ಜಾರಿಯಲ್ಲಿ ತಂದರೆ, ಅದರಿಂದಾಗುವ ದುಷ್ಪರಿಣಾಮಗಳು ಯಾವುವು ? ಎಂದು ತಿಳಿಯಲು ಆದಿವಾಸಿಗಳನ್ನು ಸುಶಿಕ್ಷಿತರನ್ನಾಗಿ ಮಾಡಹೊರಟ ಸರಕಾರೀ ಧೋರಣೆ ಅಭ್ಯಸಿಸಬೇಕು. ಅಂದರೆ ರಾಜಧಾನಿಯ ವಾತಾನುಕೂಲ ಕೊಠಡಿಗಳಲ್ಲಿ ಸುಖಾಸನಗಳಲ್ಲಿ ಕುಳಿತು ಯೋಜನೆ ತಯಾರಿಸುವವರಿಗೆ ಬಾಹ್ಯ ಜಗತ್ತಿನ ಸಂಪರ್ಕವೇ ಇಲ್ಲವೆಂಬ ಮಾತು ಖಚಿತವಾಗಿಬಿಡುತ್ತದೆ.

ಮಧ್ಯಪ್ರದೇಶ, ಆದಿವಾಸಿಗಳ ತವರೂರು. ಅಲ್ಲಿಯ ಮೂಲವಾಸಿಗಳು ಶತಮಾನಗಳಿಂದ ಹೊರ ಜಗತ್ತಿನ ಸಂಪರ್ಕವಿಲ್ಲದೆ ತಮಗೊಪ್ಪುವ ರೀತಿಯಲ್ಲಿ ರೂಪಿಸಿಕೊಂಡು ಜೀವನ ನಡೆಸಿದ ಅಪೂರ್ವ ತಾಣ. ಮಾರಿಯ, ಮುರಿಯ, ಹಲ್ಬೀ, ಕಾಡುಕೋಣ ಮಾರಿಯಾ

(Bison horn marias), ಅಬುಜ್ ಮಾರಿಯ ಮೊದಲಾದ ಬುಡಕಟ್ಟಿನವರು ಇಲ್ಲಿಯ ಕಾಡು, ಮೇಡು, ಹಳ್ಳಕೊಳ್ಳಗಳೊಂದಿಗೆ ಒಂದಾಗಿ ಬಾಳುತ್ತಿದ್ದಾರೆ. ಭೂಮಿ, ಕಾಡು, ನೀರು, ಜೇಟೆಗಳ ಸಮೃದ್ಧಿಯಿಂದ ಅವರ ವೈಶಿಷ್ಟ್ಯಪೂರ್ಣ ಜೀವನ ನಡೆದುಬಂದಿದೆ. ನೀರಿನ ಆಶ್ರಯವಿದ್ದಲ್ಲಿ ಇವರು ಪುಟ್ಟ ಹಳ್ಳಿಗಳನ್ನು ಸ್ಥಾಪಿಸಿದರು. ಕಾಡನ್ನು ಕಡಿದು, ಸುಟ್ಟು ಭೂಮಿ ಫಲವತ್ತಾಗಿರುವಷ್ಟು ಕಾಲ ಆಹಾರಧಾನ್ಯಗಳನ್ನು ಬೆಳೆಸಿ, ಬೇಟೆಯಾಡಿ, ಅವುಗಳ ಕೊರತೆ ಯೆನಿಸಿದಾಗ ಬೇರೊಂದು ತಾಣಕ್ಕೆ ಹೋಗುವದು ಅವರ ರೂಢಿ. ಈ ಪದ್ಧತಿ ವ್ಯಾವಹಾರಿಕ ವಲ್ಲದಿದ್ದರೂ ಇದರಿಂದ ಹಿಂದಿನ ದಿನಗಳಲ್ಲಿ ಆಗುತ್ತಿದ್ದ ಹಾನಿ ಅತ್ಯಲ್ಪವಾಗಿದ್ದರಿಂದ ಯಾರ ಲಕ್ಷ್ಯವೂ ಇದರತ್ತ ಹರಿದಿರಲಿಲ್ಲ. ಬ್ರಿಟಿಷರು ನಾಗರಿಕ ಸ್ಥಳಗಳಲ್ಲಿ ಅಲ್ಲಲ್ಲಿ ತಲೆದೋರುವ ದಂಗೆ, ಕ್ಷೋಭೆಗಳನ್ನಡಗಿಸಿ ಸುವ್ಯವಸ್ಥಿತ ರಾಜ್ಯಾಡಳಿತ ನಡೆಸುವಲ್ಲಿ ಕಂಕಣಬದ್ಧರಾಗಿದ್ದರಿಂದ ಈ ನಿರುಪದ್ರವಿ ಆದಿವಾಸಿಗಳನ್ನು ಅವರಷ್ಟಕ್ಕೇ ಇರಗೊಟ್ಟರು. ಸ್ವಾತಂತ್ರ್ಯದ ಮೊದಲ ವರ್ಷಗಳಲ್ಲಿಯೂ ಪುಢಾರಿಗಳು ಇವರನ್ನು ಅಷ್ಟಾಗಿ ಗಣನೆಗೆ ತಂದುಕೊಂಡಿರಲಿಲ್ಲ. ವೋಟುಗಳಿಗೆ ಸಂಖ್ಯಾಬಲವೇ ಅತಿಮುಖ್ಯವೆಂದು ಕಂಡುಕೊಂಡ ಹೊಸ ನಾಯಕರಿಗೆ ಆದಿವಾಸಿಗಳ ತಾಣಕ್ಕೆ ಹೋಗಲೇಬೇಕಾಗಿ ಬಂದಾಗ ಅಲ್ಲಿರುವ ಸಂಪತ್ತಿಯನ್ನು ಕಂಡು ಬಾಯಿ ಚಪ್ಪರಿಸುವಂತೆ ಆಯಿತು. ಶತಮಾನಗಳಿಂದ ತಮ್ಮ ಪಾನೀಯ(ಸುರೆ)ಗಳನ್ನು ತಾವೇ ಸಿದ್ಧಮಾಡಿಕೊಳ್ಳುತ್ತಿದ್ದವರ ಮೇಲೆ ಪಾನ ನಿರೋಧ ಹೇರಿದರು. ಸೇಂದಿಯ ಕಂತ್ರಾಟುದಾರರನ್ನು ನೇಮಿಸಿದರು. ಇವರೊಂದಿಗೆ ಕೊಟ್ಟ ಸಾಲಕ್ಕೆ ಚಕ್ರಬಡ್ಡಿಯ ಮೇಲೆ ಚಕ್ರಬಡ್ಡಿಯನ್ನು ಗಂಟೆಗಳ ತಳಹದಿಯ ಮೇಲೆ ವಸೂಲು ಮಾಡುವ 'ಜಿಗಳೆ'ಗಳೂ ಅಲ್ಲಲ್ಲಿ ಹುಟ್ಟಿಕೊಂಡವು. ಇಷ್ಟರಿಂದಲೇ ನೆಮ್ಮದಿ ಪಡದ ರಾಜಕಾರಣಿಗಳು ಕಾಡಿನ ಬಂಧನದಲ್ಲಿ ಇದ್ದವರನ್ನು 'ಮುಕ್ತ'ರನ್ನಾಗಿಮಾಡಿ ಅವರು ಗೌರವಸ್ಥರಂತೆ ಬಾಳಿ ಬದುಕುವ ಏರ್ಪಾಟು ಮಾಡುತ್ತೇವೆಂಬ ಪಣತೊಟ್ಟು, ಅವರ ಸುಧಾರಣೆಗಾಗಿ ಕೋಟ್ಯಂತರ ರೂಪಾಯಿ ಮಂಜೂರಾಗುವ ವ್ಯವಸ್ಥೆ ಮಾಡಿ, ತಮ್ಮ ಮತ್ತು ಸಂಬಂಧಪಟ್ಟವರ ಬೊಕ್ಕಸ ತುಂಬಿಸಿ ಕೊಂಡರು. ಖರ್ಚು ತೋರಿಸಲು ಸಮತೋಲ ಆಹಾರ, ಆರೋಗ್ಯ, ವಸತಿ, ಶಿಕ್ಷಣ, ಕಲ್ಯಾಣ, ಇತ್ಯಾದಿ ಯಾವ ಹೆಸರು ಉಪಯೋಗಿಸಲೂ ಹಿಂಜರಿಯಲಿಲ್ಲ. ಉಳಿದೆಲ್ಲ ಕ್ಷೇತ್ರಗಳಿಗಿಂತ ಆದಿವಾಸಿಗಳ ಶಿಕ್ಷಣದ ಕ್ಷೇತ್ರದಲ್ಲಿ ಸಾಧಿಸಿದ 'ಪ್ರಗತಿ' ಎಂಥವನಿಗೂ ವಿಸ್ಮಯ ತರುವಂಥಾದ್ದು!

ಮಣ್ಣಿನ ವಾಸನೆ ಸೂಸುವ ಆದಿವಾಸಿಗಳ ಮುಚ್ಚುಮರೆಯಿಲ್ಲದ ಸಹಜ ಜೀವನದ ಸೋಜಿಗದ ವಿವರಗಳು ಹೊರಜಗತ್ತಿಗೆ ತಲುಪಿದಾಗ ಪತ್ರಕರ್ತರು, ಛಾಯಾಚಿತ್ರಕಾರರು ದುಂಬಿಗಳಂತೆ ಕ್ಯಾಮರಾಗಳೊಂದಿಗೆ ಅಲ್ಲಿ ಧಾವಿಸಿದರು. ಆದರೆ ನಿರೀಕ್ಷಿಸಿದ, ಕಲ್ಪನೆಯ ರೋಮಾಂಚಕ ಸನ್ನಿವೇಶಗಳು ಅಲ್ಲಿ ಇರದಿದ್ದರಿಂದ, ಇದ್ದವುಗಳೊಡನೆ ಇಲ್ಲದ್ದನ್ನು ಸೇರಿಸಿ ರಂಜಕವಾಗಿ ಬರೆದರು. ಅರೆನಗ್ನ ಕಾಮುಕ ಛಾಯಾಚಿತ್ರಗಳನ್ನು ತೋರಿಸಿದರು. ಇಂತಹ ಪ್ರಕಟಿತ ಚಿತ್ರಗಳೆಲ್ಲ ಕದ್ದು ತೆಗೆದವು. ಇಲ್ಲವೇ ಹಣದಾಸೆ ತೋರಿಸಿ ತಮ್ಮ ಬರೆವಣಿಗೆಗೆ ಸರಿಹೊಂದುವ ಭಂಗಿಗಳಲ್ಲಿ ತೆಗೆದವುಗಳು. ಆದಿವಾಸಿಗಳು ಮುದ್ರಿತವಾದಂತಹ ತಮ್ಮವೇ ಚಿತ್ರಗಳನ್ನು ನೋಡಿದಾಗ ಅವರಿಗೆ ಅಪಮಾನವಾಗಬಹುದು, ಅಸಹ್ಯವಾಗಬಹುದು, ಕಾಡಿನಲ್ಲಿ ನಗ್ನರಾಗಿ ಅಲೆಯುವರೆಂಬ ವದಂತಿ ಕೇಳಿ ಅಂಥ ಯುವತಿಯರ ಛಾಯಾಗ್ರಹಣ ಮಾಡಬಂದವರ ನಿರಾಶೆಯನ್ನು ಆದಿವಾಸಿಗಳ ಬಾಯಿಂದಲೇ ಕೇಳುವುದು ಮೋಜಾಗಿರುತ್ತದೆ. ಬೇಕಾದ ಅರೆನಗ್ನ ಚಿತ್ರ ತೆಗೆಯುವ ಏರ್ಪಾಡಿಗೆ ಪಟೇಲನಿಗೆ ಐದರಿಂದ ಐವತ್ತು ರೂಪಾಯಿ ಸಹಜವಾಗಿ ಭಕ್ಷೀಸು ಕೊಡುವದರಿಂದ, ಅವನು ಹೆದರಿಸಿ ಬೆದರಿಸಿ ಮನ

ಒಲಿಸಿ, ಹಣದಾಸೆ ತೋರಿಸಿ 'ಮಾಡೆಲ್ಲು'ಗಳನ್ನು ಒದಗಿಸದೇ ಇರುವದಿಲ್ಲ. ಇದರಿಂದಾಗಿ ಕ್ಯಾಮರಾ ಇರುವವರೆಲ್ಲ ತುಂಬ ಧನಿಕರು, ತಮ್ಮ ಛಾಯಾಚಿತ್ರಗಳಿಂದ ಅಪಾರ ಲಾಭ ಮಾಡಿಕೊಳ್ಳುತ್ತಾರೆಂಬ ನಂಬಿಕೆ ಇಂಥವರ ಸಂಪರ್ಕ ಬಂದ ಆದಿವಾಸಿಗಳಲ್ಲಿ ಬೇರೂರಿಬಿಟ್ಟಿವೆ. ಅಂತೆಯೇ ತಮ್ಮವರಲ್ಲದವರಿಂದ ಹಣ ಗಿಟ್ಟಿಸಲು ಸದಾ ಹೊಂಚು ಹಾಕುತ್ತಿರುತ್ತಾರೆ.

ಅನಾದಿಕಾಲದಿಂದಲೂ ಬಡಿಗರು, ಕಮ್ಮಾರರು, ನರ್ತಕರು, ಸಂಗೀತಕಾರರು, ಶಿಲ್ಪಿಗಳೆಲ್ಲ ತಮ್ಮ ಹಿರಿಯರಿಂದಲೋ ಗುರುಗಳಿಂದಲೋ ತರಬೇತಿ ಪಡೆಯುತ್ತಿದ್ದರು. ಬ್ರಿಟಿಷರ ಆಳ್ವಿಕೆಯಲ್ಲಿ ಅಕ್ಷರ ಜ್ಞಾನವೇ ಶಿಕ್ಷಣ ಎಂದು ಭ್ರಮಿಸಿದವರಿಗೆ ಅದನ್ನು ಮರೆಯುವದು ತುಂಬ ಕಷ್ಟವಾಗಿದೆ. ಇದೇ ಕಾರಣಕ್ಕಾಗಿ ಸರ್ವರೀತಿಯಿಂದಲೂ ಸ್ವಾವಲಂಬಿಗಳಾಗಿದ್ದ ಆದಿವಾಸಿಗಳಿಗೆ ಅಕ್ಷರಾಭ್ಯಾಸ ಮಾಡಿಸಲು ಸರಕಾರ ಕಾರ್ಯೋನ್ಮುಖಿಯಾಯಿತು. ಅವರಿಗಾಗಿ ನಿರ್ದೇಶಕರು ನೇಮಿತರಾದರು. ಕಟ್ಟಡ, ಕುರ್ಚಿ, ಟೇಬಲ್ಲುಗಳೆಲ್ಲ ಬಂದವು. ಜಿಲ್ಲಾ ಬ್ಲಾಕ್ ಅಧಿಕಾರಿ, ಶಿಕ್ಷಣದ ಅಧಿಕಾರಿ, ಶಿಕ್ಷಕರು ಕಾಣಿಸಿಕೊಂಡರು. ಕರಿಹಲಗೆ, ಕಡತಗಳೆಲ್ಲಾ ನಿರ್ಮಾಣವಾದವು. ತಲಾ ಐದು ಸಾವಿರ ವಾರ್ಷಿಕ-ಪಂಚವಾರ್ಷಿಕ ವೆಚ್ಚಗಳ ಗುಣಾಕಾರ ಭಾಗಾಕಾರಗಳ ಸಂಖ್ಯೆಯಿಂದಲೇ ಪುಲಕಿತರಾದರು! ಬೇಕಾದ್ದಕ್ಕಿಂತ ಕಡಿಮೆ ಹಣ ಮಂಜೂರು ಮಾಡುವದು ಸರಕಾರದ 'ಚಟ'ವಾದ್ದರಿಂದ, ಎರಡು ಪಟ್ಟು ಹಣ ಬೇಡುವದು ಉಚಿತವೆಂದು ಅನುಭವಿಗಳು ಸಲಹೆಯಿತ್ತರು. ಮಾರ್ಚ್ ತಿಂಗಳು ಮುಗಿಯುವ ಮೊದಲೇ ಮಂಜೂರಾದ ಹಣ ಖರ್ಚು ಮಾಡಿ ಮುಗಿಸಬೇಕಾಗಿದ್ದರಿಂದ ಸುಲಭವಾಗಿ ಸಿಗುವ ಶಿಕ್ಷಣ ಸಾಮಗ್ರಿಯನ್ನು ಕೊಂಡದ್ದಾಯಿತು. ಕಟ್ಟಡವಿಲ್ಲದಿದ್ದರೂ ಎಲ್ಲೆಲ್ಲೂ ಒಟ್ಟಿದ್ದಾಯಿತು. ಶಾಲೆಯಿಲ್ಲದಿದ್ದರೂ ಕಟ್ಟಡಗಳು ತಲೆಯೆತ್ತಿದವು. ವಿದ್ಯಾರ್ಥಿಗಳಿಲ್ಲದಿದ್ದರೂ ಶಿಕ್ಷಕರು ನೇಮಿತರಾದರು!

ಬಸ್ತರ ಜಿಲ್ಲೆಯ ಧನೋರಾ ಎಂಬ ಹಳ್ಳಿಯಲ್ಲಿ ನಡೆಯುವ ಇಂಥ ಆದರ್ಶ ಶಾಲೆಯೊಂದನ್ನು ನೋಡುವ ಸದವಕಾಶ ನನಗೆ ಸಿಕ್ಕಿತು. ಹಲವೆಡೆ ಮಾಧ್ಯಮಿಕ ಶಿಕ್ಷಣಕ್ಕೂ ಲಭ್ಯವಿಲ್ಲದ ಪಕ್ಕಾ ಕಟ್ಟಡವೊಂದನ್ನು ಪ್ರಾಥಮಿಕ ಶಿಕ್ಷಣಕ್ಕಾಗಿ ನಿಲ್ಲಿಸಲಾಗಿತ್ತು. ಶಾಲೆಯಲ್ಲಿ ಕಾಲಿಟ್ಟಾಗ ಶಿಕ್ಷಕ ವರ್ಗ ಕುರ್ಚಿಗಳಲ್ಲಿ ಅಲಂಕೃತರಾಗಿ, ಹಳ್ಳಿಯ ಹಿರಿಯರು ನೆಲದಮೇಲೆ ಪವಡಿಸಿದ್ದರಿಂದ ಇದು ಪ್ರೌಢರ ಶಾಲೆಯಿರಬಹುದೇ ಎಂದು ಅನುಮಾನ ಬರುವಂತಿತ್ತು. ಪರಿಚಯವಿಲ್ಲದ ಆಗಂತುಕರು ಮೇಲಧಿಕಾರಿಗಳೆಂದು ಊಹಿಸಿ ಶಿಕ್ಷಕ ವೃಂದ ಗಾಬರಿಗೊಂಡು ಸ್ವಾಗತಕ್ಕಾಗಿ ಧಾವಿಸಿ ಬಂದಿತು. ಬಂದವರು ಅವರ ಯೋಗಕ್ಷೇಮ ಅರಿಯಬಂದ ಮಂದಿಯೆಂದು ತಿಳಿದು ನೆಮ್ಮದಿಯ ಉಸಿರು ಬಿಟ್ಟಿತು. ನಂತರ ಒಬ್ಬರು ತಮ್ಮ ಸಮಸ್ಯೆ ವಿವರಿಸಿದರು :

''ಶಾಲೆ ಪ್ರಾರಂಭವಾಗಿ ಏಳು ವರ್ಷಗಳಾದರೂ ಈವರೆಗೆ ಒಬ್ಬನೇ ಒಬ್ಬ ವಿದ್ಯಾರ್ಥಿ ಮಾತ್ರ ಐದನೆಯ ಕ್ಲಾಸಿಗೆ ಏರಿಬರುವ ಸಾಹಸ ಮಾಡಿದ! ಸದ್ಯ ಮೂರು ವಿದ್ಯಾರ್ಥಿಗಳಿಗೆ ನಾವು ಐವರು ಶಿಕ್ಷಕರಿದ್ದೇವೆ!! ಅಂತೆಯೇ ಮಕ್ಕಳನ್ನು ಶಾಲೆಗೆ ಹೋಗುವಂತೆ ಮನ ಒಲಿಸಿರೆಂದು ಈ ಪಾಲಕರ ಸಭೆ ಕರೆದಿದ್ದೆವು.''

''ಆದರೆ ನೋಡಿ, ಎಲ್ಲ ವಿದ್ಯಾರ್ಥಿಗಳೂ ಪ್ರತಿದಿನ ಏಕೆ ಶಾಲೆಗೆ ಬರಬೇಕು? ದಿನಕ್ಕೆ ಒಬ್ಬಿಬ್ಬರು ಒಂದೊಂದು ಮನೆಯಿಂದ ಬಂದು ಹಾಜರಿದ್ದರೆ ಸಾಲದೇ? ಎಂದು ವಾದಿಸುತ್ತಿದ್ದಾರೆ...'' ಒಬ್ಬ ಶಿಕ್ಷಕ ಹಿಂದಿಯಲ್ಲಿ ನುಡಿಯುತ್ತಿದ್ದಂತೆ, ಪಾಲಕನೊಬ್ಬ ''ನೋಡಿ ಬುದ್ಧಿ, ನಾವು ಬಡವರು, ಮಕ್ಕಳು ಬೇಟೆಗೆ ಹೋದರೆ, ಮೀನು ಹಿಡಿದರೆ, ಕಟ್ಟಿಗೆ ತಂದರೆ ಎಷ್ಟೋ ಸಹಾಯವಾಗುತ್ತದೆ. ಅದನ್ನು ಬಿಟ್ಟು ಶಾಲೆಗೆ ಬಂದರೆ ನಮ್ಮ ಕೈ ಮುರಿದಂತೆ ಅಲ್ಲವೇ?'' ಎಂದು ಹಲಬೀ ಭಾಷೆಯಲ್ಲಿ ಹಲುಬಿದ.

ಕಾಡಿನಲ್ಲಿ ಕೆಲಸಗಾರರು ಸಿಗದಿದ್ದಾಗ ಪ್ರತಿಯೊಂದು ಮನೆಯಿಂದ ಒಬ್ಬ ಆಳನ್ನು ಒತ್ತಾಯದಿಂದ ಕರೆತಂದು ಕೆಲಸ ಮಾಡಿಸುವದು ಅರಣ್ಯಖಾತೆ ನಿಯಮಗಳಲ್ಲೊಂದು. ಶಾಲೆಗೆ ಮಕ್ಕಳನ್ನು ಕಳಿಸುವದೂ ಒಂದು ನಿಯಮವಿದ್ದು ವಾರಕ್ಕೊಂದು ದಿನ ತಮ್ಮ ಮಕ್ಕಳನ್ನು ಮನೆಯ ಅನುಕೂಲದಂತೆ ಕಳಿಸಿದರೆ ಏನು ತಪ್ಪು? ಶಿಕ್ಷಕರೇಕೆ ಇದಕ್ಕೆ ಆಕ್ಷೇಪವೆತ್ತಬೇಕು? ಎಂಬ ಅವರ ವಾದವನ್ನು ಶಿಕ್ಷಕನೊಬ್ಬ ವಿವರಿಸಿದಾಗ ತುಂಬ ನಗುವಂತಾಯಿತು.

''ಶಾಲೆಗೆ ಬಂದರೂ ಅಕ್ಷರಾಭ್ಯಾಸ ಕಲಿಯುವದು ಅಷ್ಟರಲ್ಲಿಯೇ ಇದೆ. ಇದ್ದಷ್ಟು ಹೊತ್ತು ಆಟವಾಡಿ ತಿರುಗಿ ಹೋಗುತ್ತಾರೆ. ಹೀಗಿದ್ದಾಗ ಮೇಲಧಿಕಾರಿಗಳು ಯಾವ ಗಂಟೆಗೆ ಎಂಥ ಪಾಠ ಕಲಿಸಿದಿರಿ? ಎಂದು ವಿವರಗಳನ್ನು ಬೇರೆ ಕೇಳುತ್ತಾರೆ. ಐದು ಶಿಕ್ಷಕರಿಗೆ ಸಾಲುವಷ್ಟು ಕೆಲಸ ತೋರಿಸದಿದ್ದರೆ ನಮ್ಮ ನೌಕರಿಗೆ ಸಂಚಕಾರ ಬಂದಂತೆ. ಆದ್ದರಿಂದ ನಮ್ಮ ವರದಿ ಓದಿದರೆ ಈ ಶಾಲೆ ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತದೆ. ಪ್ರಶಸ್ತ ಕಟ್ಟಡ ಮತ್ತು ಹೆಚ್ಚಿನ ಶಿಕ್ಷಕರಿಗಾಗಿ ಬೇಡಿಕೆ ಕಳಿಸುವಲ್ಲಿ ನಾವೂ ಇತರರಂತೆಯೇ ಮುಂದಾದೆವು. ಕಟ್ಟಡ ಬಂದಿತು. ಆದರೆ ಈ ವಿದ್ಯಾರ್ಥಿಗಳು ಬರಲಿಲ್ಲ. ಇದ್ದವರೂ ಸುಣ್ಣ ಬಳಿದ ಗೋಡೆಗಳ ಮೇಲೆ ಇದ್ದಲಿನಿಂದ ಗೀಚುತ್ತಾರೆ. ಇಂತಹದೊಂದೇ ಇವರು ಸ್ವಪ್ರೇರಣೆಯಿಂದ ಮಾಡುವ ಕೆಲಸ'' ಎಂದು ಗೋಡೆಯತ್ತ ಕೈಮಾಡಿ ಇಷ್ಟೊತ್ತು ಸುಮ್ಮನಿದ್ದ ಉಪಾಧ್ಯಾಯರೊಬ್ಬರೆಂದರು. ನಾಗರಿಕರಿಗೆ ಶೋಭಿಸುವ ಶುಭ್ರ ಗೋಡೆಗಳ ಮೇಲೆ ಕಾಡಿನ ಮಕ್ಕಳ ಪರಿಶುದ್ಧ ಕಲೆಯ ಸುಂದರ ಮಾದರಿಗಳಿದ್ದವು. ಕೆಲವೇ ರೇಖೆಗಳಲ್ಲಿ ಜಿಂಕೆ, ಹಂದಿ, ನವಿಲು, ಬೇಟೆಗಾರ ನೃತ್ಯಕಾರರನ್ನು ಎಳೆಯರು ಮೂಡಿಸಿದ್ದು, ಕಲಾಪ್ರೇಮಿಗಳನ್ನು ಮುಗ್ಧರನ್ನಾಗಿ ಮಾಡುವಂತಿತ್ತು. ಶಹರವಾಸಿಯೊಬ್ಬ ಇವನ್ನು ರೂಢಿಸಿಕೊಂಡಿದ್ದರೆ ಕಲಾಪ್ರವೀಣನೆಂದು ವಿಮರ್ಶಕರಿಂದ ಹೊಗಳಿಸಿಕೊಳ್ಳುತ್ತಿದ್ದ. ಆದರೆ ಆದಿವಾಸಿಗಳಿಗೆ ಅಕ್ಷರಾಭ್ಯಾಸ ಮಾಡಿಸಹೊರಟ ಶಿಕ್ಷಕನಿಗೆ ಅದರ ಬೆಲೆ ಹೇಗೆ ಅರಿವಾಗಬೇಕು?

ನಾರಾಯಣಪುರ ಚಿಕ್ಕ ಊರು. ಅಲ್ಲಿಯ ಬಸ್ ನಿಲ್ದಾಣದಲ್ಲಿ ಭೇಟಿಯಾದ ಶಿಕ್ಷಕಿಯೊಬ್ಬಳ ಅನುಭವಗಳು ಸ್ವಾರಸ್ಯಕಾರಿಯಾಗಿದ್ದವು. ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸಾಗಿ ನಾಲ್ಕು ವರ್ಷವಾದರೂ ನೌಕರಿ ಸಿಗಲಿಲ್ಲ. ಆದರೆ ಆದಿವಾಸಿಗಳ ಶಿಕ್ಷಕಿ ಎಂದು ಹೋಗಲು ಒಪ್ಪಿದೊಡನೆ ನೌಕರಿ ಸಿಕ್ಕಿಬಿಟ್ಟಿತು. ಆದರೆ ನಿಜವಾದ ತೊಂದರೆ, ಏಕಪುಲಾಹಳ್ಳಿಯ ಶಾಲೆಗೆ ನೇಮಕವಾದಾಗ ಪ್ರಾರಂಭವಾಯಿತು. ವಾಸಿಸಲು ಯೋಗ್ಯವಾದ ಒಂದೇ ಒಂದು ಕೋಣೆ ಆ ಗ್ರಾಮದಲ್ಲಿ ಸಿಗಲಿಲ್ಲ. ಎಲ್ಲರೂ ಭಿಕ್ಷುಕರಂತೆ ಜೋಪಡಿಗಳಲ್ಲಿ ವಾಸಿಸುತ್ತಾರೆ. ಊರಲ್ಲಿ ಒಳ್ಳೆಯ ನೀರಿನ ಒಂದೂ ಬಾವಿಯಿಲ್ಲ, ಕಕ್ಕಸು ಇಲ್ಲ. ಎಲ್ಲರೂ ಹಳ್ಳದ ನೀರು ಬಳಸುತ್ತಾರೆ. ಚಹಾದಂಗಡಿ ಚಲಚ್ಚಿತ್ರಗಳಂತೂ ದೂರದ ಮಾತಾದವು ಎಂದು ಆಕೆ, ತನ್ನ ಅನುಭವಗಳನ್ನು ಹೇಳಿದಾಗ ಜೊತೆಯಲ್ಲಿದ್ದಾಕೆ, ''ಇದೆಲ್ಲ ನಿನಗೆ ಮೊದಲೇ ಗೊತ್ತಿರಲಿಲ್ಲವೇ?'' ಎಂದು ಸಹಾನುಭೂತಿಯಿಂದ ಕೇಳಿದಳು. ''ನೌಕರಿ ಸುಲಭವಲ್ಲವೆಂದು ತಿಳಿದಿದ್ದರೂ ಇಷ್ಟು ಕಷ್ಟದ್ದು ಎಂದು ಅನಿಸಿರಲಿಲ್ಲ, ಹಿಂದಿಯಲ್ಲಿ ಮಾತನಾಡಲು ಎಷ್ಟು ಸಲ ಹೇಳಿದರೂ ಈ... ಮಕ್ಕಳು ತಮ್ಮ ಗೊಂಡೀ ಭಾಷೆ ಬಿಟ್ಟು ಬೇರೆ ಕಲಿಯುವದೇ ಇಲ್ಲ, ಇಂದು ಬೇಟೆ, ನಾಳೆ ಹುಣ್ಣಿಮೆ ಎಂದು ಒಂದಿಲ್ಲೊಂದು ನೆವದ ಮೇಲೆ ಶಾಲೆ ತಪ್ಪಿಸುತ್ತಲೇ ಇರುತ್ತಾರೆ. ಶಾಲೆಗೆ ಬರುವಾಗಲೂ ಬಿಲ್ಲು ಬಾಣದೊಂದಿಗೆ ಬಂದು ಹಕ್ಕಿ-ಕೆಂಚಳಿಲಿನ ಶಿಕಾರಿಯಲ್ಲಿ ತೊಡಗುತ್ತಾರೆ... ಒಮ್ಮೆ ಏನಾಯಿತಂತೀಯಾ? ಕರಿ ಹಲಗೆಯ ಮೇಲೆ ಬರೆಯುತ್ತಿದ್ದೆ. ಒಮ್ಮೆಲೇ ವಿದ್ಯಾರ್ಥಿಗಳು ಶಾಂತರಾದ್ದರಿಂದ ಹಿಂದಿರುಗಿ ನೋಡುತ್ತೇನೆ, ವರ್ಗದಲ್ಲಿ ಒಬ್ಬರೂ ಇಲ್ಲ! ಶಾಲೆಯ ಪಕ್ಕದ

ಎತ್ತರ ಮರದ ಪೊದೆಯಲ್ಲಿ ಒಂದು ಹಾರು ಬೆಕ್ಕಿದೆ ಎಂದು ಕಾಕದೃಷ್ಟಿಯ ಹುಡುಗನೊಬ್ಬ ಸಾರಿದ್ದರಿಂದ ಅದರ ಶಿಕಾರಿಗೆ ಇಡೀ ವರ್ಗವೇ ಓಡಿಹೋಗಿತ್ತು. ಒಬ್ಬಿಬ್ಬರು ಕೋತಿಗಳಂತೆ ಮರವೇರಿದರೆ, ಇನ್ನಿತರರು ಬಾಣ, ಕಲ್ಲುಗಳಿಂದ ಕೊಲ್ಲಲು ಸಜ್ಜಾಗಿ ನಿಂತಿದ್ದರು. ಅದು ನಿಶಾಚರ ಪ್ರಾಣಿಯಾದ್ದರಿಂದ ಈ ಬೇಟೆಗಾರರಿಗೆ ಏನೂ ತೊಂದರೆಯಾಗಲಿಲ್ಲ. ಅದರ ಮಾಂಸ ಅತಿ ರುಚಿಕರವೆಂದು ನನಗೂ ಕೊಡಬಂದಾಗ ವಾಂತಿಮಾಡುವಂತಾಗಿತ್ತು... ಇಂತಹ ಹುಡುಗರಿಗೆ ಏನು ತಾನೇ ಕಲಿಸಲು ಸಾಧ್ಯ ? ಒತ್ತಾಯ ಮಾಡಿದರೆ ಅದೇ ಬಾಣ ಪ್ರಯೋಗ ನನ್ನ ಮೇಲಾದರೇನು ಗತಿ ? ಎಂದು ಹೆದರುತ್ತೇನೆ. ಕಳೆದ ಮೂರು ವರ್ಷಗಳಲ್ಲಿ ಒಬ್ಬ ವಿದ್ಯಾರ್ಥಿಗೂ ಸರಿಯಾಗಿ ಬಳ್ಳಿ ಕಲಿಸಲು ಬಾರದೇ ಹೋಯಿತು.... ಹೋಗಲಿ, ತಿಂಗಳು ತಿಂಗಳಿಗೆ ಸರಿಯಾಗಿ ಸಂಬಳ ಸಿಗುತ್ತಿದೆಯೆಂಬುದೇ ಸಮಾಧಾನ. ದಿನಾಲೂ ಜಗದಲಪುರದಿಂದ ಪ್ರವಾಸ ಮಾಡುತ್ತೇನೆ'' ಎಂದಳು ಗೆಳತಿ. ''ಪ್ರತಿದಿನ ಪ್ರವಾಸದಿಂದ ವೇಳೆ ಮತ್ತು ಹಣದ ಅಪವ್ಯಯವಾಗುವುದಿಲ್ಲವೇ ?'' ಎಂದಾಗ ಆಕೆ ನಕ್ಕು, ಕಣ್ಣು ಮಿಟುಕಿಸಿ, ''ಪ್ರತಿದಿನ ಶಾಲೆ ನಡೆಸುತ್ತೇನೆ! ಎಂದು ಯಾರಪ್ಪನಿಗೆ ಬರೆದುಕೊಟ್ಟಿದ್ದೇನೆ ? ಒಂದೋ, ಎರಡೋ ವಾರಕ್ಕೊಮ್ಮೆ ಹೋಗಿ ಹಳ್ಳಿಯ ಹಿರಿಯರನ್ನು ಮಾತನಾಡಿಸಿ, ಹಾಜರಿ ತುಂಬಿ, ಅವರು ಕೊಟ್ಟ ತರಕಾರಿ, ಜೇನುತುಪ್ಪ ಹೊತ್ತು ಹಿಂದಿರುಗುತ್ತೇನೆ. ಇದರಿಂದಾಗಿ ನನಗೂ ಅವರಿಗೂ ಕೂಡಿಯೇ ನೆಮ್ಮದಿಯಿಂದ ಇರುವಂತಾಗಿದೆ'' ಎನ್ನುತ್ತಿದ್ದಂತೆ, ಅವರನ್ನು ಜಗದಲಪುರಕ್ಕೆ ಕರೆದೊಯ್ಯುವ ಬಸ್ಸು ಬಾರದೆ ಇದ್ದಿದ್ದರೆ ಇನ್ನಷ್ಟು ಸ್ವಾರಸ್ಯಕರ ಸಮಾಚಾರ ಕೇಳಿಸಿಕೊಳ್ಳಬಹುದಿತ್ತು.

ಅಬುಜ್‌ಮಾಡ್ ಸುತ್ತಲ ಪ್ರದೇಶದಲ್ಲಿ ಹತ್ತಾರು ಮನೆಗಳಿರುವ ಹಳ್ಳಿಗಳೇ ಹೆಚ್ಚು. ಅಂಥಲ್ಲಿ ಶಾಲೆ ನಡೆಸುವದು ಕಠಿಣವಾದ್ದರಿಂದ ಛೋಟೆ ಡೊಂಗರ ಎನ್ನುವಲ್ಲಿ ಒಂದು ಶಾಲೆ ಮತ್ತು ಹಾಸ್ಟೆಲನ್ನು ಆದಿವಾಸಿ ಮಕ್ಕಳಿಗಾಗಿ ತೆರೆಯಲಾಗಿದೆ. ಅಲ್ಲಿ ಇರುವ ಹತ್ತಾರು ವಿದ್ಯಾರ್ಥಿಗಳು ಹಾಸ್ಟೆಲಿನಲ್ಲಿ ಕಾಣಸಿಗದಿದ್ದರೂ ತಮ್ಮ ಹಳ್ಳಿಗಳಲ್ಲಿ ಖಂಡಿತವಾಗಿ ಸಿಗುತ್ತಾರಂತೆ. ಶಿಕ್ಷಕನು ತನ್ನ ವೃತ್ತಿಗಿಂತ ಕೃಷಿಯಲ್ಲಿ ಮನಸ್ಸು, ವೇಳೆ ತೊಡಗಿಸಿದರೆ ಹೆಚ್ಚಿನ ಸಂಪಾದನೆ ಸಾಧ್ಯವೆಂದು ಅನುಭವದಿಂದ ಅರಿತುಕೊಂಡದ್ದರಿಂದ ವಿದ್ಯಾರ್ಥಿಗಳನ್ನು ಕೃಷಿಯಲ್ಲಿ ತರಬೇತು ಮಾಡುತ್ತಾನೆ. ಅಕ್ಷರಾಭ್ಯಾಸ ಒಲ್ಲದ ಎಳೆಯರು, ಶಿಕ್ಷಕನು ವಹಿಸಿದ ಈ ಕೆಲಸ ಚಾಚೂ ತಪ್ಪದೇ ಮಾಡಿಕೊಡುತ್ತಾರೆ. ವಿದ್ಯಾರ್ಥಿಗಳ ಊಟ, ಅಡಿಗೆ, ಬಟ್ಟೆಬರೆ, ಪುಸ್ತಕ, ದೀಪಗಳಿಗೆ ಮೀಸಲಾದ ಹಣ ಏನಾಗುತ್ತದೆ ಎಂದು ಬೇರೆ ಹೇಳಬೇಕೆ ?

ಬಸ್ತರ ಜಿಲ್ಲೆಯ ಕೇಂದ್ರವಾದ ಜಗದಲಪುರದಲ್ಲಿ ದಸರಾ ಹಬ್ಬವನ್ನು ದೊಡ್ಡ ಪ್ರಮಾಣದಲ್ಲಿ ಆಚರಿಸುತ್ತಾರೆ. ಹತ್ತು ದಿನ ನಡೆಯುವ ಈ ಸಮಾರಂಭ ಪ್ರದೇಶದ ಆದಿವಾಸಿ ಗಳಿಗೆಲ್ಲ ಅತಿ ಆಕರ್ಷಕವಾಗಿದ್ದರಿಂದ ದೂರ ದೂರದಿಂದ ಇಲ್ಲಿ ಬಂದು ಠಾಣ್ಯ ಹಾಕಿರುತ್ತಾರೆ. ಆದಿವಾಸಿಗಳ ಹಳ್ಳಿಗಳಲ್ಲಿ ನಡೆಸಲಾಗುತ್ತದೆಯೆಂದು ಹೇಳಲಾಗುವ ಪ್ರೌಢಶಾಲೆಗಳ ಸಂಚಾಲಕರು ತಮ್ಮ 'ವಿದ್ಯಾರ್ಥಿ'ಗಳೊಂದಿಗೆ ಈ ದಸರಾ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ. ತಾವೇನು ಸಾಧಿಸಿದ್ದೇವೆ ? ಎಂದು ಪ್ರಚಾರ ಮೂಲಕ ತಮ್ಮ ಅಧಿಕಾರಿಗಳ ಲಕ್ಷ್ಯಕ್ಕೆ ತರುವ ಹವಣಿಕೆಯಲ್ಲಿದ್ದವರಿಗೆ ಕ್ಯಾಮರಾ ಹೊತ್ತವರೆಲ್ಲ ಪತ್ರಕರ್ತರೆಂಬ ಭ್ರಮೆ ಬೇರೆ! ಹೀಗಾಗಿ ವಿದ್ಯಾರ್ಥಿಗಳೊಂದಿಗೆ ತಮ್ಮದೊಂದು ಛಾಯಾಚಿತ್ರ ತೆಗೆಯುವಂತೆ ನನ್ನನ್ನು ವಿನಂತಿಸಿ ಕೊಂಡರು. ನಿರಕ್ಷರಿಗಳಿಗೆಲ್ಲ ತರಬೇತಿಯಿಂದಾಗಿ ಹೆಸರು ಬರೆಯಲು ಕಲಿಸಿದ್ದೇವೆ ಎಂದು ತಮ್ಮ ಸಾಧನೆಯ ಬಗ್ಗೆ ಹೇಳಿಕೊಳ್ಳುವಾಗ, ''ಇದೇ ನಿಮ್ಮ ಸಾಧನೆಯೇ ? ಹೆಬ್ಬೆಟ್ಟು ಒತ್ತುವವ

ತನ್ನ ಸಹಿಯಷ್ಟೇ ಹಾಕಲು ಕಲಿತರೆ ಏನು ಅಂತರ ಬೀಳುತ್ತದೆ ?'' ಎಂದು ತುಟಿ ಅಂಚಿಗೆ ನಿಂತ ಮಾತನ್ನು ಪ್ರಯತ್ನಪೂರ್ವಕ ತಡೆಹಿಡಿದದ್ದಾಯಿತು. ಛಾಯಾಚಿತ್ರ ತೆಗೆಸಿಕೊಳ್ಳುವ ಸಂಭ್ರಮದಲ್ಲಿ ಮೂವರು ಶಿಕ್ಷಕರು ನಾಲ್ಕಾರು ಕಡೆ ಓಡಿಹೋಗಿ ಕೆಲ ವಿದ್ಯಾರ್ಥಿಗಳನ್ನು ಹಿಡಿದು ತಂದರು. ಮೋಜಾಗಿರಬೇಕಾದ ಹಬ್ಬದ ಸಮಯದಲ್ಲಿನ ಈ ಅಕ್ಷರಾಭ್ಯಾಸದ ಬಲಾತ್ಕಾರಕ್ಕಾಗಿ ವಿದ್ಯಾರ್ಥಿಗಳು ಸಿಟ್ಟಿಗೆದ್ದು ''ನಮ್ಮ ಅರಸ ಪ್ರವೀಣದೇವ ಭಾಂಜದೇವ ಈ ಕೆಲಸ ನಮಗೆ ಹೇಳಲೂ ಇಲ್ಲ, ನಾವು ಮಾಡಲೂ ಇಲ್ಲ. ಇನ್ನು ನೀವು ಹೇಳಿದರೆ ಮಾಡುತ್ತೇವೆಯೇ ?'' ಎಂದು ಮುಖ ಸಿಂಡರಿಸಿ ಹೊರಟೇ ಹೋದರು. ಇವರ ಕಿವಿ ಹಿಡಿಯಲು ಇವರ ಮಾಂಜಿ (ಮುಖ್ಯಸ್ಥ)ಯನ್ನೇ ಹಿಡಿದು ತರಬೇಕು ಎಂದು ಹುಡುಕಾಡಿ ಕೊನೆಗೆ ಒಬ್ಬ ಬುದ್ದುವನ್ನು ತಂದು ಕೈಯಲ್ಲಿ ಸ್ಲೇಟು ಕೊಟ್ಟು ಆತನೊಡನೆ ನಾಲ್ಕಾರು ಶಿಕ್ಷಕರು ಚಿತ್ರ ತೆಗೆಸಿಕೊಂಡರು ! 'ಬೀಸಸೂತ್ರಿ' (ಇಪ್ಪತ್ತು ಅಂಶಗಳ) ಕಾರ್ಯಕ್ರಮದಲ್ಲಿ ಅಕ್ಷರಾಭ್ಯಾಸ ಪ್ರಚಾರಕ್ಕಾಗಿ ಈ ಚಿತ್ರ ತುಂಬ ಸಹಾಯಕಾರಿಯಾಗುತ್ತದೆ. ತಮಗೊಂದು ಪ್ರತಿಕೊಡಿ ಎಂದು ಯಾಚಿಸಿದಾಗ ಆದಿವಾಸಿಗಳ ಶಿಕ್ಷಣದ ದುಃಸ್ಥಿತಿಗೆ ಮರುಗಬೇಕಾಯಿತು.

ಆದಿವಾಸಿಗಳಿಗೆ ಕಲಿಸುವ ಶಿಕ್ಷಕರಿಗೆ ಮತ್ತು ಶಿಕ್ಷಣಾಧಿಕಾರಿಗಳಿಗೆ ತರಬೇತಿ ಕೊಡುವ ಸಂಶೋಧನ ಮತ್ತು ಉಚ್ಚ ಶಿಕ್ಷಣಾಲಯವೊಂದನ್ನು ಗೊಂಡರು ಬಹಳ ಸಂಖ್ಯೆಯಲ್ಲಿರುವ ಊರೊಂದರಲ್ಲಿ ಕಾಲು ಶತಮಾನದ ಹಿಂದೆ ಸ್ಥಾಪಿಸಲಾಯಿತು. ಮೇಲಧಿಕಾರಿಗಳಿಗೆ ಬೇಡವಾದವರನ್ನು, ಏಕಾಧಿಪತ್ಯಕ್ಕೆ ಅಡಚಣೆ ತರುವವರನ್ನು ಸಾಗಹಾಕಲು ಈ ಸಂಸ್ಥೆಯನ್ನು ಬಳಸಲಾಗುತ್ತದೆ. ಆದಿವಾಸಿಗಳ ಒಳಿತಿನಲ್ಲಿ ವಿಶ್ವಾಸವಿರದ ಈ ಸಿಬ್ಬಂದಿ ಏನನ್ನು ತಾನೇ ಸಾಧಿಸೀತು ? ಶಿಕ್ಷಣ, ಸಂಶೋಧನ, ತರಬೇತಿ, ಪ್ರಕಟಣೆ ಒಂದೂ ಈ ಕಾಲು ಶತಮಾನದಲ್ಲಿ ನಡೆದೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಆಂಧ್ರಪ್ರದೇಶದ ಪ್ರತಿಭಾಶಾಲಿ ಛಾಯಾ ಚಿತ್ರಗಾರರೊಬ್ಬರು ಸಿಕ್ಕಿದ್ದು ಆದಿವಾಸಿಗಳ ಪುಣ್ಯ ಎನ್ನಬೇಕು. ಇದರಿಂದಾಗಿ ಅವರ ಜೀವನದ ವಿರಳ ಸನ್ನಿವೇಶಗಳ ಚಿತ್ರಗಳನ್ನು ಸೆರೆಹಿಡಿದು ಇಟ್ಟಿದ್ದಾರೆ. ಆದರೆ ದುರ್ದೈವದಿಂದ ಈತ ಸಂಸ್ಥೆಯ ನಿರ್ಲಕ್ಷ್ಯದಿಂದಾಗಿ, ವೈಯಕ್ತಿಕ ಕಾರಣಗಳಿಂದಾಗಿ ಆತ್ಮಹತ್ಯೆ ಮಾಡಿಕೊಂಡರಂತೆ. ಅವರ ಕೃತಿಗಳೊಂದೇ ಈ ಸಂಸ್ಥೆಯ ಕೊಡುಗೆ. ಎರಡೂವರೆ ದಶಕಗಳ ಕಾಲಾವಧಿಯಲ್ಲಿ ಈ ಸಂಸ್ಥೆ ಒಂದೇ ಒಂದು ಕಿರಿ ಕೈಪಿಡಿಯನ್ನು ಮಾತ್ರ (ಇಲ್ಲಿ ಆದಿಮ ಜಾತಿಗಳ ಜೀವನ ಪ್ರತಿನಿಧೀಕರಿಸುವ ವಸ್ತು ಸಂಗ್ರಹಾಲಯವೂ ಇದೆ) ಹೊರತಂದಿತು. ಆದರೆ ಅದರಲ್ಲಿ ತಮಗೆ ಸಲ್ಲಬೇಕಾದ ಗೌರವ ತೋರಿಸಲಿಲ್ಲವೆಂದು ಅಧಿಕಾರಿಗಳಲ್ಲಿ ಒಳಜಗಳ, ವೈಮನಸ್ಯಗಳು ತಲೆದೋರಿದ್ದರಿಂದ ಆ ಕೈಪಿಡಿ ಪ್ರಕಟನೆಗಳನ್ನೆಲ್ಲಾ ರದ್ದು ಮಾಡಬೇಕಾಯಿತು ! ನಂತರ ತಿರುಗಿ ಇಂಥ ಸಾಹಸಕ್ಕೆ ಕೈ ಹಾಕಲಿಲ್ಲ. ಆದಿಮ ಜಾತಿಗಳ ಕಲ್ಯಾಣ ಖಾತೆಗೆ ಈ ಸಂಸ್ಥೆಯ ಆಡಳಿತ ನೋಡಿಕೊಳ್ಳುವುದು ಕಷ್ಟದ್ದಾದ್ದರಿಂದ, ಆದಿವಾಸಿಗಳು ತಪ್ಪಿಯೂ ಸುಳಿಯದ ದೂರದ ರಾಜಧಾನಿಗೆ ಕೊನೆಗೊಮ್ಮೆ ಅದನ್ನು ಸ್ಥಳಾಂತರಿಸಲಾಯಿತು. ನೌಕಾಪಡೆಯ ತರಬೇತಿ ಕೇಂದ್ರವನ್ನು ವಿಶಾಖಪಟ್ಟಣದಿಂದ ದಿಲ್ಲಿಗೆ ಸ್ಥಳಾಂತರಿಸುವ ಯತ್ನದಷ್ಟೇ ಹಾಸ್ಯಾಸ್ಪದ ಈ ಯತ್ನ.

ಹೀಗಿದ್ದೂ ಆದಿವಾಸಿಗಳ ಶಿಕ್ಷಣ ಮತ್ತು ಅಭ್ಯುದಯಕ್ಕೆ ಸರಕಾರ ಹೆಚ್ಚಿನ ಯತ್ನ ಮಾಡಲಿಲ್ಲವೆಂದು ವಿರೋಧಿ ಪಕ್ಷದವರು ಆಪಾದಿಸಿದಾಗ, ಮಂತ್ರಿ ಮಹೋದಯರು ಈ ಬಗ್ಗೆ ತಮ್ಮ ಸರಕಾರ ಮಾಡಿದಷ್ಟು ಸೇವೆ ಈ ಮೊದಲು ಬೇರೆ ಯಾರೂ ಮಾಡಲಿಲ್ಲವೆಂದು ಅವರ ಹೆಸರಿನಲ್ಲಿ ಸೂರೆ ಮಾಡಿದ ಹಣದ ಲೆಕ್ಕ ಮತ್ತು ಶಾಲೆಗಳ ಸಂಖ್ಯೆ ವಿವರಿಸಿದರು. ಈ ಹಣದಿಂದ ಮಂತ್ರಿ, ಸಚಿವರು, ಕಂಟ್ರ್ಯಾಕ್ಟರರು, ಶಿಕ್ಷಣಾಧಿಕಾರಿಗಳು, ಶಿಕ್ಷಕರುಗಳಿಗೆ

ಲಾಭವಾಗಿದೆಯೇ ಹೊರತು ಬಡ ಆದಿವಾಸಿಗಳಿಗಲ್ಲ! ಎಂಬ ಕಟುಸತ್ಯವನ್ನು ಮನಗಾಣಲು ಯಾರೂ ಸಿದ್ಧರಿಲ್ಲ.

ಸ್ವಾತಂತ್ರ್ಯ ಸಿಕ್ಕ ಮೂರು ದಶಕಗಳ ನಂತರ, ಈಗಲಾದರೂ ಈ ಆದಿವಾಸಿಗಳಿಗೆ ಯಾವ ರೀತಿಯಿಂದ ಸಹಾಯ ಮಾಡಿದರೆ ಉಪಯುಕ್ತವಾಗುತ್ತದೆ? ಎಂದು ಶಿಕ್ಷಣವೇತ್ತರು ತಲೆಕೆಡಿಸಿಕೊಳ್ಳದಿದ್ದರೆ ಆಗುವ ನಷ್ಟ ಅಷ್ಟಿಷ್ಟಲ್ಲ. ಆದಿವಾಸಿಗಳು ಮೂಲತಃ ಕಾಡಿನಲ್ಲಿ ಹಾಯಾಗಿ ಜೀವಿಸಬೇಕೆಂಬ ಶಾಂತಿಪ್ರಿಯ ಜನಾಂಗ. ಅವರ ಆಸೆ, ಅಭಿಲಾಷೆಗಳನ್ನು ಸರಿಯಾಗಿ ತಿಳಿದುಕೊಂಡು ಬಳಕೆಯಲ್ಲಿರುವ ಕೆಲ ದೋಷಗಳನ್ನು ತಿದ್ದಿಕೊಳ್ಳಲು ಸಹಾಯ ಮಾಡಿದರೆ ಅವರ ಬಾಳು ಅರ್ಥಪೂರ್ಣವಾದೀತು. ಗಿಡಮರಗಳನ್ನು ಏಕಪ್ರಕಾರವಾಗಿ ಕಡಿಯುತ್ತ ಹೋಗುವ ಅವರಿಗೆ ಕೆಲವೇ ಮರಗಳಿಂದ ಹೆಚ್ಚಿನ ಲಾಭವನ್ನು ಹೇಗೆ ಮಾಡಿಕೊಳ್ಳಬಹುದು? ಎಂಬುದನ್ನು ತಿಳಿಸಿ ಹೇಳಬಹುದು. ಹೊಟ್ಟೆಪಾಡಿಗಾಗಿ ಬೇಟೆಯಾಡಿ ಪ್ರಾಣಿವರ್ಗದ ಸರ್ವನಾಶ ಮಾಡುವುದನ್ನು ತಪ್ಪಿಸಲು ಪ್ರಾಣಿಗಳ ಸಂತಾನೋತ್ಪತ್ತಿಕಾಲ, ನಿಯಂತ್ರಿತ ಬೇಟೆಯೆಂದರೇನು? ಇತ್ಯಾದಿಗಳನ್ನು ಮನವರಿಕೆ ಮಾಡಿಸಬಹುದು. ಅರಣ್ಯವನ್ನು ಸುಟ್ಟು ಕೃಷಿ ಮಾಡುವುದಕ್ಕೆ ಬದಲು ಒಂದೇ ಸ್ಥಳದಲ್ಲಿ ವೈಜ್ಞಾನಿಕವಾಗಿ ಕೃಷಿ ಮಾಡುವ ವಿಧಾನವನ್ನು ಅವರಿಗೆ ಕಲಿಸಬಹುದು.

ತಮಗೆ ಅನುಕೂಲವಾದ ಹೊಸತನವನ್ನು ಸ್ವೀಕರಿಸಲು ಆದಿವಾಸಿಗಳು ಹಿಂಜರಿದವರಲ್ಲ. ಉದಾಹರಣೆಗೆ ಗಾಯ, ಅಪಘಾತ, ರೋಗಗಳ ಪರಿಹಾರಕ್ಕೆ ದೈವಗಳ ಮೊರೆ ಹೋಗುವುದು ಸರ್ವೇಸಾಮಾನ್ಯ. ಆದರೆ ಖಾತ್ರಿಯಾಗಿ ಗುಣಪಡಿಸುವ ಔಷಧಿಗಳು ಇದ್ದರೆ ಅವನ್ನು ಸ್ವೀಕರಿಸುವಲ್ಲಿ, ಸೇವಿಸುವಲ್ಲಿ ಅವರ ಆಕ್ಷೇಪಣೆ ಇಲ್ಲವೆಂಬುದು ಅನುಭವದ ಮಾತು. ಅಕಸ್ಮಾತ್ ನನ್ನ ಭೆಟ್ಟಿಯಾದ ಯುವಕನೊಬ್ಬನಿಗೆ ಕೊಡಲಿಯಿಂದ ಗಾಯವಾಗಿತ್ತು. ಆತನಿಗೆ ಕೊಂಚ ಬರ್ನಾಲ್ ಕೊಟ್ಟದ್ದರಿಂದ ಎಷ್ಟೋ ವಾಸಿಯಾಗಿ ತಮ್ಮ ಹಳ್ಳಿಗೆ ಡಾಕ್ಟರರು ಬಂದಿದ್ದಾರೆಂಬ ಸುದ್ದಿ ಹರಡಿತು. ವೇಳೆಗಿರಲಿ ಎಂದು ಒಯ್ದ ಜ್ವರ, ಕೆಮ್ಮು, ಅತಿಸಾರ ಶಮನ ಮಾಡುವ ಮಾತ್ರೆಗಳಿಗೆಲ್ಲ ತುಂಬಾ ಬೇಡಿಕೆ ಬಂದಿತ್ತು. ಹಬ್ಬ ಹುಣ್ಣಿಮೆಗಳಲ್ಲಿ ವಿಪರೀತ ಮದ್ಯ ಸೇವನೆಯಿಂದ, ಮೈತುಂಬ ಸಾಲ ಕೊಟ್ಟವನು ಹೇಗೆ ಅವರನ್ನು ಸುಲಿಯುತ್ತಾನೆ ಎಂದು ಮನಗಾಣಿಸಬಹುದು. ಕಾಡಿನ ಸಾಮಗ್ರಿಯಿಂದಲೇ ನಿತ್ಯೋಪಯೋಗಿ ಸಾಮಾನು, ಆಟಿಗೆಗಳನ್ನು ತಯಾರಿಸಲು ಅವರಿಗೆ ಕಲಿಸಬಹುದು. ನೃತ್ಯ-ಸಂಗೀತ ಕಲೆಗಳಿಗೆ ಪ್ರೋತ್ಸಾಹ ಕೊಟ್ಟು ಅವರ ಜೀವನವನ್ನು ಹೆಚ್ಚು ಅರ್ಥಪೂರ್ಣ ಮಾಡಬಹುದು. ಎಲ್ಲ ಬಿಟ್ಟು ಅವರನ್ನು ನಮ್ಮದೇ ಪಡಿಯಚ್ಚಿನಲ್ಲಿ ಸೇರಿಸಿ ಕೆಲಸಕ್ಕೆ ಬಾರದವರನ್ನಾಗಿ ಮಾಡುವಲ್ಲಿ ನಾವೇ ಹೆಚ್ಚು ಜವಾಬ್ದಾರರಾಗುತ್ತೇವೆ. ಉತ್ತಮ ಶಿಲ್ಪಿಯಾಗಬಹುದಾಗಿದ್ದವನನ್ನು ನಿರಕ್ಷರಿ ಎಂಬ ನೆವದ ಮೇಲೆ, ಒತ್ತಾಯದಿಂದ ಅಕ್ಷರಾಭ್ಯಾಸ ಮಾಡಿಸಿ ಅವರನ್ನು ಬ್ಯಾಂಕು, ಅಂಚೆ, ಅರಣ್ಯ ಖಾತೆಗಳಲ್ಲಿ ನೌಕರಿಗೆ ಸೇರಿಸಿದರೆ ಏನು ಸಾಧಿಸಿದಂತೆ ಆಯಿತು? ಆದ್ದರಿಂದಲೇ ಆದಿವಾಸಿಗಳಿಗೂ ಔಪಚಾರಿಕ ಅಕ್ಷರಾಭ್ಯಾಸ ಪದ್ಧತಿ ಸಲ್ಲದು.

# 17. ಆದಿವಾಸಿ ಆಕರ್ಷಣೆ



ರಾಜಕಾರಣಿ, ಅಧಿಕಾರಿವರ್ಗ, ಸಮಾಜ ಸುಧಾರಕರು, ಪತ್ರಿಕೋದ್ಯಮಿಗಳು, ಛಾಯಾಚಿತ್ರಕಾರರು ಮುಂತಾದವರೆಲ್ಲ ಆದಿವಾಸಿಗಳಿಂದ ಆಕರ್ಷಿತರಾದರೂ ಅದಕ್ಕೆ ಕಾರಣ ಬೇರೆ ಬೇರೆ. ಕಾಡು-ಮೇಡುಗಳಲ್ಲಿ ಅಲೆದು ಒಂದು ವರ್ಷಕಾಲ ಮಧ್ಯಪ್ರದೇಶದ ವಾಸದ ನಂತರ ಈ ಆಕರ್ಷಣೆಯ ಆಳ ಅರಿಯುವಂತಾಯಿತು. ಶತಕಗಳಿಂದ ಸ್ನಾನಗೃಹದ ಸ್ವಾತಂತ್ರ್ಯದಲ್ಲಿ ಬಾಳಿ ಬದುಕಿದವರು ಆ ಸ್ಥಿತಿಯಲ್ಲಿ ಸುಸಂಸ್ಕೃತರೆನಿಸಿಕೊಂಡವರ ಕಣ್ಣಿಗೆ ಬಿದ್ದಾಗ ಕೇಳಬೇಕೇ? ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಕಾಲದಲ್ಲಿ ಬಸ್ತರ ಜಿಲ್ಲೆಯ ಹೃದಯಸ್ಥಾನ ದಲ್ಲಿರುವ ಆದಿವಾಸಿಗಳು ಇನ್ನೂ ಪರ್ಣಗಳನ್ನೇ ಬಟ್ಟೆಯಾಗಿ ಬಳಸುತ್ತಿದ್ದರು. ಮೊಲ,

ಜಿಂಕೆಗಳಿಗೆ ಇಲ್ಲದ ಸಂಕೋಚ ಈ ಜನರಿಗೂ ಇರಲಿಲ್ಲ. ಅಂತೆಯೇ ಲಿಂಗಭೇದವಿಲ್ಲದೇ ಹುಲ್ಲೆಯ ತೆರದಲ್ಲಿ ಕಣಿವೆಗಳನ್ನು ಇಳಿದು ಬೆಟ್ಟವೇರಿ, ಕಾಡು ಹೊಕ್ಕು, ನಿಸರ್ಗದ ಮಕ್ಕಳಾಗಿ, ವಾಸಿಸಿದರು. ಹುಲಿ-ಕರಡಿಗಳ ನಗ್ನತೆಯ ಬಗ್ಗೆ ಯಾರೂ ಲಕ್ಷ್ಯ ಪೂರೈಸುವದಿಲ್ಲವಾದಂತೆ ಈ ಬುಡಕಟ್ಟಿನವರ ಅರೆನಗ್ನತೆಯತ್ತ ಲಕ್ಷ ಕೊಡುವವರು ಯಾರೂ ಇರಲಿಲ್ಲ. ಆದರೆ ಹೊರಗಿನ ವರೆಲ್ಲ ಅವರ ಬೀಡುಗಳ ಮೇಲೆ ದಾಳಿಯಿಡಲು ಪ್ರಾರಂಭಿಸಿದಾಗ ಹಾಗೇ ಇರಲಾದೀತೇ ?

ಒಂದಿಲ್ಲೊಂದು ನೆಪದ ಮೇಲೆ ಅರಣ್ಯಾಧಿಕಾರಿಗಳು, ಗುತ್ತಿಗೆದಾರರು, ಪೊಲೀಸರು, ಅವರ ಹಳ್ಳಿಗಳಿಗೆ ಭೇಟಿ ಕೊಟ್ಟಾಗ, ಕಾಮುಕ ಕಣ್ಣುಗಳು ಕಾಳಸರ್ಪದಂತೆ ಅವರ ಅಂಗಾಂಗಗಳ ಮೇಲೆ ಹರಿದಾಡಿದವು. ಇಲ್ಲದ ಅವಕಾಶ ಕಲ್ಪಿಸಿಕೊಂಡು ಅಪರಿಚಿತ ಗಂಡು ಅವಯವಗಳು ಅಬಲೆಯರ ಉಬ್ಬು-ತಗ್ಗುಗಳನ್ನು ಅಳೆದು ನೋಡಿದವು. ಇದರಿಂದ ಭೋಳೆ ಸ್ವಭಾವದ ಸರಳ ಜೀವಿಗಳು ಕಣ್ಣು ಬಿಟ್ಟು ನೋಡುವಂತಾಯಿತು. ಉಡುತ್ತಿದ್ದ ಕಿರುತುಂಡು ಸ್ವಲ್ಪ ಉದ್ದವಾಯಿತು. ಭುಜದ ಮೇಲೆ ಸೆರಗು ಧರಿಸಲಾರಂಭಿಸಿದರು. ಕಚ್ಚೆ ಉಡುವವ, ನಿಕ್ಕರ್ ಧರಿಸಲಾರಂಭಿಸಿದಾಗ ಪ್ರತಿ ನಿಮಿಷಕ್ಕೂ ಅದು ಜಾರುವಂತೆ ಭಾಸವಾಗುವ ಹಾಗೆ ಸೆರಗು ಅವರ ಮರ್ಮಸ್ಥಾನ ಮುಚ್ಚಲು ಅಸಮರ್ಥವಾಯಿತು. ಸ್ವಾಭಾವಿಕವಾದ ನಗ್ನತೆಗಿಂತ ಅರೆನಗ್ನತೆ ಹೆಚ್ಚು ಆಕರ್ಷಕವಾಯಿತು. ವಾರಕ್ಕೊಮ್ಮೆ ದೂರದಲ್ಲಿ ನಡೆಯುವ ಸಂತೆಗೆ ಹೊರಟವರಿಗೆ ನಾಗರಿಕರ ದರ್ಶನ ಹೆಚ್ಚು ಹೆಚ್ಚಾಗಿ ಲಭಿಸಲಾರಂಭಿಸಿದ್ದರಿಂದ, ಕಿರಿ ಸೆರಗನ್ನು ನಂಬುವಂತೆ ಇರಲಿಲ್ಲವಾದ್ದರಿಂದ, ಹೆಚ್ಚಿನ ಬಟ್ಟೆ (ಒಂದು ಅಂಗವಸ್ತ್ರ)ಯಿಂದ ಶರೀರ ಮುಚ್ಚಿಕೊಳ್ಳುವುದು ರೂಢಿಯಲ್ಲಿ ಬಂದಿತು. ದೂರದ ಪಟ್ಟಣಗಳಲ್ಲಿ ನಡೆಯುವ ಜಾತ್ರೆ, ನೃತ್ಯಕೂಟಗಳಿಗೆ ಹೊರಟು ನಿಂತಾಗ ಮನೆಯಲ್ಲಿ ಇದ್ದುಬಿದ್ದ ಚಿಂದಿಪಂದಿಗಳನ್ನು ಸುತ್ತಿಕೊಳ್ಳುವ ಜನ ಕೋಡಂಗಿಗಳಾಗಿ ಕಾಣುತ್ತಾರೆ.

ಬಸ್ತರ ಜಿಲ್ಲೆಯ ಕೇಂದ್ರವಾದ ಜಗದಲಪುರದಲ್ಲಿ ನಡೆಯುವ ಎರಡು ವಾರಗಳ ದಸರಾ ಹಬ್ಬ ಸುತ್ತಮುತ್ತಲಿನ ಆದಿವಾಸಿಗಳಿಗೆ ವಿಶೇಷ ಆಕರ್ಷಣೆ. ಈ ಆದಿವಾಸಿಗಳನ್ನು ನೋಡಬಂದ ಪಟ್ಟಣಿಗರಿಗೆ ಕಂಬಳಿ, ಚಾದರ, ಜಮಖಾನೆಗಳನ್ನು ರಕ್ಷಾಕವಚದಂತೆ ಸುತ್ತಿಕೊಂಡು ಬರುವ ಆದಿವಾಸಿಗಳನ್ನು ನೋಡಿದರೆ ನಿರಾಸೆಯಾಗದಿರದು. ಆದರೆ ಕಾಮುಕರಿಗೆ ಕ್ಷ-ಕಿರಣದ ಕಣ್ಣುಗಳಿರುವದರಿಂದ, ಎಲ್ಲವೂ ಗೋಚರಿಸುವದು. ಅಂಥವರು ಅರಳಿದ ಹೂಗಳಿಗೆ ಮುತ್ತುವ ದುಂಬಿಗಳಂತೆ. ಹರೆಯದ ಹೆಣ್ಣುಗಳನ್ನು ಹಿಂಬಾಲಿಸುತ್ತ ಅಲೆಯುತ್ತಿರುತ್ತಾರೆ. ಆದಿವಾಸಿ ಅಬಲೆಯರ ಸರಳ ನಡತೆ, ಪುಕ್ಕಲು ಸ್ವಭಾವದ ಲಾಭ ಪಡೆದು, ಏನಕೇನ ಪ್ರಕಾರೇಣ ಅವರನ್ನು ಸ್ಪರ್ಶಿಸಿದಾಗಲೇ ನೆಮ್ಮದಿ. ಈ ಆಧುನಿಕರಿಗೆ, ಜಾತ್ರೆಗೆ ಮಾರಲು ಬಂದ ಹಲಬಗೆಯ ಹೊಳಪಿನ ವಸ್ತುಗಳನ್ನು ನೋಡುತ್ತ, ಮೆಚ್ಚಿಗೆ ಸೂಸುತ್ತ ಹೊರಟ ಯುವತಿಯರ ತಂಡದ ಮೇಲೆ ಹಾಯ್ದು, ನಂತರ ಅಲಕ್ಷ್ಯತನದಿಂದ ಬೀಳುವವರನ್ನು ರಕ್ಷಿಸುವಂತೆ ತೋಳ ತೆಕ್ಕೆಯಲ್ಲಿ ಬಂಧಿಸಿದಾಗ ಮುಗ್ಧೆಯರು ಎಚ್ಚರಗೊಂಡಾಗಲೇ ನೆಮ್ಮದಿ ಈ ಸಾಹಸಿಗಳಿಗೆ. ಕ್ಷಣಾರ್ಧದಲ್ಲಿ ಈ ಚಿಕ್ಕ ತೆವಲು ಪೂರೈಸಿಕೊಂಡು ಮಾಯವಾಗಿಬಿಡುವದರಿಂದ, ಕನ್ನೆಯರು ಬೆಪ್ಪಾಗಿ, ಒಬ್ಬರನ್ನೊಬ್ಬರು ನೋಡಿ ನಕ್ಕು ಮುಂದರಿಯುವರು. ದಸರಾ ಜಾತ್ರೆಯ, ತೇರಿನ ಗದ್ದಲದಲ್ಲಿ ಈ ನಾಗರಿಕ ಕಾಮಣ್ಣಗಳು, ಎಳೆಯರನ್ನು ಹಿಚುಕಿ, ಪರಚಿ, ಅದುಮಿ, ನೋಯಿಸಿ ನೆಮ್ಮದಿ ಪಡುವರು. ಪೊಲೀಸರನ್ನು ಕಂಡರೇ ಹೌಹಾರುವ ಪೋರಿಗಳು ದೂರಿಕೊಳ್ಳುವದಂತೂ ದೂರವೇ ಉಳಿಯಿತು.

ಆದಿವಾಸಿಗಳ ರಮ್ಯ ಜೀವನದ ವಿವರಗಳನ್ನು ಪೂರೈಸಿ ತಂತಮ್ಮ ಪತ್ರಿಕೆಗಳ ಪ್ರಸಾರ

ಹೆಚ್ಚಿಸಲು ಯತ್ನಿಸುವ ಪತ್ರಿಕಾಕರ್ತರ ಕ್ಯಾಮರಾಗಳು ಅವರ ಆಕರ್ಷಕ ಭಂಗಿಗಳ ಛಾಯಾಚಿತ್ರಗಳನ್ನು ಸೆರೆಹಿಡಿಯುವ ಹವಣಿಕೆಯಲ್ಲಿ ಇರುತ್ತವೆ. ಹಣದಾಸೆ ತೋರಿಸಿ, ಹಳ್ಳಿಯ ಹಿರಿಯನಿಗೆ ಕುಡಿಸಿ, ಆತನಿಂದ ಜನರನ್ನು ಬೆದರಿಸಿ ಬೇಡಿಕೆಗೆ ತಕ್ಕಂತೆ ಭಾವಚಿತ್ರಗಳನ್ನು ಪಡೆಯುವದರಲ್ಲಿ ಇವರು ನಿಸ್ಸೀಮರು. ಇದರಿಂದಾಗಿ ಪತ್ರಿಕೆಗಳಲ್ಲಿ ಪ್ರಕಟವಾಗುವ ಬರಿಮೈಯ, ತುಂಬೆದೆಯ ಕಾಡಿನ ಕುವರಿಯರನ್ನು ಕಂಡು ಅವರೆಲ್ಲ ಇರುವದೇ ಹಾಗೆ! ಎಂಬ ಭ್ರಮೆಯಲ್ಲಿ ಓದುಗರಿದ್ದರೆ ಆಶ್ಚರ್ಯವಿಲ್ಲ. ಪತ್ರಿಕಾಕರ್ತರು ಇಂಥ ಚಿತ್ರಗಳನ್ನು ಹೇಗೆ ದೊರಕಿಸುತ್ತಾರೆಂದು ಹಳ್ಳಿಯ ಹಿರಿಯರಿಂದಲೇ ಅರಿಯುವದು ಮೋಜಾಗಿರುತ್ತದೆ. ವಿದೇಶಿಯನೊಬ್ಬ ಈ ಆದಿವಾಸಿಗಳನ್ನೂ ಶಿಲಾಯುಗದವರಂತೆ ವಾಸಿಸುತ್ತಾರೆಂದು ಭ್ರಮಿಸಿ ಅವರ ಛಾಯಾಚಿತ್ರಣಕ್ಕೆ ಸಹಾಯ ಕೋರಿ ಕಲಕತ್ತಾದ ಮಾನವ ವಿಕಾಸ ಸಂಶೋಧನಾ ಕೇಂದ್ರಕ್ಕೆ ವಿನಂತಿಸಿಕೊಂಡ. ಅವರು ಮಧ್ಯಪ್ರದೇಶದ ಆದಿವಾಸಿ ಸಂಶೋಧನಾ ಸಂಸ್ಥೆಯ ನೆರವು ಕೇಳಿದರು. ಮಾರ್ಗದರ್ಶಿಯೊಂದಿಗೆ ವಿದೇಶಿಯನನ್ನು ಹೊತ್ತ ಸರಕಾರಿ ಜೀಪು, ರಾಜ್‌ನಾಂದ್‌ಗಾಂವ್ ಮೂಲಕ ಕೋಕಾಮೇಟಾಕ್ಕೆ ಧಾವಿಸಿತು. ಆದಿವಾಸಿಗಳು ಮನೆಯಲ್ಲಿ ತಯಾರಿಸುವ ಗಮಗಮಿಸುವ ಸೆರೆ ಆಗಂತುಕರ ಬಾಯಿ ನೀರೂರುವಂತೆ ಮಾಡಿದ್ದರಿಂದ, ಚಹಾ-ಕಾಫಿ-ನೀರುಗಳಿಗೆ ಹೊಟ್ಟೆಯಲ್ಲಿ ಸ್ಥಳ ಮೀಸಲಿಡದೇ ಮದ್ಯದಿಂದಲೇ ತುಂಬಿಸಿ ಕೊಂಡರು. ಅಮಲಿನಲ್ಲಿ ಮಾದರಿ ಹೆಣ್ಣು(ಮಾಡೆಲ್)ಗಳನ್ನು ಹುಡುಕಿಕೊಂಡು ಹೊರಟರು. ಶ್ವೇತ ವರ್ಣೀಯನನ್ನು ನೋಡಲು ಕುತೂಹಲದಿಂದ ಬಂದ ಹೆಣ್ಣುಗಳು ಆತನ ಕೊರಳಿಗಿದ್ದ ಕ್ಯಾಮರಾ ಇನ್ನಿತರ ಯಂತ್ರಗಳನ್ನು ನೋಡಿ ಕ್ಷಣಾರ್ಧದಲ್ಲಿ ಮಾಯವಾಗಿಬಿಟ್ಟರು. ಬಿಲದಲ್ಲಿ ಹೊಕ್ಕ ಇಡಿಯನ್ನು ಮೇಲೆ ತರುವಷ್ಟೇ, ಕಾಡು ಹೊಕ್ಕ ಕುವರಿಯರನ್ನು ಹೊರತರುವುದು ಕಷ್ಟದ್ದೆಂದು ಯತ್ನಿಸಿದಾಗಲೇ ಅರಿಯಬೇಕು! ಜೊತೆಯಲ್ಲಿ ಬಂದ ಮಾಝಿ (ಆದಿವಾಸಿ ಮುಖಂಡ) ತನ್ನ ಅಧಿಕಾರ ಬಳಸಿ, ಆಜ್ಞೆ ಕೊಟ್ಟಾಗಲೇ ಮನಸ್ಸಿಲ್ಲದ ಮನಸ್ಸಿನಿಂದ ಪ್ರತ್ಯಕ್ಷರಾದರು. ಅವರುಟ್ಟ ತುಂಡು ಸೀರೆಯಿಂದ ಜಿಗುಪ್ಸೆಗೊಂಡ ಪತ್ರಿಕಾಕರ್ತನು ನಗ್ನತೆಯ ಛಾಯಾಗ್ರಹಣದ ಪಟ್ಟು ಹಿಡಿದ. ಈ ಸಂದಿಗ್ಧ ಸ್ಥಿತಿಯಿಂದ ಹೇಗೆ ಪಾರಾಗಬೇಕೆಂದು ಅರಿಯದ ಹಿರಿಯನು, ತಮ್ಮ ಸಮಾಜದಲ್ಲಿ ಪರಪುರುಷನ ಎದುರಿನಲ್ಲಿ ನಗ್ನತೆ ನಿಷಿದ್ಧವೆಂದು ನೆಪಹೇಳಿ ಪರ್ಣಗಳ ಬಟ್ಟೆ ಧರಿಸಲು ಅಪ್ಪಣೆ ಕೊಡಿಸಿದ. ನಂತರ ಪ್ರಕಟವಾದ ಅರೆಬೆತ್ತಲೆ ಛಾಯಾಚಿತ್ರಗಳನ್ನು ನೋಡಿದ ವಿದೇಶಿ ಪ್ರವಾಸಿಗಳು ತಮ್ಮ ಕ್ಯಾಮರಾಗಳೊಂದಿಗೆ ಕೊಕಾಮೇಟಾಕ್ಕೆ ಬಂದರೆ ನಿರಾಶೆಗೊಳ್ಳುವದು ಖಂಡಿತ. ನಮ್ಮ ದೇಶದಲ್ಲೂ ಇಂಥಾ ಪತ್ರಿಕೆಗಳು ಇಲ್ಲದಿಲ್ಲ. ಈ ಆದಿವಾಸಿಗಳನ್ನು ಎಂದೂ ನೋಡದವರೂ ಅಧಿಕಾರ ವಾಣಿಯಿಂದ ಅಗ್ರಲೇಖನಗಳನ್ನು ಪ್ರಕಟಿಸುವುದರಲ್ಲಿ ಹಿಂದೆ ಬೀಳುವದಿಲ್ಲ. ಕಲಕತ್ತೆಯ ಸಾಪ್ತಾಹಿಕದಲ್ಲಿ ಪ್ರಕಟವಾದ ಮುರಿಯ ಆದಿವಾಸಿಗಳ ಬಗೆಗಿನ ಲೇಖನವೊಂದಕ್ಕೆ ಲೇಖಕಿಗೆ ಓದುಗರಿಂದ ಅದೆಷ್ಟೋ ಪತ್ರಗಳು ಬಂದಿದ್ದವು. ಆದರೆ ಲೇಖ, ವೆರಿಯರ್ ಎಲ್ವಿನ್ ಅವರ ಅನುಭವಗಳ ಪ್ರತಿಕೃತಿಯೆಂದು ಅರಿಯಲು ಯಾರೂ ತಲೆಕೆಡಿಸಿಕೊಂಡಂತಿರಲಿಲ್ಲ.

ಆದಿವಾಸಿಗಳ ಜೀವನದ ಬಗ್ಗೆ ಪ್ರಚಲಿತವಿರುವ ಅರೆಸತ್ಯ, ಅಸತ್ಯ ಕತೆಗಳು ಅದೆಷ್ಟೊ! ಅವುಗಳಿಂದ ಪ್ರಭಾವಿತರಾದ ಮಂತ್ರಿ ಮಹೋದಯರಿಂದ ಹಿಡಿದು ಜವಾನರವರೆಗೆ ಎಲ್ಲರಿಗೂ ವಿವಿಧ ಕಾರಣಗಳಿಗಾಗಿ ಆದಿವಾಸಿಗಳನ್ನು ಹತ್ತಿರದಿಂದ ನೋಡುವ ತವಕ. ದೂರದ ರಾಜ್ಯದ ಕೊರಡು ವ್ಯಾಪಾರಿಗಳು ನಾಟುಗಳನ್ನು ಖರೀದಿಸುವ ನೆಪದಲ್ಲಿ, ದಿಲ್ಲಿಯ ಪೊಲೀಸ್ ಸಿಬ್ಬಂದಿ, ಮಹಾನಾಯಕಿಯ ಸಂರಕ್ಷಣೆಯ ನೆಪದಲ್ಲಿ, ಅಧಿಕಾರಿ, ಸಮಾಜ

ಸೇವಕರು ಆದಿವಾಸಿಗಳನ್ನು ಅಭ್ಯಸಿಸುವುದಕ್ಕಾಗಿ, ಮಂತ್ರಿಗಳು ಅಭಿವೃದ್ಧಿ ಯೋಜನೆಗಳ ಪ್ರಗತಿ ವೀಕ್ಷಿಸುವುದಕ್ಕಾಗಿ ಬಸ್ತರಕ್ಕೆ ದಾಳಿ ಇಡುತ್ತಾರೆ. ಜಗದಲಪುರದ ದಸರಾ, ನಾರಾಯಣಪುರದ ನೃತ್ಯಮೇಲಾ, ಇಂದಿರಾಜಿ ಓರ್ಛಾ ಭೇಟಿಗಳ ಸಮಯಸಾಧಿಸಿ ಸ್ಪರ್ಧೆಯಿಂದ ಆದಿವಾಸಿಗಳ ಹಳ್ಳಿಗಳಿಗೆ ಬಂದು ಅವರ ಬೆವರಿನ ವಾಸನೆಯಿಂದ ಮೂಗು ಹೊಳ್ಳೆಗಳನ್ನು ತುಂಬಿಕೊಂಡವರೆಷ್ಟೋ! ಈ ಆಧುನಿಕ ಚಕ್ರವರ್ತಿಗಳು, ಅಶ್ವಮೇಧ ಯಜ್ಞ ಮಾಡುವವರಂತೆ ಜೀಪುಗಳನ್ನು ಓಡಿಸಿ, ದಾರಿಯುದ್ದಕ್ಕೂ ತಮ್ಮ ಮಾಂಡಲಿಕರಿಂದ, ಊಟ-ತಿಂಡಿ, ಕುಡಿತಗಳ ರೂಪದಲ್ಲಿ ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತ ಬಸ್ತರ ಮುಟ್ಟುವರು. ಐದುನೂರು ಸಂಬಳದ ಮಾಂಡಲಿಕರು ತಮಗಾಗಿ ಐದುಸಾವಿರ ಹೇಗೆ ಖರ್ಚು ಮಾಡಿದರೆಂದು ತಲೆಕೆಡಿಸಿಕೊಳ್ಳುವದು ಅವರ ಪ್ರತಿಷ್ಠೆಗೆ ಒಪ್ಪದ ಮಾತಲ್ಲವೇ ?

ಸುತ್ತಮುತ್ತಲಿದ್ದ ಅಬಕಾರಿ, ಅರಣ್ಯ, ಲೋಕೋಪಯೋಗಿ ಖಾತೆಗಳ ವಿಶ್ರಾಂತಿ ಗೃಹಗಳು ಈ ಜನಸೇವಕರಿಗೆ ಮೀಸಲು. ಅವೂ ಸಾಲದಾದರೆ, ಆದಿವಾಸಿಗಳ ಅಭ್ಯುದಯಕ್ಕಾಗಿಯೇ ನಿರ್ಮಿತವಾದ ಶಾಲೆ-ಆಸ್ಪತ್ರೆಗಳ ಕಟ್ಟಡಗಳು ಇದ್ದೇ ಇವೆ. ಹಣಕೊಟ್ಟು ಪತಿಯೊಂದಿಗೆ ಕ್ಯಾಬರೆ ನೋಡಲು ಹೋಗುವ, ಲಿಂಗ ಸಮಾನತೆಯಲ್ಲಿ ಅನನ್ಯ ವಿಶ್ವಾಸವಿಟ್ಟ ಅಧಿಕಾರಿಗಳ ಮೇಮ್‌ಸಾಬರು, ಖರ್ಚಿಲ್ಲದೇ ಆದಿವಾಸಿಗಳೊಂದಿಗೆ 'ಒಂದಾಗಿ' ಹೋಗುವ ಪ್ರತಿಷ್ಠಿತ ಅವಕಾಶ ತಪ್ಪಿಸಿಕೊಳ್ಳುವರೇ ? ಬೇಸರ ಕಳೆಯುವದಕ್ಕಾಗಿ ಓದುವ ಅಗ್ಗದ ಕಾಮ ಪ್ರಚೋದಕ ಕಥೆ ಕಾದಂಬರಿಗಳಿಗಿಂತ ಜೀವಂತವಾದ ಅನುಭವಗಳನ್ನು ಕಣ್ಣಾರೆ ನೋಡುವ ಹಂಬಲ ಬೇರೆ. ಆದರೆ ಹೋದಲ್ಲೆಲ್ಲಾ ನಗರಗಳ ಸೌಕರ್ಯಗಳು ಬೇಕು. ಹಳ್ಳಿಗಳಲ್ಲಿ ವಿದ್ಯುತ್ ಫ್ಯಾನ್ ಇಲ್ಲವೇ ? ನಲ್ಲಿ ಏಕೆ ಹೊಂದಿಸಿಲ್ಲ? ಡನ್‌ಲಪ್ ಹಾಸಿಗೆಗಳಿಲ್ಲ? ಕಾಫಿ ಸಿಗುವುದಿಲ್ಲವೇ ? ಎಂದು ಪ್ರಶ್ನಿಸುವದೂ ಹಾಸ್ಯಾಸ್ಪದವೆಂಬುದನ್ನು ಅರಿಯದವರು. ತುಂಡು ಸೀರೆ, ಅಡ್ಡಪಂಚೆ ಮಾಡುವ ಗ್ರಾಮಗಳಲ್ಲಿ ಟಸರ್‌ಸಿಲ್ಕ್ ಸೀರೆಗಳಿಲ್ಲವೇ ? ಅವನ್ನು ಆದಿವಾಸಿಗಳೇ ಮಾಡುತ್ತಾರಲ್ಲ? ಎಂದು ಶಾಪಿಂಗ್‌ಗೆ ಹೊರಟವರಿಗೆ ಬಡಪಾಯಿಗಳು ಏನು ಉತ್ತರಿಸಬೇಕು ? ಕೈಯಿಂದ ತಯಾರಾದ ಆದಿವಾಸಿ ಕೈಗಾರಿಕಾ ಸಾಮಾನುಗಳು ಅಂದವಿಲ್ಲ, ಒರಟು ಎಂದು ಮೂಗುಮುರಿದರು. ವಿದೇಶದಿಂದ ತಂದ ಇಂಥ ಸಾಮಾನುಗಳು ಎಷ್ಟು ಆಕರ್ಷಕವಾಗಿದೆಯೆಂದು ಮಂಡೂಕಮತಿಯೊಬ್ಬಳು ಸಂಗಾತಿಗೆ ವಿವರಿಸಿದಳು. ಈ ವರ್ತನೆಯಿಂದ ಆದಿವಾಸಿಗಳಿಗೂ ಮೇಮ್‌ಗಳ ಅಜ್ಞಾನದ ಆಳದ ಅರಿವಾಗುವದೆಂದು ಪತಿದೇವರಿಗೆ ಅರಿವಾದರೂ ಅದನ್ನು ತಿಳಿಸಿ ಹೇಳುವ ಧೈರ್ಯ ಮಾಡರು !

ಲಿಂಗಭೇದವಿಲ್ಲದೇ ಯುವಜನರು ಸರಿಸಮಾನರಾಗಿ ಬೆಳೆಯಬೇಕೆಂದು ಶತಕಗಳಿಂದ ಮಾರಿಯರಲ್ಲಿ ಪ್ರಚಲಿತವಿದ್ದ 'ಘೋಟುಲ್' (ಆದಿವಾಸಿ ಸಹಜೀವನ ಕೇಂದ್ರ)ಗಳ ಬಗ್ಗೆ ಹರಡಿಕೊಂಡಿದ್ದ ರಂಜಕ ಕಥೆಗಳು ಅದೆಷ್ಟೋ. ಆದಿವಾಸಿಗಳು ಸ್ವೇಚ್ಛಾಚಾರಿಗಳು, ಕಾಮಕಲೆಯಲ್ಲಿ ನಿಸ್ಸೀಮರು, ವಾತ್ಸ್ಯಾಯನನಿಗೇ ಕಲಿಸಬಲ್ಲವರು, ಖಜುರಾಹೋ ಶಿಲ್ಪಿಗಳು ಇವರ ಜೀವನದ ಮಾದರಿಗಳು... ಎಂದೆಲ್ಲಾ ತಿಳಿದುಕೊಂಡ ಮಾಯಿಜಿ, ಜೀಪಿನಿಂದ ಇಳಿಯುತ್ತಿದ್ದಂತೆ, ''ಘೋಟುಲಗಳೆಲ್ಲ ಎಲ್ಲಿವೆ ? ಈ ಕೂಡಲೇ ನೋಡಬೇಕಾಗಿದೆ'' ಎಂಬ ಆಜ್ಞೆಯಿಂದ ಸ್ವಾಗತಕ್ಕಾಗಿ ಬಂದ ಸಿಬ್ಬಂದಿಯನ್ನು ತಬ್ಬಿಬ್ಬಾಗಿಸಿದಳು. ಊಟ-ವಿಶ್ರಾಂತಿಗಳ ನಂತರ ಹೋಗೋಣವೆಂದು ಹೇಳಿದರೂ ಅತಿಥಿ, ಪಟ್ಟು ಹಿಡಿದಿದ್ದರಿಂದ ಜೀಪು, ಧೂಳು ಹಾರಿಸುತ್ತ ಹಳ್ಳಿಯ ಹೊರಗಿಳಿದು, ಜನ, ಗಾಳಿ, ಸೂರ್ಯ ಸಂಚಾರವಿಲ್ಲದ ಕೊಟ್ಟಿಗೆಯಂತಹ ಕಟ್ಟಡವೇ ಘೋಟುಲವೆಂದು ತಿಳಿಸಿದಾಗ ಆಕೆ ನಂಬುವಂತೆಯೇ ಇರಲಿಲ್ಲ. ಸೂರ್ಯಾಸ್ತದ

ನಂತರವೇ ಇಲ್ಲಿಯ ಚಟುವಟಿಕೆಗಳಿಗೆ ಆರಂಭವೆಂದು ವಿವರಿಸಿ ಸಾಗಹಾಕಬೇಕಾದರೆ ಮಾರ್ಗದರ್ಶಿ, ಕಲಿತ ಬುದ್ಧಿಯನ್ನು ಖರ್ಚು ಮಾಡಬೇಕಾಯಿತು.

ಮೂರು ಮಕ್ಕಳ ತಾಯಿಯಿಂದ ಘೋಟುಲದ ಚಟುವಟಿಕೆಗಳನ್ನು ನೋಡುವ ಕುತೂಹಲ ಅದುಮಿಕೊಳ್ಳಲಾಗದ್ದರಿಂದ ಕತ್ತಲಾಗುವ ಪೂರ್ವದಲ್ಲಿಯೇ ಜೀಪ್ ತಿರುಗಿ ಹಳ್ಳಿಯತ್ತ ಧಾವಿಸಿತು. ದಿನವಿಡೀ ಕಾಡು-ಹೊಲಗಳಲ್ಲಿ ದುಡಿದು ಬಂದ ಯುವಕ-ಯುವತಿಯರು ಬೆಂಕಿಯ ಸುತ್ತಲೂ ಕುಳಿತು ಹರಟೆ ಹೊಡೆಯುವದರಲ್ಲಿ ಮೈಮರೆತಿದ್ದರು. ಈ ಕರೇ ಸಾಹೇಬರ ದಾಳಿಗಳು ಅವರಿಗೆ ಆಗಲೇ ರೂಢಿಯಾಗಿದ್ದರಿಂದ ಆಗಂತುಕರತ್ತ ಲಕ್ಷ್ಯ ಪೂರೈಸದೇ ತಂಬಾಕು ಸೇವನೆ ಮುಂದುವರೆಸಿದ್ದರು. ಈ ಅಲಕ್ಷ್ಯದಿಂದ ಕೆರಳಿದ ಅಧಿಕಾರಿ ಪತ್ನಿ ಕರಿನಾಗರದಂತಾಗಿ, ''ಇವರನ್ನು ಕೇಳುವವರು ಯಾರೂ ಇಲ್ಲವೇ ? ಮೇಲ್ವಿಚಾರಕರೆಲ್ಲಿ ?'' ಎಂದು ಗರ್ಜಿಸಿದಳು. ವಾದ್ಯಮೇಳ, ನಗೆಚಾಟಿಕೆ, ಹಾಡುಗಾರಿಕೆ, ನೃತ್ಯಕೂಟ, ಸಹವಾಸ ಸುಖ, ಕಾಮಕ್ರೀಡೆಗಳನ್ನು ನಿರೀಕ್ಷಿಸಿ ಬಂದವರಿಗೆ, ಬೆವರಿನ ನಾತ, ಸೆಗಣಿಯ ದುರ್ವಾಸನೆ, ಆದಿವಾಸಿಗಳ ಕಡುಬಡತನ ನೋಡಿ, ಬರಬೇಕಾದ ಅನುಕಂಪದ ಬದಲು, ಕನಸಿನ ಘೋಟುಲ್ ಕಾಣದ್ದಕ್ಕಾಗಿ ಎಲ್ಲರನ್ನೂ ತರಾಟೆಗೆ ತೆಗೆದುಕೊಳ್ಳುವ ಭಾವ ಕಂಡುಬಂದಿತು. ಪರಿಸ್ಥಿತಿ ವಿಕೋಪಕ್ಕೆ ಹೋಗಬಾರದೆಂದು ಅನುಯಾಯಿಗಳೂ ಧೈರ್ಯ ತಂದುಕೊಂಡು, ''ಮಾಯಿಜಿ, ಘೋಟುಲ್‌ಗಳೆಂದರೆ, ಮಾರಿಯರು ತಮ್ಮ ಮಕ್ಕಳಿಗೆ ಜೊತೆಯಾಗಿ ಬೆಳೆಯಲು ಮಾಡಿಕೊಟ್ಟ ಅರಣ್ಯ ವಿದ್ಯಾಲಯ. ಇದು ಸರಕಾರಿ ಸಂಸ್ಥೆಯಲ್ಲವಾದ್ದರಿಂದ ನಾವು-ನೀವು ಏನೂ ಮಾಡುವಂತಿಲ್ಲ. ಈ ವ್ಯವಸ್ಥೆಯಲ್ಲಿ ಪೂಜ್ಯ ಮುಖ್ಯಮಂತ್ರಿಗಳೂ ಏನೂ ಹಸ್ತಕ್ಷೇಪ ಮಾಡುವಂತಿಲ್ಲ. ಮೊನ್ನೆ ಮೊಡನಾರದ ಘೋಟುಲದಲ್ಲಿ ಹಿರಿಯ ರಾಜಕಾರಣಿಯ ಪುತ್ರರತ್ನನೊಬ್ಬ ಕಾಳಸರ್ಪದಂತೆ ಒಳಹೊಕ್ಕಿದ್ದ. ಒಬ್ಬ ಹುಡುಗಿಯೊಡನೆ ಅಸಭ್ಯವಾಗಿ ವರ್ತಿಸಿದ್ದಕ್ಕೆ ಕೋಲಾಹಲವೆದ್ದು ಎಲ್ಲರನ್ನೂ ಶಾಂತಗೊಳಿಸಲು ಊರ ಹಿರಿಯರು ಬರಬೇಕಾಯಿತು. ಹಳ್ಳಿಯವರು ಇಂಥ ಯುವಕರನ್ನು ಸಮರ್ಥಿಸಿದರೆ, ನಾಳೆ ಹೊರಗಿನವರೆಲ್ಲ ಅವರ ವಿಷಬಾಣಗಳಿಗೆ ಆಹುತಿಯಾಗುವದು ಖಂಡಿತ. ಎಲ್ಲ ಘೋಟುಲ್‌ಗಳಲ್ಲಿ ಇದೆಲ್ಲ ನಡೆಯುವದಿಲ್ಲ. ನಾಳೆಯ ಮೇಲಾದಲ್ಲಿ ಜಿಲ್ಲೆಯ ವಿವಿಧ ಘೋಟುಲ್‌ಗಳ ಸದಸ್ಯರು ಬರುವದರಿಂದ ಇಲ್ಲಿ ಕಾಣಲಾಗದ್ದನ್ನು ಅಲ್ಲಿ ಕಾಣಬಹುದು ಎಂದು ಪುಸಲಾಯಿಸಿ ಅವಳನ್ನು ನಿವಾಸಕ್ಕೆ ಸಾಗಿಸಬೇಕಾದರೆ ಚಳಿಗಾಲದ ಸಂಜೆಯಲ್ಲೂ ಬೆವರು ಹನಿಗಳು ಅವರ ಹಣೆಯನ್ನು ಅಲಂಕರಿಸಿದವು. ಕಗ್ಗತ್ತಲ ರಾತ್ರಿಯಲ್ಲಿ, ಉರಿಯುವ ಬೆಂಕಿಯ ಬೆಳಕಿನಲ್ಲಿ ಯುವ ಆದಿವಾಸಿಗಳು ವಿಶೇಷವಾಗಿ ಅಲಂಕರಿಸಿಕೊಂಡು, ದೇವರ ನಾಮಗಳನ್ನು ಹಾಡುತ್ತ, ವರ್ತುಲಾಕಾರದಲ್ಲಿ ನರ್ತಿಸಲಾರಂಭಿಸಿದರು. ಒಮ್ಮಿಂದೊಮ್ಮೆಲೆ ಕಣ್ಣು ಕುಕ್ಕಿಸುವ ಬೆಳಕು ಚೆಲ್ಲುತ್ತ, ಯಮಧರ್ಮನ ಕೋಣನಂತೆ ಧೂಳು ಹಾರಿಸುತ್ತ ಆರೇಳು ಜೀಪುಗಳು ಓಡುತ್ತಾ ಬಂದಾಗ ನೃತ್ಯಕಾರರು ಜೀವದಾಸೆಯಿಂದ ಚೆಲ್ಲಾಪಿಲ್ಲಿಯಾಗಿ ಓಡಿದರು. ಈ ಸರಕಾರಿ ವಾಹನಗಳು ತಮ್ಮ ಶಕ್ತಿಗೆ ಮೀರಿದ ಸಾಮಾನು ಮತ್ತು ಜನರನ್ನು ಹೊತ್ತು ತಂದದ್ದರಿಂದ ಗಕ್ಕನೆ ನಿಂತಾಗ ಏದುಸಿರು ಬಿಡಲಾರಂಭಿಸಿದವು. ಹುಲಿ ಶಿಕಾರಿಗೆ ಬಳಸುವಂತಹ ಪ್ರಖರ ಬೆಳಕು ಚೆಲ್ಲುವ ಬ್ಯಾಟ್ರಿಗಳನ್ನು ಉರಿಸುತ್ತ ಆಗಂತುಕರು ನೃತ್ಯಕಾರರನ್ನು ಎಳೆದು ಮೈದಾನದಲ್ಲಿ ನಿಲ್ಲಿಸಿ ನರ್ತನ ಮುಂದುವರಿಸಲು ಆಜ್ಞೆಯಿತ್ತರು. ಯಾವ ಆಜ್ಞೆಯೂ ನಡೆಯದ ಸಮಾಜದಿಂದ ಬಂದ ಆದಿವಾಸಿಗಳು ಈ ದರ್ಪದಿಂದ ದಂಗಾದರು. ತಮ್ಮ ಆನಂದವನ್ನು ಕುಡಿತ, ಕುಣಿತಗಳಿಂದ ಪ್ರದರ್ಶಿಸಬೇಕಾದವರು. ಆಹುತಿ ಕೊಡಲು ತಂದ ಮಿಕಗಳಂತೆ ಮಿಕಿ ಮಿಕಿ ಕಣ್ಣು ಬಿಡುತ್ತ ಕಾಟಾಚಾರಕ್ಕಾಗಿ ನರ್ತಿಸಲಾರಂಭಿಸಿದರು.

ದಣಿದಾಗೊಮ್ಮೆ ನರ್ತಕರು ಮರದಡಿಯಲ್ಲಿ ಒಟ್ಟಿದ ಬೆಂಕಿಯ ಮಂದ ಬೆಳಕಿನಲ್ಲಿ ಜೊತೆಗೆ ತಂದ ಕಳ್ಳನ್ನು ಹಿತವಾಗಿ ಮಿತವಾಗಿ ಸೇವಿಸುತ್ತ ಮಿರಮಿಸುವದು ರೂಢಿ. ದೂರದಿಂದ ಆಗಮಿಸಿದ ನಾಗರಿಕ ಮಹಿಳಾ ವೃಂದ, ನಡುವೆ ಕುಳಿತ ಹಿರಿಯನನ್ನು ನಿಲ್ಲಿಸಿ, ''ಈ ಯುವ ಜನರಲ್ಲಿ ಮುದಿಯನೇಕೆ ?'' ಎಂದು ಪ್ರಶ್ನಿಸಿದರು. ತಾನು ಹಳ್ಳಿಯ ಪಟೇಲ (ಮಾಝಿ) ಎಂದು ಎಂದ ಉತ್ತರದಿಂದ ಗಹಗಹಿಸಿ ನಕ್ಕ ಮಹಿಳಾಮಣಿ, ''ನಮ್ಮ ರಾಮ ಚಪ್ರಾಸಿಯಂತೆ ತೋರುವ ಈತ ಪಟೇಲನೇ ?'' ಎಂದಾಗ ಆ ಬಡಪಾಯಿ ಏನು ಮಾಡಬೇಕು ತಿಳಿಯದೇ ಮುಖ ಕೆಳಗೆ ಮಾಡಿ ಭೂಮಿ ನೋಡುತ್ತ ನಿಂತ. ಆತನನ್ನು ಜೊತೆಯಲ್ಲಿ ಕರೆದೊಯ್ದು, ಯಾವ ಹಳ್ಳಿಗಳಲ್ಲಿ ಎಂಥಾ ಘೋಟುಲ್ ಇದೆ ಎಂದು ಯಾದಿ ತಯಾರಿಸಲಾಯಿತು. ನಂತರ ನೃತ್ಯಗಾತಿಯರನ್ನು ಒಬ್ಬೊಬ್ಬರನ್ನಾಗಿ ಪರೀಕ್ಷಿಸುವ ಕೆಲಸ ಪ್ರಾರಂಭವಾಯಿತು. ತಮ್ಮ ಅಲಂಕಾರಗಳನ್ನು ಹೊರಗಿನವರಿಗ ಪ್ರದರ್ಶಿಸಲು ಮನಸ್ಸಿಲ್ಲದೆ ಮುಖ ಮುಚ್ಚಿಕೊಂಡ ಹುಡುಗಿಯರ ಮುಸುಕನ್ನು ಕಡ್ಡಾಯದಿಂದ ತೆಗೆಸಿ, ''ಇವರೆಂಥ ರಂಭೆಯರೆಂದು ಮುಖ ಮುಚ್ಚಿಕೊಳ್ಳುತ್ತಾರೆಂದು'' ಗೊಣಗಿ, ಇದ್ದುದರಲ್ಲೇ ಚೆನ್ನಾಗಿದ್ದವರ ಜೊತೆ ನಿಂತು, ಕೂತು ಫೋಟೋ ತೆಗೆಸಿಕೊಳ್ಳುವ ಕಾರ್ಯಕ್ರಮವಾಯಿತು. 'ನಿಮ್ಮ ಫೋಟೋಗಳು ದೇಶ ವಿದೇಶದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತವೆ'' ಎಂದು ಹುರುಪಿನಿಂದ ಹೇಳಿದಾಗ ಯಾವ ಪ್ರತಿಕ್ರಿಯೆಯೂ ನರ್ತಕರಿಂದ ಬರಲಿಲ್ಲ. ಮುಖ ಸಿಂಡರಿಸಿಕೊಂಡು ಹೊರಟ ಮಹಿಳೆ, ಪತಿಯ ಸೂಚನೆಯಂತೆ ನರ್ತಕರ ಕೈಯಲ್ಲಿ ಹತ್ತು ಪೈಸಾ ನಾಣ್ಯ ಇಟ್ಟರು. ಅದರಿಂದ ತಮಗೇನಾಗಬೇಕು ? ಎಂಬ ಭಾವ ತಳೆದ ಆದಿವಾಸಿ ನರ್ತಕರು ಸಿಬ್ಬಂದಿಯ ಚಪರಾಸಿಗೇ ಅವನ್ನು ಹಿಂದಿರುಗಿಸಿ ನಿಟ್ಟುಸಿರುಬಿಟ್ಟರು.

ತಮ್ಮವೆಂದು ಹೇಳಿಕೊಳ್ಳಬಹುದಾದ ಕೆಲವೇ ಆದಿವಾಸಿ ಸಾಮಾನುಗಳತ್ತ ನಗರವಾಸಿಗಳ ದೃಷ್ಟಿ ಹರಿಯಿತು. ಒಬ್ಬಳು ಅವರ ನೃತ್ಯಾಲಂಕಾರದ ಪುಚ್ಚಗಳ ತುರಾಯಿ, ಇನ್ನೊಬ್ಬಳು ಕಾಡು ಹಂದಿಯ ಕೋರೆ, ಮಗದೊಬ್ಬಳು ತುಂಬಾಕ್ಕೆ ಧಾಳಿಯಿಟ್ಟರು. ಗಂಡಸರು ಬಾಣ ಬಿಲ್ಲು, ಕಿರುಕೊಡಲಿಗಾಗಿ ಆಸೆಪಟ್ಟರು. ಆದರೆ ಅಭಿಮಾನಿ ಆದಿವಾಸಿಗಳು, ''ನಿಮ್ಮ ಸೀರೆ, ಆಭರಣಗಳನ್ನು ನಾವು ಹೇಗೆ ಕೇಳಬಾರದೋ ಹಾಗೆ ಈ ಬಡವರ ಸಾಮಾನುಗಳನ್ನು ನೀವು ಅಪೇಕ್ಷಿಸಬಾರದು'' ಎಂದು ಕೊಟ್ಟ ದಿಟ್ಟವಾದ ಉತ್ತರದಿಂದ ರೇಗಿದ ಪಟ್ಟಣಿಗರು, ''ಈ ಸೂ... ಮಕ್ಕಳಿಗಾಗಿ ಸರಕಾರ ಕೋಟ್ಯವಧಿ ರೂಪಾಯಿಗಳ ಹೊಳೆ ಹರಿಸಿದರೂ, ಎಂಟಾಣೆ ಸಾಮಾನು ಕೇಳಿದರೆ ಎಷ್ಟೊಂದು ಜಂಭ !'' ಎಂದು ಸರಕಾರದ ಪ್ರತಿನಿಧಿಗಳಾದ ತಮ್ಮ ಪತಿದೇವರ ಉದಾರ ದೇಣಿಗೆಯಿಂದಲೇ ಆದಿವಾಸಿಗಳಿಗೆ ಗಾಳಿ, ನೀರು, ಬೇಟೆಗಳು ಸಿಗುತ್ತವೆ ಎಂಬ ಧೋರಣೆ ಒಬ್ಬಾಕೆ ತಾಳಿದಳು. ಆದಿವಾಸಿಗಳಿಗಾಗಿ ಬಳಸಬೇಕಾದ ಹಣದಿಂದಲೇ ಅವಳ ಸಂಸಾರ ಕೊಬ್ಬಿದೆ ಎಂದು ಮುಗ್ಧರಾದ ಆದಿವಾಸಿಗಳು ಅರಿಯುವ ಬಗೆ ಹೇಗೆ ?

ಪತ್ನಿಯರನ್ನು ಮೇಲಾಕ್ಕೆ ಕರೆತಂದುದು ಮೂರ್ಖತನವಾಯಿತು ಎಂದು ಪತಿದೇವತೆಗಳು ಕೈ ಕೈ ಹಿಸುಕಿಕೊಂಡರು. ಒಬ್ಬೊಬ್ಬರಾಗಿ ಡ್ರೈವರನನ್ನು ಹುಡುಕುವ ನೆಪದಿಂದಲೋ, ಕಾಲು ಮಡುಗುವ ಕಾರಣದಿಂದಲೋ ಜಾರಿಕೊಂಡು ನರ್ತಕಿಯರ ಸುತ್ತ ಸುಳಿದಾಡ ಲಾರಂಭಿಸಿದರು. ಕೇವಲ ಸ್ಪರ್ಶದಿಂದ ಒಬ್ಬನು ತೃಪ್ತಿಪಟ್ಟರೆ, ತುಂಬು ಮೈಯ ಮೇಲೆ ಕೈಯಾಡಿಸಲು ಇನ್ನೊಬ್ಬಾತ ಆಸೆಪಟ್ಟ. ಬೇಡಿ ಪಡೆದ ಸುರಾಪಾನದೊಂದಿಗೆ ಕತ್ತಲೆಯ ಏಕಾಂತಕ್ಕೆ ಆಮಂತ್ರಿಸಿದಾಗ, ಅಪ್ಸರೆಯರ ಸಾನ್ನಿಧ್ಯದಲ್ಲಿ ಕಾಮ-ಜ್ವರವೇರಿದ ಅಧಿಕಾರಿಗಳು ಚಡಪಡಿಸಿದರು. ಬಹಳ ಹೊತ್ತಿನಿಂದ ಮನೆಯವರ ಸುಳಿವೇ ಇಲ್ಲದ್ದರಿಂದ, ಪರಹೆಣ್ಣಿಗೆ

ಅವರ ಆಕರ್ಷಣೆಯ ಅರಿವು ಇದ್ದ ಮಹಿಳಾಮಣಿಗಳು ಅಲ್ಲೇ ಬಂದದ್ದರಿಂದ ಅಧಿಕಾರಿಗಳು ನಿರಾಶರಾದರು. ಸರಿ, ನಡುರಾತ್ರಿಯಲ್ಲಿ ಚಹಾ-ತಿಂಡಿ, ವೀಳ್ಯಗಳ ಅವಶ್ಯಕತೆಯೆನಿಸಿದ್ದರಿಂದ ಜಾತ್ರೆಯಿದ್ದ ಊರಿಗೆ ಪುನಃ ಜೀಪು ಓಡಿತು. ಆದಿವಾಸಿಗಳ ಅಭ್ಯುದಯಕ್ಕಾಗಿ ದುಡಿಯ ಬೇಕಾದ ಅಧಿಕಾರಿಗಳೇ ಹೀಗೆ ವರ್ತಿಸಿದರೆ ಇನ್ನುಳಿದವರನ್ನು ನಿಯಂತ್ರಿಸುವವರು ಯಾರು ? ವ್ಯಾಪಾರಿಯಾಗಿ ಬಂದವನು ಹಳ್ಳಿಯ ಹಿರಿಯನಿಗೆ ಬೀಡಿ-ಚುಟ್ಟ ಕೊಟ್ಟು ಸುಖದುಃಖ ವಿಚಾರಿಸಿ ಸೆರೆಯನ್ನು ಪುಕ್ಕಟೆಯಾಗಿ ಗಿಟ್ಟಿಸುತ್ತಾನೆ. ಎಲೆಯಿಂದ ದೊನ್ನೆ ತಯಾರಿಸುವ, ಅಡಿಗೆ ಮಾಡುವ ಗೃಹಿಣಿಯೊಡನೆ ನಗೆಚಾಟಿಕೆ ಮಾಡಿ, ನೀರಿಗೆ ಹೊರಟಾಗ ಬಾಯಾರಿಕೆ ನೆವದಲ್ಲಿ ತಾನೂ ಹಿಂಬಾಲಿಸುವ. ನಗೆಚಾಟಿಕೆ, ಸ್ಪರ್ಶಗಳಿಗಷ್ಟೇ ಸೀಮಿತವಾಗಿದ್ದರೆ ಯಾರ ಆಕ್ಷೇಪಣೆಯೂ ಇಲ್ಲ. ಆದರೆ ಬಲತ್ಕಾರವೇನಾದರೂ ಮಾಡಹೋಗಿ ವಿರೋಧಿಸಿದಾಗ ಇಲ್ಲವೇ ಗುಲ್ಲಾಗುವ ಸಂಭವಗಳಿದ್ದಾಗ ಕೊಲೆಯಲ್ಲಿ ಅಂತ್ಯಗೊಳ್ಳುವ ಸಂಭವವಿದೆ.

ಆದಿವಾಸಿಗಳ ಹಾಡು-ಸಂಗೀತಗಳನ್ನು ಧ್ವನಿಮುದ್ರಣ ಮಾಡಿಕೊಳ್ಳುವ ನೆವದಲ್ಲಿ ಆಕಾಶವಾಣಿಯವರು ಮೇಲಾಕ್ಕೆ ಬಾರದೇ ಇರುವದಿಲ್ಲ. ಮಂತ್ರಮುಗ್ಧರನ್ನಾಗಿ ಮಾಡುವ ಧ್ವನಿ ಮುದ್ರಣ ಯಂತ್ರ ಅವರ ಬಳಿ ಇರುವದರಿಂದ ಯಾರನ್ನೂ ಸುಲಭವಾಗಿ ಬಲೆಯಲ್ಲಿ ಹಾಕಿಕೊಳ್ಳಬಲ್ಲೆವು ಎಂಬ ಆತ್ಮವಿಶ್ವಾಸ ಅವರದು. ಮಾತುಕತೆ-ಹರಟೆಗಳಲ್ಲಿ ಮೈಮರೆತಾಗ ಅದನ್ನು ರಿಕಾರ್ಡ್ ಮಾಡಿ ತಿರುಗಿ ಆದಿವಾಸಿಗಳಿಗೆ ಕೇಳಿಸಿದಾಗ ಅವರಿಗಾಗುವ ಆನಂದ, ದಿಗ್ಭ್ರಮೆಗಳು ಅಷ್ಟಿಷ್ಟಲ್ಲ. ಕೆಲವರಿಗೆ ಹಾಡಲು ಹೇಳಿದಾಗ ಸಂಕೋಚ-ಅವಿಶ್ವಾಸಗಳಿಂದ ಮುದುಡಿ ಮುಖಮುಚ್ಚಿಕೊಳ್ಳುವ ಹುಡುಗಿಯರ ಮನ ಒಲಿಸುವ ನೆವದಿಂದ ಭುಜತಟ್ಟಿ, ಸುಖ ಸಿಗುವಲ್ಲೆಲ್ಲಾ ಕೈಯಾಡಿಸುವರು. ಆಗಂತುಕರ ಈ ಅನಿರೀಕ್ಷಿತ ವರ್ತನೆ ಅರ್ಥವಾಗದ ಹುಡುಗಿಯರು ಜಿಂಕೆಯಂತೆ ಕ್ಷಣಾರ್ಧದಲ್ಲಿ ಮಾಯವಾಗಿಬಿಡುವರು. ಆದರೆ ಮೋಜಣ್ಣಗಳ ಆಟ ನಡೆದೇ ಇರುತ್ತದೆ. ಕಾಡು ಗೋಡಂಬಿಗಳನ್ನು ಮಾರುತ್ತಾ ಕುಳಿತ ಇಬ್ಬರು ಹುಡುಗಿಯರು ಧ್ವನಿಮುದ್ರಣದಿಂದ ಆಕರ್ಷಿತರಾದರು. ಅವರೊಂದಿಗೆ ಚೆಲ್ಲಾಟ ನಡೆಸಿದಾಗ ಅತ್ತ ಸರಿದ ಕ್ಯಾಮರಾಧಾರಿ ತಮ್ಮನ್ನು ಛಾಯಾಚಿತ್ರದಲ್ಲಿ ಬಂಧಿಸಬಹುದು ಎಂಬ ಅಳುಕಿನಿಂದಲೇ ''ಕಾಡಿನ ಸೃಷ್ಟಿ ಸೌಂದರ್ಯದ ಚಿತ್ರದ ಬದಲಾಗಿ ಹುಡುಗಿಯರ ಚಿತ್ರ ತೆಗೆಯುವದು ಒಳ್ಳೆಯ ಅಭಿರುಚಿ ತೋರಿಸುವದಿಲ್ಲ...'' ಎಂದು ಪ್ರತಿಪಾದಿಸುತ್ತಿರುವಾಗಲೇ ಹುಡುಗಿಯರು ಗೋಡಂಬಿ ಬುಟ್ಟಿಸಹಿತ ಜಾರಿಕೊಂಡುಬಿಟ್ಟಿದ್ದರು !

ಬಸ್ತರದ ಮಾರಿಯ, ಮುರಿಯ ಬುಡಕಟ್ಟಿನವರು ಸರಕಾರಿ ಯೋಜನೆಗೆ ಅಷ್ಟಾಗಿ ಉತ್ಸಾಹ ತೋರಿಸದಿದ್ದರೂ ಗೊಂಡ, ಭಿಲ್ಲ, ಹಲ್ಬಿ, ಕೊರ್ಕು ಆದಿವಾಸಿಗಳು, ಕೆಲಮಟ್ಟಿಗೆ ಅದರ ಲಾಭ ಪಡೆಯುತ್ತಿದ್ದಾರೆ. ಅರಣ್ಯ ಕಡಿಯುವದಕ್ಕೆ, ರಸ್ತೆ ಮಾಡುವದಕ್ಕೆ, ಸೇತುವೆ ಕಟ್ಟುವ ಕೆಲಸಕ್ಕೆ, ಹೆಣ್ಣು-ಗಂಡು ಕೂಲಿಯಾಳಾಗಿ ದುಡಿಯುತ್ತಾರೆ. ಇಂಜಿನಿಯರ್ ಸಾಹೇಬರು ಮೇಲ್ವಿಚಾರಣೆಗೆ ಬಂದಾಗ ಅವರ ಸೇವೆಗೂ ನಿಲ್ಲುತ್ತಾರೆ. ಹಳ್ಳಿಯ ಮಂತ್ರವಾದಿಯಿಂದ ಕಾಯಿಲೆ ಗುಣಪಡಿಸಲು ಸಾಧ್ಯವಾಗದಾಗ ಆಸ್ಪತ್ರೆಗೂ ಭೇಟಿಕೊಡುತ್ತಾರೆ. ಶಾಲೆ ಅತೀ ದೂರವಿದ್ದಾಗ ವಸತಿ ಗೃಹಗಳಲ್ಲೂ ವಾಸಿಸುತ್ತಾರೆ. ಜೀವನದ ಈ ಮಾರ್ಪಾಟುಗಳಿಂದ ಅವರಿಗೆ ಹೊಸ ಸಮಸ್ಯೆಗಳನ್ನು ಎದುರಿಸಬೇಕಾಗಿಬರುತ್ತದೆ. ಪಟ್ಟಣಗಳಿಂದ ಬರುವ ಓವರಸೀಯರ, ಇಂಜಿನಿಯರ, ಅರಣ್ಯಾಧಿಕಾರಿ, ಡಾಕ್ಟರರು, ಶಿಕ್ಷಕರು, ಆದಿವಾಸಿಗಳ ಅಸಹಾಯಕತೆ ಅಜ್ಞಾನಗಳ ಲಾಭ ಪಡೆಯುವ ಹವಣಿಕೆಯಲ್ಲೇ ಇರುತ್ತಾರೆ. ಆದಿವಾಸಿಗಳ ಉದ್ಧಾರ ಮಾಡಬೇಕೆಂಬ ಕಳಕಳಿಯ ಕೆಲವರನ್ನು ಬಿಟ್ಟರೆ, ಬಹುಸಂಖ್ಯಾತರು ಅವರಿಂದ

ತಮಗಾಗುವ ಲಾಭದ ಯೋಚನೆಯಲ್ಲೇ ಇರುತ್ತಾರೆ. ಅವರಿಂದ ತರಕಾರಿ, ಕೋಳಿ, ಸೆರೆ, ಗಾಂಜಾ ಕೆಲವರು ದೋಚಿಕೊಂಡರೆ,ಇನ್ನು ಕೆಲವರು ಅವರನ್ನು ಜೀತದಾಳಾಗಿ ದುಡಿಸಿ ಕೊಳ್ಳುತ್ತಾರೆ. ಹಲವರು ಕೀಟಲೆ ಕೊಟ್ಟು ತೃಪ್ತಿಪಟ್ಟರೆ ಅವಕಾಶ ಸಿಕ್ಕಾಗ ಕಾಮಕೇಳಿಯಾಡದೇ ಇರರು. ಇಂಥ ಘಟನೆಗಳೆಲ್ಲ ಹೆದರಿಕೆ-ಬೆದರಿಕೆಗಳಿಂದಾಗಿ ಪ್ರಕಟಗೊಳ್ಳುವದೇ ಇಲ್ಲ. ಆದಿವಾಸಿಗಳ ಸಂಪರ್ಕದಲ್ಲಿ ಬರುವವರೆಲ್ಲ – ಅವರೂ ಮುಗ್ಧ ಮಾನವರು. ಅವರಿಗೂ ಆಸೆ-ಆಕಾಂಕ್ಷೆ, ನೈತಿಕತೆ-ರಸಿಕತೆಗಳಿವೆ ಎಂದು ತಿಳಿದುಕೊಂಡು, ಅವರೊಡನೆ ಗೌರವದಿಂದ ನಡೆದುಕೊಂಡಾಗ ಮಾತ್ರ ನಾಗರಿಕರಲ್ಲಿ ಅವರಿಗೆ ವಿಶ್ವಾಸ ಮೂಡಬಹುದು.

# 18. ವೆರಿಯರ ಎಲ್ವಿನ್



ಬ್ರಿಟಿಷ್ ನಾಗರಿಕರಾಗಿದ್ದ ವೆರಿಯರ್ ಎಲ್ವಿನ್ನರು (1902-1964) ಆಕ್ಸ್‌ಫರ್ಡ್‌ನಲ್ಲಿ ವಿದ್ಯಾರ್ಥಿಯಾಗಿರುವಾಗಲೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯದಲ್ಲಿ ಆಸಕ್ತಿ ತಳೆದಿದ್ದರು. ಕ್ರಿಶ್ಚಿಯನ್ ಧರ್ಮದಲ್ಲಿ ಅಚಲ ವಿಶ್ವಾಸ ಹೊಂದಿದ್ದಲ್ಲದೇ ಆ ಧರ್ಮ ಪ್ರಚಾರಕರೆಂದು ತರಬೇತಿ ಪಡೆದ ಅವರು, ತಮ್ಮ ದೇಶಬಾಂಧವರು ಭಾರತದಲ್ಲಿ ನಡೆಸಿದ ಶೋಷಣೆಯನ್ನು

ಸಹಿಸಲಾರದೇ ಬಡ-ಬಗ್ಗರ ಸೇವೆಗೆಂದೇ ಈ ದೇಶಕ್ಕೆ 1927ರಲ್ಲಿ ಬಂದು ಪುಣೆಯ ಕ್ರಿಸ್ತ ಸೇವಾ ಸಂಘವನ್ನು ಸೇರಿಕೊಂಡರು. ಕ್ರಮೇಣ ತಮ್ಮ ಧರ್ಮ ಪ್ರಚಾರಕ್ಕಿಂತ ಹೆಚ್ಚಾಗಿ ಹಿಂದೂ ಧರ್ಮದ ವಿಶಾಲ ದೃಷ್ಟಿಯಿಂದ ಪ್ರಭಾವಿತರಾದರು. ರವೀಂದ್ರನಾಥ ಠಾಕೂರರ ಬರವಣಿಗೆಯನ್ನು ಆಳವಾಗಿ ಅಭ್ಯಸಿಸತೊಡಗಿದರು. ಮಹಾತ್ಮಾ ಗಾಂಧಿ, ಜವಾಹರಲಾಲ್ ನೆಹರೂರ ನೇತೃತ್ವದಲ್ಲಿ ದೇಶಾಭಿಮಾನ ಜಾಗೃತವಾದ ಕಾಲವಾಗಿತ್ತು ಅದು. ಅಂತೆಯೇ ರಾಷ್ಟ್ರೀಯ ನಾಯಕರೊಂದಿಗೆ ಮುಕ್ತ ಮನಸ್ಸಿನ ವಿಚಾರ ವಿಮರ್ಶೆ ಮಾಡಲಾರಂಭಿಸಿದರು. ಇದು ಬ್ರಿಟಿಷ್ ಸರ್ಕಾರಕ್ಕೆ ಒಪ್ಪಿಗೆಯಾಗಲಿಲ್ಲ. ಸರದಾರ ವಲ್ಲಭಭಾಯಿ ಪಟೇಲ, ಸೇಠ ಜಮನಾಲಾಲ ಬಜಾಜ್‌ರೊಂದಿಗೆ ವಿವಿಧ ರಾಜ್ಯಗಳಲ್ಲಿ ಸುತ್ತಾಡುತ್ತಿದ್ದಾಗ ಮಧ್ಯಭಾರತ (ಇಂದಿನ ಮಧ್ಯಪ್ರದೇಶ) ದಲ್ಲಿ ವಾಸಿಸುವ 'ಗೊಂಡ' ಆದಿವಾಸಿಗಳ ಕರುಣಾಜನಕ ಸ್ಥಿತಿಯನ್ನು ಕಣ್ಣಾರೆ ಕಂಡು ಅವರ ಸೇವೆಗೆ ಕಂಕಣಬದ್ಧರಾದರು. ಶಾಮರಾವ್ ಹಿವಳೆ ಎಂಬುವರು ಅವರಿಗೆ ಯೋಗ್ಯ ಜೊತೆಗಾರರಾಗಿ ಸಿಕ್ಕರು. ಅವರಿಬ್ಬರೂ ಗೊಂಡ ಜನಾಂಗವನ್ನು ಅಭ್ಯಸಿಸುವ ಸಲುವಾಗಿ ಬೇತುಲ್, ಛಿಂದವಾಡಾ, ಠಾಮಿಯಾಗಳಲ್ಲಿ ಅಲೆದಾಡಿದರು. ಆದಿವಾಸಿಗಳ ಸೇವೆ ಮಾಡುವದಕ್ಕೆ ಕ್ರಿಶ್ಚಿಯನ್ ಧರ್ಮಾಧಿಕಾರಿಗಳು ಆತಂಕವುಂಟುಮಾಡಲಾರಂಭಿಸಿದ್ದರಿಂದ 1931ರಲ್ಲಿ ಧರ್ಮ ಪ್ರಚಾರಕನ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಮರುವರ್ಷವೇ ಶ್ಯಾಮರಾವ ರೊಡಗೂಡಿ ಮಾಂಡ್ಲಾ ಜಿಲ್ಲೆಯ ಕಾರಂಜಿಯಾದಲ್ಲಿ ಆಶ್ರಮ ಸ್ಥಾಪಿಸಿದರು. ಆದಿವಾಸಿಗಳ ಅಪನಂಬಿಕೆಯನ್ನು ಹೋಗಲಾಡಿಸುವ ಸಲುವಾಗಿಯೇ ಸಾಧ್ಯವಿದ್ದ ಮಟ್ಟಿಗೆ ಅವರ ಜೀವನಕ್ರಮವನ್ನು ತಮ್ಮದನ್ನಾಗಿಸಿದರು. ಜೀವನದ ಉದ್ದಕ್ಕೂ ಬರಿಗಾಲಿನಿಂದ ಓಡಾಡುವ ಪಣತೊಟ್ಟರು. ಅವರ ವಾಸದ ಮನೆಗಳನ್ನೇ ಹೋಲುವಂತಹ ಗುಡಿಸಲು ಕಟ್ಟಿಕೊಂಡರು. ಕುಷ್ಠರೋಗಿಗಳ ಕಷ್ಟ-ಕಾರ್ಪಣ್ಯಗಳನ್ನು ನೋಡಲಾರದೆ ಅವರಿಗಾಗಿಯೇ ಪ್ರತ್ಯೇಕ ವಿಭಾಗವನ್ನು ನಿರ್ಮಿಸಿದರು. ಕೃಷಿ ಪಾಠಶಾಲೆಯೊಂದಿಗೆ ಔಷಧಾಲಯವನ್ನೂ ಪ್ರಾರಂಭಿಸಿದಾಗ ದೂರದೂರದಿಂದ ಆದಿವಾಸಿಗಳು ಈ ಸೇವೆಗಳ ಲಾಭ ಪಡೆಯಲು ಬರುವಂತಾಯಿತು.

ಎಲ್ವಿನ್ನರ ಈ 'ವಿಪರೀತ' ನಡವಳಿಕೆಯಿಂದ ರೊಚ್ಚಿಗೆದ್ದ ಬ್ರಿಟಿಷ್ ಅಧಿಕಾರಿಗಳು, ಕ್ರಿಶ್ಚಿಯನ್ ಧರ್ಮಾಧಿಕಾರಿಗಳು, ಅವರನ್ನು ಪರಿಪರಿಯಿಂದ ಪೀಡಿಸಲಾರಂಭಿಸಿದರು. ಇದರಿಂದಾಗಿ ಎಲ್ವಿನ್ನರು ಆದಿವಾಸಿಗಳಿಗೆ ಇನ್ನೂ ಹತ್ತಿರದವರಾದರು. ಕ್ರೈಸ್ತಮತಕ್ಕೆ ಧರ್ಮಾಂತರ ಮಾಡಲೆಂದು ನೇಮಿಸಲ್ಪಟ್ಟವರು, ತಾವೇ ಇಲ್ಲಿಯ ಮತ ಸ್ವೀಕರಿಸುವ ಪವಾಡ ಮಾಡಿದರು! ಅಲ್ಲದೆ ಗೊಂಡಕುವರಿ 'ಕೋಸಿ' ಯಳನ್ನು ಮದುವೆಯಾಗಿ ಜವಾಹರ ಸಿಂಗ್ ಎಂಬ ಮಗನನ್ನು ಪಡೆದರು. ಈ ವಿವಾಹ ಜೀವನದಲ್ಲಿ ಅಪಶ್ರುತಿ ಕಂಡಾಗ ಬೇರ್ಪಡೆ ಹೊಂದಿ ಪಠಾಣಗಡದ ಪ್ರಧಾನ್ ಆದಿವಾಸಿ, ಲೀಲಾಳನ್ನು ದ್ವಿತೀಯ ಪತ್ನಿಯಾಗಿ ಹೊಂದಿದರು. ಧಾರ್ಮಿಕ ಹಿಂದುವಿನಂತೆ ಚಾಚೂತಪ್ಪದೆ ಗೃಹಸ್ಥ ಜೀವನ ನಡೆಸಿದರು. ಬಸ್ತರ ಜಿಲ್ಲೆಯ ಮಾರಿಯ, ಮುರಿಯ, ಗೊಂಡ ಆದಿವಾಸಿಗಳಿಗೆ ತಮ್ಮ ಸೇವೆಯ ಅವಶ್ಯಕತೆ ಇದೆ! ಎಂದು ಅನಿಸಿದಾಗ ಇಂದ್ರಾವತಿ ನದಿ, ಕೊಳ್ಳಕ್ಕೆ ಧುಮುಕುವ ಚಿತ್ರಕೂಟದಲ್ಲಿ ಇನ್ನೊಂದು ಆಶ್ರಮ ಸ್ಥಾಪಿಸಿದರು. ಆದಿವಾಸಿಗಳೊಂದಿಗೆ ನಿಕಟ ಸಂಬಂಧ, ಜೀವನದ ಆಳವಾದ ಅಭ್ಯಾಸದಿಂದಾಗಿ, ಅವರ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡುವ ಸ್ಥಾನ ಕಲ್ಪಿಸಿಕೊಂಡರು. ಅವರ ಕಲ್ಯಾಣಕ್ಕಾಗಿ ತನು, ಮನ, ಧನಗಳನ್ನು ಮುಡಿಪಾಗಿಟ್ಟರು. ಇದರಿಂದಾಗಿ ಕಾಡಿನ ಅಂತರಾಳದಲ್ಲಿ ಕಣ್ಮರೆಯಾಗಿ ಹೋಗಿದ್ದ ಮೂಲ ಬುಡಕಟ್ಟಿನವರು ಈ ದೇಶದ ಪ್ರಜೆಗಳೆಂದು ವಿಶ್ವಕ್ಕೇ ತಿಳಿಯುವಂತಾಯಿತು. ಅಂತೆಯೇ ದೇಶದ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಅವರ ಬಾಳನ್ನು

ಹಸನಾಗಿ ಮಾಡುವ ಕ್ರಮಗಳನ್ನು ಹೇಗೆ ಕೈಗೊಳ್ಳಬೇಕೆಂದು ಸೂಚಿಸುವ ಕೆಲಸ ಇವರಿಗೇ ಒಪ್ಪಿಸಲಾಯಿತು. ಆದಿವಾಸಿ ಕಲ್ಯಾಣ ಯೋಜನೆಗೆ ಸಲಹಾಗಾರರಾಗಿ ಎಲ್ವಿನ್ನರು ತಮ್ಮ ಎರಡು ಕೃತಿಗಳಲ್ಲಿ ಮಾಡಿದ ಶಿಫಾರಸುಗಳನ್ನು ಸಂಕ್ಷಿಪ್ತವಾಗಿ ಹೀಗೆ ಗುರುತಿಸಬಹುದು :

1. ಶತಮಾನಗಳಿಂದ ಬೆಳೆಸಿ ಉಳಿಸಿಕೊಂಡು ಬಂದ ಜೀವನ ಕ್ರಮದಲ್ಲಿ ಬದಲಾವಣೆ ತರುವದು ಅಷ್ಟೊಂದು ಸುಲಭವಲ್ಲ. ಆದರೆ ಮನಃಪೂರ್ವಕ ಯತ್ನಿಸಿದರೆ ಅಸಾಧ್ಯವೂ ಅಲ್ಲ. ಅವರ ಬಾಳ್ವೆಯಲ್ಲಿದ್ದ ಗಟ್ಟಿತನ ಸಂರಕ್ಷಿಸಿ ಟೊಳ್ಳಾದುದನ್ನು ಮಾತ್ರ ಹೋಗಲಾಡಿಸುವದು ನಮ್ಮೆಲ್ಲರ ಆದ್ಯ ಕರ್ತವ್ಯ.

2. ಎಂಥ ಕಠೋರ ಕಷ್ಟ-ಕಾರ್ಪಣ್ಯದ ಪ್ರಸಂಗಗಳಲ್ಲಿಯೂ ಬಾಳುವ ಕಲೆಯನ್ನು ಆದಿವಾಸಿಗಳು ರೂಢಿಸಿಕೊಂಡಿದ್ದಾರೆ. ಅದನ್ನು ಉಳಿಸಿಕೊಳ್ಳಬೇಕಲ್ಲದೇ ಇನ್ನಿತರರಿಗೂ ಕಲಿಸಬೇಕು. ಅಂತೆಯೇ ಸಕಲವನ್ನೂ ಸರಕಾರದಿಂದ ಪಡೆಯಬಹುದೆಂಬ ಭಾವನೆ ಅವರಲ್ಲಿ ಬೇರೂರದಂತೆ ಎಚ್ಚರವಹಿಸಬೇಕು. ಯಾವ ಮೀಸಲಾತಿಯನ್ನು ಇಡದೇ ಅವರ ಯತ್ನದಿಂದಲೇ ಸೌಲಭ್ಯಗಳು ಸಿಗುವಂತಾಗಬೇಕು. ಅಂದರೆ ಸೌಲಭ್ಯ ಮತ್ತು ಕರ್ತವ್ಯಗಳು ಜೊತೆಜೊತೆಗೇ ಇರುತ್ತವೆಂದು ಮನವರಿಕೆ ಮಾಡಿಕೊಡಬೇಕು.

3. ಅವರ ಕಡುವೈರಿಗಳಾದ ಬಡತನ, ಅನಕ್ಷರತೆ, ಅಜ್ಞಾನ, ಅನಾರೋಗ್ಯಗಳತ್ತ ಮೊಟ್ಟ ಮೊದಲು ಲಕ್ಷ್ಯ ಪೂರೈಸಬೇಕು. ಯೋಗ್ಯ ಸವಲತ್ತುಗಳನ್ನು ಪೂರೈಸಿದರೆ ಅವರು ಖಂಡಿತ ವಾಗಿಯೂ ಬಳಸಿಕೊಳ್ಳುತ್ತಾರೆಂಬುದು ಕಾರಂಜಿಯ ಆಶ್ರಮದ ಅನುಭವಗಳೇ ಸಾಕ್ಷಿ.

4. ಅನ್ನ, ಆಚ್ಛಾದನೆಗಳಿಗೆ ಅವರು ಕಾಡನ್ನೇ ನಂಬಿದ್ದರಿಂದ ಪರಿಸರದ ಅರಣ್ಯ ಸಂಪತ್ತನ್ನು ಬಳಸಲು ಅವರಿಗೆ ಪ್ರೋತ್ಸಾಹ ನೀಡಬೇಕು. ಆಹಾರ ಸಂಗ್ರಹಣೆ, ಬೇಟೆ, ಮೀನುಗಾರಿಕೆ ಹಾಗೂ ಅವರ ಕೃಷಿ ಪದ್ಧತಿಗೆ ಆತಂಕವನ್ನು ಉಂಟುಮಾಡಬಾರದು.

5. ಪೊಲೀಸರು, ಅರಣ್ಯಾಧಿಕಾರಿಗಳು, ಸುಲಿಯುವ ಲಾಭಕೋರರು, ದಳ್ಳಾಳಿಗಳು, ಸುರಾ ವ್ಯಾಪಾರಿಗಳು ಮುಂತಾದವರಿಂದ ಸಂರಕ್ಷಣೆ ನೀಡಿದರೆ ತಮ್ಮ ಭವಿಷ್ಯ ನಿರ್ಮಾಣದಲ್ಲಿ ತೊಡಗಲು ಅವರಿಗೆ ಅತೀವ ಅನುಕೂಲವಾಗುವುದು.

6. ದೇಶದ ಉದ್ದಗಲಕ್ಕೂ ಪ್ರಚಾರದಲ್ಲಿದ್ದ ಪಾಶ್ಚಾತ್ಯ ಕೋರ್ಟು, ಕಚೇರಿಗಳಲ್ಲಿ ಸುಳ್ಳನ್ನು ಸತ್ಯವನ್ನಾಗಿಯೂ ಸತ್ಯವನ್ನು ಸುಳ್ಳಾಗಿಯೂ ವಾದಿಸುವಂತೆ ಅವರಿಗೆ ಬಾರದ್ದರಿಂದ ಹಿಂದಿನಿಂದ ನಡೆದುಬಂದ ಆದಿವಾಸಿ ಹಿರಿಯರ ಪಂಚಾಯತಿಯ ನ್ಯಾಯದಾನವನ್ನೇ ಮುಂದುವರಿಸಬೇಕು.

7. ಇದಾಗಲೇ ಪ್ರಚಲಿತವಿದ್ದ ಮಾಝಿ, ಕೊತವಾಲರಂಥ ಅಧಿಕಾರಿಗಳಿಂದಲೇ ಅವರ ಹಳ್ಳಿಗಳ ಆಡಳಿತ ನಡೆಸುವಂತಿರಬೇಕು. ಹೊರ ಜಗತ್ತಿನ ಅಧಿಕಾರಿಗಳು, ಇವರ ಮುಖಾಂತರವೇ ಆದಿವಾಸಿಗಳನ್ನು ನೇರ ಸಂಪರ್ಕಿಸುವಂತಾದರೆ ಪ್ರಗತಿಗೆ ಯತ್ನಿಸುವುದು ಸಾಧ್ಯ.

8. ಆದಿವಾಸಿಗಳ ಪ್ರದೇಶದಲ್ಲಿ ನೇಮಕ ಹೊಂದಿದ ವೈದ್ಯರು, ಶಿಕ್ಷಕರು, ಗ್ರಾಮಸೇವಕರು, ಅರಣ್ಯಾಧಿಕಾರಿಗಳು, ಪೊಲೀಸರು ಆಯಾ ಆಡುಭಾಷೆಯನ್ನು ಕಲಿತು, ಅವರ ಆಚಾರ-ವಿಚಾರ ಗಳನ್ನು ಅರಿತು, ಅವರಲ್ಲೊಬ್ಬರಂತೆ ವರ್ತಿಸಿದರೆ ಯಾವ ಅಪಸ್ವರಕ್ಕೂ ಆಸ್ಪದವಿರುವದಿಲ್ಲ.

9. ಅವರೇ ಕಟ್ಟಿಕೊಳ್ಳುವ ಕಿರಿದಾದ ಕುಟೀರಗಳು, ಘೋಟುಲ್‌ಗಳು, ಉಡುವ ಅತ್ಯಲ್ಪ ಬಟ್ಟೆ, ಅರೆನಗ್ನತೆ, ಸುರಾಪಾನ, ನೃತ್ಯಮೇಳಗಳು, ಮಡಿವಂತಿಕೆ ಇಲ್ಲದ ಗಂಡು ಹೆಣ್ಣಿನ ಸಹ ಜೀವನ, ಇವುಗಳ ಬಗ್ಗೆ ಅವರು ತಲೆ ತಗ್ಗಿಸುವ ಬದಲಾಗಿ, ಅಭಿಮಾನ ಪಡುವಂತಾಗಬೇಕು.

10. ಕಾಡುಗಳಲ್ಲಿ ಜೀವಿಸುವ ಅವರು, ಕಾಡುಪ್ರಾಣಿಗಳಂತೆ ಕ್ರೂರರು, ಕುಡುಕರು ಎಂಬ ಭಾವನೆಯನ್ನು ಹೋಗಲಾಡಿಸಬೇಕು. ಅದರಂತೆ ಅವರು ರಂಗುರಂಗಿನ ಮುಕ್ತ ಭೋಗ

ಜೀವನ ನಡೆಸುತ್ತಾರೆಂಬ ಪಾಶ್ಚಾತ್ಯರ ಸಂಜಿಕೆಯನ್ನು ಹುಸಿಗೊಳಿಸಬೇಕು.

11. ಸರ್ವತಂತ್ರ ಸ್ವತಂತ್ರರಾಗಲು, ಅವರಿಗೆ ಸ್ವಆಡಳಿತ, ವ್ಯಾಪಾರಗಳಿಗೆ ತರಬೇತಿ ಕೊಡಬೇಕು. ಇದಕ್ಕಾಗಿ ಘೋಟುಲ್‌ಗಳಂತಹ ಅವರ ಸಂಸ್ಥೆಗಳನ್ನೇ ಬಳಸುವದು ಕ್ಷೇಮಕರ. ಇದರಿಂದ ಸಕಲ ಪ್ರಗತಿಪರ ಚಟುವಟಿಕೆಗಳಿಗೆ ಅವರೇ ಕೇಂದ್ರಬಿಂದುವಾಗಿಬಿಡುತ್ತಾರೆ.

12. ಅವರ ಪರಿಸರದಲ್ಲಿ ಯಾವ ಭಾರೀ ಉದ್ದಿಮೆಯನ್ನೂ ಪ್ರಾರಂಭಿಸಕೂಡದು. ಹಾಗೆ ಮಾಡದಿದ್ದಲ್ಲಿ ತಾಂತ್ರಿಕ ಪರಿಣತಿ ಪಡೆದವರು. ಆದಿವಾಸಿಗಳನ್ನು ಕೂಲಿ, ಹಮಾಲಿ, ಅಗ್ಗದ ಕಾರ್ಮಿಕರಾಗಿ ಬಳಸುವದರಿಂದ ಅವರಲ್ಲಿ ತಾವು ಕೀಳೆಂಬ ಭಾವನೆ ಮೂಡದೇ ಇರದು.

13. ಅವರ ಆಚಾರ-ವಿಚಾರ, ಮತ ಧರ್ಮಗಳಲ್ಲಿ ತಲೆಹಾಕುವ ಯಾವ ರಾಜಕೀಯ, ಧಾರ್ಮಿಕ ಸಂಸ್ಥೆಗಳಿಗೂ ಆದಿವಾಸಿಗಳ ವಾಸಸ್ಥಳಗಳಿಗೆ ಹೋಗಗೊಡಲೇ ಕೂಡದು.

14. ಕ್ವಚಿತ್ತಾಗಿ ಖರೀದಿಸುವ ಬಟ್ಟೆ-ಬರೆ, ಸಕ್ಕರೆ, ಬೆಲ್ಲ, ಚಹಾಪುಡಿ, ಉಪ್ಪು, ಸೀಮೆಎಣ್ಣೆಗಳನ್ನು ಆದಿವಾಸಿಗಳ ಸಹಕಾರಿ ಸಂಘಗಳೇ ಮಾರುವಂತಾದರೆ ವ್ಯಾಪಾರಿಗಳ ಕೊಡು-ಕೊಳಿ ವ್ಯವಹಾರದಲ್ಲಿ ನಡೆಯುವ ವಂಚನೆಯನ್ನು ತಡೆಹಿಡಿಯುವದು ಸಾಧ್ಯವಾಗುವದು.

15. ಕಷ್ಟಕಾಲದಲ್ಲಿ ಅತ್ಯವಶ್ಯವಿದ್ದಾಗ ಮಾತ್ರ. ಅಲ್ಪ-ಸ್ವಲ್ಪ ಸಾಲ ಕೊಡುವ ಜವಾಬ್ದಾರಿಯನ್ನು ಗ್ರಾಮೀಣ ಬ್ಯಾಂಕಿನವರು ವಹಿಸಿಕೊಂಡರೆ, ಬಡ್ಡಿ, ಚಕ್ರಬಡ್ಡಿಗಳಿಂದ ಸುಲಿಯುವ ಸಾಹುಕಾರರಿಂದ ಬದುಕಿಕೊಳ್ಳಲು ಸಾಧ್ಯವಾಗುವದು.

ವೆರಿಯರ್ ಎಲ್ವಿನ್ನರು ಕಾಲು ಶತಕಕ್ಕಿಂತ ಹೆಚ್ಚು ಕಾಲ ಆದಿವಾಸಿಗಳೊಂದಿಗೆ ಒಂದಾಗಿ ಬಾಳಿ, ಬದುಕಿ, ಅವರ ನೋವು-ನಲಿವುಗಳನ್ನು ಅರ್ಥಮಾಡಿಕೊಂಡು, ಅವರೂ ನಮ್ಮಂತೆ ಜೀವನ ನಡೆಸಬೇಕೆಂಬ ಏಕಮಾತ್ರ ಉದ್ದೇಶದಿಂದ ಭಾರತ ಸರಕಾರಕ್ಕೆ ಕೊಡಮಾಡಿದ ಸಲಹೆಗಳಿವು. ಸ್ವಾತಂತ್ರ್ಯ ಬಂದು ಅದಾಗಲೇ ನಲವತ್ತೂರು ವರ್ಷಗಳು ಜಾರಿಕೊಂಡ ಮೇಲೆಯೂ ನಾವು ನಮ್ಮ ಈ ದುರ್ದೈವಿ ಬಾಂಧವರನ್ನು ನಡೆಸಿಕೊಳ್ಳುವ ಕ್ರೂರ ರೀತಿಯನ್ನು ಕಂಡು ಎಲ್ವಿನ್ನರ ಆತ್ಮ, ನೋವಿನಿಂದ ನರಳುತ್ತಿರಬೇಕು !

# 19. ಕಾಡಿಲ್ಲದೇ ಗೋಳು



ಬಹುಸಂಖ್ಯಾತ ಬಸ್ತರದ ಆದಿವಾಸಿಗಳು ಹದಿಮೂರನೇ ಶತಮಾನದಿಂದಲೂ ಅದೇ ನೆಲ, ಜಲ ನಂಬಿಕೊಂಡು ಬಾಳಿ ಬದುಕುತ್ತ ಬಂದಿದ್ದಾರೆ. ಕಾಡೇ ಅವರ ಕಾಮಧೇನು. ಮಾನವನ ವಕ್ರ ಬುದ್ಧಿಯಿಂದ ಹಾಳುಗೆಡವದೇ ಇದ್ದ ನಿತ್ಯಹರಿತ್ ಅರಣ್ಯಗಳಲ್ಲಿ ಬಸ್ತರದೂ ಒಂದು. ವಿಶ್ವದಲ್ಲಿಯೇ ಉತ್ತಮ ಇಮಾರತ ಕಟ್ಟಿಗೆ ಎಂದು ಪರಿಗಣಿಸಲಾಗುವ ತೇಗು (ಟಿಕಟೊನಾ ಗ್ರೆಂಡಿಸ್) ಮತ್ತು ಸಾಲ (ಶೋರಿಯಾ ರೋಬಸ್ಟಾ) ವೃಕ್ಷಗಳು ಹುಲುಸಾಗಿ ಬೆಳೆದು 20-50 ಮೀಟರ್ ಎತ್ತರ ಮತ್ತು 10 ಮೀಟರಿನ ಸುತ್ತಳತೆ ಪಡೆಯುತ್ತವೆ. ಬೆಲೆಬಾಳುವ ಇನ್ನಿತರ ವೃಕ್ಷಗಳೆಂದರೆ ಸಾಜ (ಟರಮನೇಲಿಯಾ ಟೊಮೆಂಟೊಸಾ), ಸೇಜಾ (ಲಂಗರಸ್ಟ್ರೊಮಿಯಾ ಪರ್ವಿಫ್ಲೋರಾ), ಗರಾರಿ (ಕ್ಲೆಸ್ಟೆನೆಥಸ್ ಕೊಲಿನಸ್), ಟೆಂಡು (ಡಾಯೊಸಾಯಕಸ್ ವೆಲಿನೆರ್ಝ್ಯುಲೂನ್), ಬಿಜಾ (ಟೆರೊಕರಪಸ್ ಮಾರ್ಸೂಪಿಯಮ್), ಬಿದಿರು (ಡೆಡ್ರೊಕೆಲಮಸ್ ಸ್ಟ್ರಿಕಟಸ್) ಆದಿವಾಸಿಗಳ ಜೀವನದಲ್ಲಿ ಹಾಸುಹೊಕ್ಕಾಗಿ ಹೋದ ಸಸ್ಯಗಳು. ಇವಲ್ಲದೇ ಸ್ಥಳ ಸಿಕ್ಕಲ್ಲೆಲ್ಲ ಸಸ್ಯಕೋಟಿ ವಿರಾಜಿಸುತ್ತದೆ. ಅವುಗಳಲ್ಲಿ ಅನೇಕಾನೇಕ ಸಸ್ಯಗಳಿಗೆ ವಿಜ್ಞಾನಿಗಳು

ಹೆಸರಿಸಿಲ್ಲ ಕೂಡ. ಪ್ರತಿ ಹೆಕ್ಟೇರಿಗೆ 15ರಿಂದ 22 ಲಕ್ಷ ಸಸ್ಯಗಳಿವೆ ಎಂದು ಆ ರಾಜ್ಯದ ಅರಣ್ಯ ಸಂಶೋಧನಾ ಕೇಂದ್ರವೇ ಅಂದಾಜು ಮಾಡಿದೆ. ಆದಿವಾಸಿಗಳೆಲ್ಲ ಇವುಗಳನ್ನು ಒಂದಿಲ್ಲೊಂದು ವಿಧದಲ್ಲಿ ಬಳಸಿಕೊಳ್ಳುವದೇ ಬಿಡುವದಿಲ್ಲ.

ಮಹುವಾ (ಮಧುಕಾ ಇಂಡಿಕಾ) ವೃಕ್ಷ ಅವರಿಗೆ ಕಲ್ಪತರುವಿನಂತೆ. ಹೂವುಗಳನ್ನು ಹಸಿಯಾಗಿಯೋ ಹುರಿದೋ ತಿನ್ನುತ್ತಾರೆ. ಸೊಗಸಾದ ಸುರೆಯನ್ನು ಮಾಡುತ್ತಾರೆ. ರೊಟ್ಟಿ ಮಾಡುವಾಗ ಅದಕ್ಕೆ ಒಣಗಿದ ಹೂವುಗಳ ಹುಡಿಯನ್ನು ಸೇರಿಸುತ್ತಾರೆ. ಬೀಜಗಳಿಂದ ಎಣ್ಣೆಯನ್ನು ಹಿಂಡುತ್ತಾರೆ. ಸಾಲ ಪರ್ಣಗಳಿಂದ ಚಹ, ಹೆಂಡ, ಗಂಜಿ ಕುಡಿಯಲು ದೊನ್ನೆ, ಊಟಕ್ಕಾಗಿ ಪತ್ರಾವಳಿಗಳನ್ನು ಮಾಡುತ್ತಾರೆ. ಟೆಂಡು ಎಲೆಗಳನ್ನು ಮುಖ್ಯವಾಗಿ ಬೀಡಿ ಕಟ್ಟುವದಕ್ಕೆ ಬಳಸಿದರೂ ಅದರಿಂದ ಕಾಳು-ಕಡಿ ದಾಸ್ತಾನು ಮಾಡಲು ಬುಟ್ಟಿಗಳನ್ನು, ಮಳೆಯಿಂದ ಸಂರಕ್ಷಿಸಿಕೊಳ್ಳಲು ಕೊಪ್ಪೆಯನ್ನು ನಿರ್ಮಿಸುತ್ತಾರೆ. ಬಿದಿರಿನ ಬುಟ್ಟಿ, ಚಾಪೆ, ಪೊರಕೆ, ಪಂಜರ, ಬೇಟೆಯ ಬಲೆಗಳನ್ನೆಲ್ಲ ತಯಾರಿಸಿಕೊಳ್ಳುತ್ತಾರೆ. ಹಲವಾರು ಮರಗಳ ತೊಗಟೆಯನ್ನು ದಾರ ಮತ್ತು ಹಗ್ಗಗಳಂತೆ ಬಳಸಿಕೊಳ್ಳುತ್ತಾರೆ. ಅರಣ್ಯದಿಂದ ಸಮತೋಲನವಿದ್ದ ಪೌಷ್ಟಿಕ ಆಹಾರವೂ ಅವರಿಗೆ ದೊರೆಯುತ್ತದೆ.

ಬಿದಿರಿನ ಮೊಳಕೆ (ಕಣಿಲೆ), ಅಣಬೆ, ಗಡ್ಡೆ-ಗೆಣಸು, ಚಿಗುರೆಲೆಗಳಿಂದ ಶರೀರಕ್ಕೆ ಬೇಕಾಗುವಷ್ಟು ಕ್ಯಾಲರಿಗಳು, ಪಿಷ್ಟ ಪದಾರ್ಥಗಳು, ವಿಟಾಮಿನ್, ಕಬ್ಬಿಣಾಂಶಗಳು, ಸುಲಭವಾಗಿ ಸಿಗುತ್ತವೆ. ಎಂಥ ಆಹಾರವನ್ನಾದರೂ ಜೀರ್ಣಿಸಿ ತೇಗುವ ಗಟ್ಟಿಗರು ಅವರು. ಆಹಾರ ಕೊರತೆ ಅನಿಸಿದಾಗ ಮಾವಿನ ಹಣ್ಣಿನ ಗೊರಟೆಯ ಹಿಟ್ಟನ್ನು ರೊಟ್ಟಿ ಮಾಡಲು ಬಳಸುತ್ತಾರೆ. ಬೇಟೆಯಾಡುವುದರಿಂದ ಮೊಲ, ಚಿಗರೆ, ಕಾಡುಹಂದಿ, ಕಾಡುಕೋಣ, ವಿವಿಧ ಜಾತಿಗಳ ಹಕ್ಕಿಗಳ ಮಾಂಸ ಅವರದಾಗುತ್ತದೆ. ಕಷ್ಟಕಾಲದಲ್ಲಿ ಹೆಗ್ಗಣಗಳೂ ಸರಾಗವಾಗಿ ಅವರ ಉದರವನ್ನು ಸೇರಬಲ್ಲವು. ಅರಣ್ಯಗಳಿಂದ ಸಿಗಬಹುದಾದಂತಹ ಸಕಲ ಸರಕುಗಳನ್ನು ಅವರು ಒಂದಿಲ್ಲೊಂದು ರೀತಿಯಿಂದ ಬಳಸದೇ ಇರುವದಿಲ್ಲ. ಅವುಗಳಲ್ಲಿ ಮುಖ್ಯವಾದವಗಳೆಂದರೆ, ಪೊರಕೆ ಮಾಡಲು ಬೇಕಾಗುವ ಪೂಲ್‌ಬಹಾರಿ, ಚಾಪೆ ಹೆಣೆಯುವ ಬಾಗಾಯ್ ಹುಲ್ಲು, ಪಿಪ್ರಾ ಬೇರುಗಳು, ಉಪ್ಪಿನಕಾಯಿಗೆ ಸೇರಿಸುವ ಕಿರೊಂಜಿ, ಶರಬತ್ ಮಾಡಬಹುದಾದ ಬೇಲದ ಹಣ್ಣುಗಳು, ಔಷಧಿಗೆ ಬೇಕಾಗುವ ಬಿಯ್‌ಬ್ರಿಂಗ್, ಸಾಬೂನಿನಂತೆ ಬಳಸುವ ಶೀಗೆಕಾಯಿ, ಅಂಟು, ಅರಗು, ಕೋಸಾ (ಟಸರ್) ರೇಶಿಮೆಗೂಡು, ಬೇವಿನ ಬೀಜ, ಹುಣಿಸೆ ಹಣ್ಣು, ಪ್ರಾಣಿಗಳ ಚರ್ಮ, ಕೋಡು, ಜೇನುತುಪ್ಪ ಮೇಣ ಇತ್ಯಾದಿಗಳು.

ಈ ಆದಿವಾಸಿಗಳು ಕೊರಡನ್ನು ನೀರಿನಂತೆಯೂ, ನೀರನ್ನು ಅಮೃತದಂತೆಯೂ ಬಳಸುವ ಕಾಲ ಒಂದಿತ್ತು. ತಮ್ಮ ಬಳಕೆಗಾಗಿ ಎಂಥ ಮರವನ್ನೂ ನೆಲಕ್ಕೆ ಉರುಳಿಸಬಹುದಾಗಿತ್ತು. ಅಂತೆಯೇ ಕಾಡಿನಲ್ಲಿ ಅಲೆಯುವಾಗ ಬಾಣ ಬಿಲ್ಲುಗಳ ಜೊತೆ ಕಿರಿದಾದ 'ಟಾಂಕಿ' (ಕೊಡಲಿ)ಯನ್ನು ಹೆಗಲಿನಿಂದ ನೇತು ಹಾಕಿದಾಗಲೇ ಅವರಿಗೆ ನೆಮ್ಮದಿ. ಎತ್ತರದ ಮರದ ಮೇಲೆ ಕಟ್ಟಿದ ಜೇನುಗೂಡು ಪಡೆಯುವದಕ್ಕಾಗಿ ಸಾಲ, ಮಹುವಾದಂತಹ ಮರಗಳನ್ನು ಕಡಿದ ಉದಾಹರಣೆಗಳೂ ಇವೆ. ಮರದ ಕೊರಡುಗಳನ್ನೇ ಬಳಸಿ ಗೃಹಗಳನ್ನು ನಿರ್ಮಿಸುವದರಲ್ಲಿ ಅವರದು ಎತ್ತಿದ ಕೈ. ಭಾರಿ ಭಾರಿ ದಿಂಡುಗಳನ್ನು ಜೋಡಿಸಿ ನಿಲ್ಲಿಸಿದ ಗೋಡೆಗೆ ಚಪ್ಪರ ಹಾಕಿದರೆ ಮನೆ ಸಿದ್ಧವಾದಂತೆ. ಜೋಡಿಸಬೇಕಾಗಿಬಂದಲ್ಲಿ ತೊಗಟೆಯಿಂದ ಬಿಗಿದು ಬಿಡುತ್ತಾರೆ. ಅಲ್ಲೊಂದು ಇಲ್ಲೊಂದು ಬಿರುಕು, ಕಂಡಿಗಳು ಉಳಿದುಕೊಂಡರೆ ಎಲೆಗಳಿಂದ ಮುಚ್ಚಿಬಿಡುತ್ತಾರೆ. ಕಾಡು ಪಶುಗಳಿಂದ ಸಂರಕ್ಷಿಸಿಕೊಳ್ಳುವದಕ್ಕಾಗಿ ಕೊರಡಿನ ಮಂಚಲು,

ಕೊಟ್ಟಿಗೆ ನಿರ್ಮಿಸುತ್ತಾರೆ. ಅವರ ಮಂತ್ರಪಾದಿ ವೈದ್ಯರಿಗಾಗಿ, ಕೊರಡಿನ ತೂಗುಜೋಕಾಲಿ ನಿರ್ಮಿಸುತ್ತಾರೆ. ಬಸ್ತರ ದಸರಾಕ್ಕೆ ಪ್ರತಿವರ್ಷವೂ ಹೊಸ ಹೊಸ ತೇರಿನ ನಿರ್ಮಾಣ ವಾಗುತ್ತದೆ. ಸಣ್ಣಪುಟ್ಟ ಸೇತುವೆ ಕಟ್ಟುವದಕ್ಕಾಗಿ ದಿಂಡುಗಳನ್ನು ಜೋಡಿಸಿ, ಎಲೆಗಳನ್ನು ಹಾಸಿ, ಮಣ್ಣನ್ನು ಪಸರಿಸಿಬಿಡುತ್ತಾರೆ. ಈ ಕೊರಡು, ಒಂದೆರಡು ವರ್ಷಗಳಲ್ಲಿ ಹುಳ-ಹುಪ್ಪಡಿಗಳಿಗೆ ಆಹುತಿಯಾಗು ವದರಿಂದ ತಿರುಗಿ ಅವುಗಳ ನಿರ್ಮಾಣ ಮಾಡಬೇಕಾಗುತ್ತದೆ. ಅಲ್ಲದೆ ಪ್ರತಿಯೊಬ್ಬರ ಮನೆಯಲ್ಲಿಯೂ ಇಡೀ ದಿನ ಬೆಂಕಿ ಅಖಂಡವಾಗಿ ಉರಿಯುತ್ತಲೇ ಇರಬೇಕು. ಇದಕ್ಕಾಗಿ ಕೂಡ, ಬೆಲೆಬಾಳುವ ಕಾಷ್ಠವನ್ನೇ ಬಳಸುವದರಿಂದ ಪ್ರತಿಯೊಂದು ಕುಟುಂಬ ವರ್ಷ ಒಂದಕ್ಕೆ, ಎಷ್ಟೊಂದು ಸೌದೆಯನ್ನು ಬಳಸುತ್ತಿದ್ದರು ಎಂಬ ಕಲ್ಪನೆ ಬರುವಂತಿದೆ. ಇಂಥವರಿಗೆ ಕಾಡಿನ ಸೌಕರ್ಯ ಸಿಗದಂತೆ ಮಾಡುವದು, ಅಮೆರಿಕನ್‌ರಿಂದ ಕಾರುಗಳನ್ನು ಕಸಿದುಕೊಂಡಂತೆ! ಆದರೆ ರಾಜ್ಯ ಮತ್ತು ಕೇಂದ್ರ ಸರಕಾರಗಳು ಇದನ್ನೇ ಮಾಡಲು ಹೊರಟಂತಿದೆ.

ಮಧ್ಯಪ್ರದೇಶದ ಅರಣ್ಯ ಸರಕಾರ 1958ರವರೆಗೆ ಬಸ್ತರ ಜಿಲ್ಲೆಯ ಮರಗಳಿಂದ ಕೇವಲ 15 ಕೋಟಿ ರೂಪಾಯಿಗಳನ್ನು ಗಳಿಸಿದರೆ, ಅನಂತರ ಏಳು ವರ್ಷಗಳಲ್ಲಿ ಈ ಮೊತ್ತ 35 ಕೋಟಿ ರೂಪಾಯಗಳಷ್ಟಕ್ಕೆ ಏರಿತೆಂದರೆ ಕಾಡಿನ ವಿನಾಶದ ಕಲ್ಪನೆ ಬರುವಂತಿದೆ. ಸಾರ್ವಜನಿಕ ಲೀಲಾವುಗಳಲ್ಲಿ ಈ ದಿಂಡುಗಳು ದುಡ್ಡಿಗೆ ಪಂಚೇರು ಬೆಲೆಯಲ್ಲಿ ಮಾರಾಟ ವಾಗುವದರಿಂದ ಇವುಗಳನ್ನು ಕೊಳ್ಳಲು ಕಲಕತ್ತಾ, ದಿಲ್ಲಿ, ಮದ್ರಾಸ್‌ಗಳಿಂದ ಕೊರಡುಗಳ ಕಂಟ್ರ್ಯಾಕ್ಟರುಗಳು ಧಾವಿಸಿಬರುತ್ತಿರುತ್ತಾರೆ. ಇವಲ್ಲದೆ ನೆರೆಯ ರಾಜ್ಯಗಳಾದ ಆಂಧ್ರ, ಮಹಾರಾಷ್ಟ್ರಗಳಿಗೆ ಪ್ರತಿ ವರ್ಷ ಐವತ್ತು ಕೋಟಿ ರೂಪಾಯಿ ಬೆಲೆಬಾಳುವ ನಾಟುಗಳು ಕಳ್ಳತನದಿಂದ ಮಾರಾಟವಾಗು ವವೆಂದು ಅಂದಾಜು ಮಾಡಲಾಗಿದೆ. ಇದಿಷ್ಟರಿಂದಲೇ ಸಂತುಷ್ಟಗೊಳ್ಳದೆ ಸರಕಾರದ ಅಧಿ ಕಾರಿಗಳು, ರಾಜಕಾರಣಿಗಳು ಬೇರೆಯೇ ಕನಸುಗಳನ್ನು ಕಾಣಲಾರಂಭಿಸಿದರು. ಬೆಲೆಬಾಳುವ ಕಾಡು ಕಡಿದು ಸಾಗವಾನಿ, ಸಾಲ ಬೆಳೆಯುವಲ್ಲಿ ನೀಲಗಿರಿಯಂಥ ವೃಕ್ಷಗಳು ಬೆಳೆಸಿದರೆ ಹಣದ ಹೊಳೆಯನ್ನೇ ಹರಿಸಿಕೊಳ್ಳಬಹುದೆಂದು ಕೊಂಡರೆ, ಸುದೈವದಿಂದ ಕಾರಖಾನೆಗಳು ತಮಗೆ ಬೇಕಾಗಿರುವ ಸಸ್ಯಗಳನ್ನು ಅಲ್ಲಿ ಬೆಳೆಯಲು ಅರೆಮನಸ್ಸಿನಿಂದ ಒಪ್ಪಿಕೊಂಡವು. ಈಗ ಸೂಚೀಪರ್ಣ ಗಿಡಗಳನ್ನು ನೆಟ್ಟರೆ ಹೇಗಿರುತ್ತದೆಂಬ ವಿಚಾರದಲ್ಲಿ ತೊಡಗಿದ್ದಾರೆ. ಈ ಅರಣ್ಯ ಭಕ್ಷಕರು, ಇದಕ್ಕಾಗಿ ಮಧ್ಯಪ್ರದೇಶ ಸರಕಾರ, 1976ರಲ್ಲಿ ವಿಶ್ವಬ್ಯಾಂಕಿನಿಂದ ಐದು ವರ್ಷಗಳಲ್ಲಿ ಪ್ರಾಪ್ತವಾಗುವ 820 ಲಕ್ಷ ಡಾಲರ್ (1 ಡಾಲರ್=18 ರೂಪಾಯಿ)ಗಳ ಸಾಲ ಪಡೆಯಿತು. ಈ ಹಣದಿಂದ 20,000 ಹೆಕ್ಟೇರ್ ಅರಣ್ಯವನ್ನು ಕಡಿದು ಸೂಚಿಪರ್ಣ ವೃಕ್ಷಗಳನ್ನು ಬೆಳೆಸುವ ಯೋಜನೆಯನ್ನು ಹಾಕಿಕೊಂಡಿತು. ಇದಕ್ಕಾಗಿ ಬಸ್ತರ ಜಿಲ್ಲೆಯೊಂದರಲ್ಲೇ ಆಗುವ ಅರಣ್ಯ ಸಂಪತ್ತಿನ ನಾಶ ಹೇಳಲು ಅಸಾಧ್ಯವಾದುದು. ಅಲ್ಲಿ ಸ್ಥಾಪಿಸಲಾಗುವ 250 ಕೋಟಿ ರೂಪಾಯಿಗಳ ಸಾಹುಕಾರೀ ಕಾಗದ ಕಾರಖಾನೆಗೆ ಪ್ರತಿವರ್ಷವೂ 50,000 ಟನ್‌ಗಳಷ್ಟು ಕಾಗದದ ಗೊಜ್ಜನ್ನು ಪೂರೈಸುವ ಯೋಜನೆ ಸರಕಾರದ್ದಾಗಿತ್ತು.

ಅರಣ್ಯ ಖಾತೆಯವರಿಂದ ಅರಣ್ಯದ ಸರ್ವನಾಶ ಸಾಧ್ಯವಾಗದ್ದರಿಂದ ಆ ಜವಾಬ್ದಾರಿಯನ್ನು ಮಧ್ಯಪ್ರದೇಶದ ವಿದ್ಯುತ್ ಇಲಾಖೆ ವಹಿಸಿಕೊಂಡಿತು. 1984ರಲ್ಲಿ ವಿಶ್ವಬ್ಯಾಂಕಿನಿಂದ 3000 ಲಕ್ಷ ಡಾಲರ್ ಸಾಲ ಪಡೆದು, ಬಸ್ತರ ಜಿಲ್ಲೆಯಲ್ಲಿ ಹರಿಯುವ ಇಂದ್ರಾವತಿ ನದಿಯ ನೀರನ್ನು ಮೂರು ಯೋಜನೆಗಳ ಅಡಿ ಜಲ ವಿದ್ಯುತ್ ಪಡೆಯುವದು ಅದರ ಉದ್ದೇಶವಾಗಿತ್ತು. ಇದರಿಂದ 17,000 ಹೆಕ್ಟೇರ್ ಫಲವತ್ತಾದ ಭೂಮಿಯ ಜಲ ಸಮಾಧಿಯಾಗಲೇಬೇಕು. ಅಲ್ಲಿ ಬೆಳೆದ ದಟ್ಟ ಕಾಡಿನ ಜೊತೆಗೆ ಅದನ್ನೇ ನಂಬಿದ ಮುರಿಯ, ಮಾರಿಯ, ಗೊಂಡ, ಹಲ್ಬೀ,

ಕಾಡುಕೋಣ ಮಾರಿಯದು ನಿರ್ಗತಿಕರಾಗಬೇಕು. ಇದರಿಂದಾಗಿ ನೆರೆಯ ರಾಜ್ಯಗಳಾದ ಆಂಧ್ರಪ್ರದೇಶ, ಮಹಾರಾಷ್ಟ್ರಗಳ ನದಿಗಳಿಗೆ ನೀರಿನ ಕೊರತೆಯಾಗುವ ಸಾಧ್ಯತೆಗಳು ಇದ್ದೇ ಇವೆ. ಇದರಲ್ಲಿಯ ಮೊದಲ ಯೋಜನೆಯನ್ನು ಕೈಗೆತ್ತಿಕೊಂಡಾಗಲೇ ಸಕಲರಿಂದ ಸರ್ವವಿಧದ ವಿರೋಧವನ್ನು ಸರಕಾರ ಎದುರಿಸಬೇಕಾಯಿತು. ಜಿಲ್ಲೆಯ ಮುಖ್ಯಸ್ಥಳವಾದ ಜಗದಲಪುರದಿಂದ ನೂರು ಕಿಲೋಮೀಟರ್ ದೂರದ ಬಾರಸೂರದಲ್ಲಿ ಬಡೋಘಾಟ್ ಅಣೆಕಟ್ಟು ನಿಲ್ಲಿಸಿದರೆ ಅದರಿಂದ 107 ಮೆಗಾವಾಟ್‌ನಷ್ಟು ವಿದ್ಯುತ್ ಉತ್ಪಾದನೆಯಾಗುವದೆಂಬ ಅಂದಾಜು ಮಾಡಲಾಗಿದೆ. ಇದಕ್ಕಾಗಿ 450 ಕೋಟಿ ವೆಚ್ಚ ಬರಬಹುದು ಎಂದು ಸರಕಾರಿ ವಲಯಗಳು ಲೆಕ್ಕಾಚಾರ ಹಾಕಿದರೂ ಇಷ್ಟೊಂದು ಅಲ್ಪಹಣದಿಂದ ಏನೂ ಸಾಧಿಸಲಾಗದು ಎಂಬುದು ಸರ್ವವಿದಿತ. 80 ಲಕ್ಷ ಮರಗಳನ್ನು ಕೆಡವಿ ಈ ಯೋಜನೆ ಪೂರ್ತಿ ಗೊಳಿಸಲು ಎರಡು ದಶಕಗಳ ಕಾಲಾವಧಿಯಾದರೂ ಬೇಕು. ಆದ್ದರಿಂದ ಅಲ್ಲಿಯತನಕ ಕಾಡನ್ನು ಸವರಿದ ಕಳ್ಳ ಕಾಸಿನ ಮೇಲೆ ಮೇಯುತ್ತ ಮೋಜಾಗಿರಬಹುದು ಎಂಬುದು ಅಧಿಕಾರಿ ವರ್ಗದವರ ಲೆಕ್ಕಾಚಾರ. ಆದರೆ ತಮ್ಮ ನೆಲೆಯನ್ನು ಕಳೆದುಕೊಂಡ ಹತ್ತು ಸಾವಿರ ಆದಿವಾಸಿಗಳಿಗೆ ಎಲ್ಲಿ ಆಶ್ರಯ ಕೊಡುವದು ? ಎಂದು ಯಾರೂ ತಲೆ ಕೆಡಿಸಿಕೊಂಡಂತೆ ಅನಿಸಲೇ ಇಲ್ಲ. ಈ ಯೋಜನೆಗೂ ವಿರೋಧಿಗಳ ಆಕ್ರೋಶ ವಿಪರೀತವಾದದ್ದರಿಂದ ಕೇಂದ್ರ ಸರಕಾರ, ಜೂನ್ 1988ರಲ್ಲಿ ಕೊಡಲಿದ್ದ ಸಾಲ ಬೇಕಿಲ್ಲವೆಂದು ವಿಶ್ವಬ್ಯಾಂಕಿಗೆ ಮನವಿ ಮಾಡಿಕೊಂಡಿತು. ಇಷ್ಟರಿಂದಲೇ ತೃಪ್ತಿಯಾಗದ ಮಧ್ಯಪ್ರದೇಶದ ವಿದ್ಯುತ್ ಇಲಾಖೆಯವರು ಸುಮ್ಮನಾಗದೆ ತಾವೂ ಈವರೆಗೆ ಅಪಾರ ಹಣ ವ್ಯಯಿಸಿದ್ದರಿಂದ ಯೋಜನೆಯನ್ನು ಕಾರ್ಯಗತ ಮಾಡಲೇಬೇಕು ಎಂದು ಪಟ್ಟುಹಿಡಿದಿದ್ದರಿಂದ 1988ರ ಅಂತ್ಯದಲ್ಲಿ ವಿವಿಧ ಅಭಿಪ್ರಾಯಗಳುಳ್ಳ ಗುಂಪುಗಳ ಪ್ರತಿನಿಧಿಗಳ ಸಭೆಯನ್ನು ದಿಲ್ಲಿಯಲ್ಲಿ ಕರೆಯಲಾಯಿತು. ''ಹೇಗಾದರೂ ಅರಣ್ಯನಾಶ ಆಗುತ್ತಲೇ ಇದೆ, ವಿಶ್ವಬ್ಯಾಂಕ್ ಕೊಡ ಮಾಡುವ ಹಣದಿಂದ, ಆದಿವಾಸಿಗಳ ಪ್ರಗತಿ ಸಾಧಿಸಲು ಸಾಧ್ಯವಿದೆ'' ಎಂದು ಆ ರಾಜ್ಯದ ವಿದ್ಯುತ್ ಮತ್ತು ಅರಣ್ಯ ಖಾತೆಗಳ ವಾದ, ಸಕಲರನ್ನೂ ತಬ್ಬಿಬ್ಬಾಗಿಸಿತು. ಈ ಯೋಜನೆಗೆ ತಗಲಿರುವ 450 ಕೋಟಿ ರೂಪಾಯಿಗಳ ವೆಚ್ಚ, ಯೋಜನೆ ಮುಗಿಯುವದರೊಳಗೆ 1990 ಕೋಟಿಗೆ ಹೋಗಬಹುದೆಂದು ಸಾರಿದಾಗ, ಯಾರೂ ಭಿನ್ನಾಭಿಪ್ರಾಯ ವ್ಯಕ್ತಪಡಿಸಲೇ ಇಲ್ಲ.

ದಕ್ಷಿಣ ಬಸ್ತರದ ಪರ್ವತಾವಳಿಗಳಲ್ಲಿರುವ ಕಬ್ಬಿಣದ ಅದಿರು ಪರದೇಶಕ್ಕೆ ರಫ್ತು ಮಾಡುವದಕ್ಕಾಗಿ, ಕಿರುಂಡೇಲ್ ಊರನ್ನು ವಿಶಾಖಪಟ್ಟಣಕ್ಕೆ ಜೋಡಿಸುವದಕ್ಕಾಗಿ ರೇಲು ಮಾರ್ಗದ ರಚನೆ ಮಾಡುವಾಗ ಉತ್ಕೃಷ್ಟವಾದ ಕಾಡನ್ನು ಕಡಿಯಲೇಬೇಕಾಯಿತು. ನಾರಾಯಣಪುರ ತಹಶೀಲ್‌ನಲ್ಲಿರುವ ರೇಘೂಟ್‌ದ ಅದಿರಿನಲ್ಲಿಯೂ ಭಿಲಾಡೆಲಾದ ಅದಿರಿನಂತೆಯೇ ಶೇ. 70 ಕಬ್ಬಿಣ ಇರುವುದರಿಂದ ಅದನ್ನು ರಫ್ತು ಮಾಡುವ ವಿಚಾರ ಸರಕಾರಕ್ಕಿದೆ. ಅದನ್ನೂ ರೇಲಿನಿಂದ ಜೋಡಿಸುವದಕ್ಕಾಗಿ ಅದೆಷ್ಟು ಮರಗಳನ್ನು ಉರುಳಿಸುವವರಿದ್ದಾರೋ ! ಈ ಜಿಲ್ಲೆ ನೈಸರ್ಗಿಕ ಸಂಪತ್ತಿನಿಂದ ತುಂಬಿ ತುಳುಕುವದರಿಂದ, ಸಾಹುಕಾರರೆಲ್ಲ ಅನೇಕಾನೇಕ ಉದ್ದಿಮೆಗಳನ್ನು ಪ್ರಾರಂಭಿಸುವದಕ್ಕಾಗಿ ಗುಣಾಕಾರ, ಭಾಗಾಕಾರ ಹಾಕಿಕೊಂಡು ಬಾಯಿ ಚಪ್ಪರಿಸುತ್ತಲೇ ಇದ್ದಾರೆ. ಅಸಾಮ್‌ದಲ್ಲಿಯಂತೆ ಪ್ಲೈವುಡ್, ಸುಲಭ ಬೆಲೆಯಲ್ಲಿ, ಸುಂದರ ಗೃಹ ನಿರ್ಮಾಣಕ್ಕಾಗಿ ಬೇಕಾಗುವ ಆಸ್ಬೆಸ್ಟೋಸ್, ತಗಡುಗಳು, ಸಿಮೆಂಟ್ ಪೈಪ್‌ಗಳು, ಇಟ್ಟಂಗಿ, ಗಟ್ಟಿ ಬೋರ್ಡ್ ಮೊದಲಾದವುಗಳ ಉತ್ಪಾದನೆಗೆ ವ್ಯಾಪಾರಿಗಳು ಮುಂದೆ ಬಂದಿದ್ದಾರೆ. ಇವುಗಳನ್ನು ಪ್ರಾರಂಭಿಸುವಲ್ಲಿ ಸರಕಾರಿ ಅಧಿಕಾರಿಗಳು,

ರಾಜಕಾರಣಿಗಳು ಮುಂತಾದವರಿಗೆ ವಿಶೇಷ ಆಸ್ಥೆ ಇದೆ ಎಂದು ಬೇರೆ ಹೇಳಬೇಕಿಲ್ಲ. ಆದರೆ ಅಲ್ಲಿರುವ ಅಪೂರ್ವ ಅರಣ್ಯಗಳು, ಅವುಗಳ ಪರಿಸರದ ಜೊತೆಗೆ, ಶತಮಾನಗಳಿಂದ ಆದಿವಾಸಿಗಳು ತಮ್ಮದೆಂದು ಸಂಚಿದ ಸಕಲವೂ ನಾಶವಾಗದೇ ಇದ್ದೀತೇ? ಎಂಬುದೇ ಬೃಹತ್ತರವಾದ ಸಮಸ್ಯೆ.

# 20. ಆಧುನೀಕರಣ



ಹಳೆಯದನ್ನು ಹೋಳಿಯಾಡಿ, ಹೊಸದನ್ನು ಅದರ ಸ್ಥಾನದಲ್ಲಿ ಸ್ಥಾಪಿಸುವದೇ ನಮಗೆ ಆಧುನೀಕರಣ. ವಿಷವಾಯು ಕಾರದೇ, ಪೆಟ್ರೋಲ ಉರಿಸದೇ ಸವಾರಿ, ಸಾಮಾನು ಸಾಗಿಸುತ್ತಿದ್ದ ಜಟಕಾಗಳನ್ನು ಮೂಲೆಗೊತ್ತಿ ಆಟೋರಿಕ್ಷಾ ಓಡಿಸುವದು ಆಧುನೀಕರಣ. ಕೋಚೀನದಿಂದ ಕಚ್ಛದವರೆಗೆ ಗಾಳಿಯ ಬಲದಿಂದಲೇ ಓಡಾಡಿ ಭಾರವಾದ ಸರಕುಗಳನ್ನು ಸಾಗಿಸುವ ದೊಡ್ಡ ನಾವೆ (ಮಚವೆ)ಗಳ ಸ್ಥಾನದಲ್ಲಿ ಸದಾ ಪೆಟ್ರೋಲ್ ಕುಡಿದು ಅಪಘಾತ ಮಾಡುವ ವಾಹನಗಳಿಗೆ ಶರಣು ಹೋದದ್ದು ನಮ್ಮ ಪ್ರಗತಿಯ ದ್ಯೋತಕ. ಬಾವಿ, ಕೆರೆ, ನದಿಗಳಿಂದ ನೀರು ಎತ್ತಿಹಾಕಿ ಹೊಲ-ತೋಟ ಮಾಡುವವರಿಗೆ, ಗುಂಡಿ ಒತ್ತಿದರೆ ನೀರ ಹೊಳೆ ಹರಿಸುವ ಪಂಪ್ ಸವಲತ್ತುಮಾಡಿಕೊಟ್ಟು ಎಲ್ಲೆಲ್ಲಿಯೂ ನೀರಿಗಾಗಿ ಹಾಹಾಕಾರವಾಗುವಂತೆ

ಮಾಡುತ್ತಿರುವದೇ ನಮ್ಮ ಏಳ್ಗೆಯ ಕುರುಹು. ಜಲವಿದ್ಯುತ್ ಉತ್ಪಾದನೆ ಮಾಡಿ ಶರಾವತಿ, ಕಾಳಿನದಿಗಳು ಕೊನೆಯುಸಿರು ಎಳೆಯುತ್ತಿರುವದು ನಮ್ಮ ಯೋಜನಾಕಾರರ ಇನ್ನೊಂದು ಸಾಹಸ. ಇಂಥ ಪ್ರಗತಿಪರ ನಾಯಕರ ನೇತೃತ್ವದಲ್ಲಿ ಆದಿವಾಸಿಗಳನ್ನು ಆಧುನಿಕರನ್ನಾಗಿ ಮಾಡದಿದ್ದರೆ ಹೇಗೆ? ಅಂತೆಯೇ ಚುನಾವಣೆಯ ಮೊದಲು ಕೇಂದ್ರ ಮತ್ತು ರಾಜ್ಯಗಳ ಮುಖಂಡರು ಹೆಲಿಕಾಪ್ಟರ್‌ಗಳಲ್ಲಿ ಅವರ ತಾಣಕ್ಕೆ ಹಾರಿ, ಸೀರೆ-ಕುಪ್ಪಸ, ಧೋತರ, ಎಣ್ಣೆ ಉಪ್ಪುಗಳನ್ನು ಅಮೃತಹಸ್ತದಿಂದ ವಿತರಣೆ ಮಾಡಿದರೆಂದರೆ ಆದಿವಾಸಿಗಳೆಲ್ಲ ಈ ಕೊಡುಗೆಗಾಗಿ ಜನ್ಮ-ಜನ್ಮಾಂತರಗಳಲ್ಲಿ ಕೃತಜ್ಞರಾಗಿರುತ್ತಾರೆಂಬ ಭ್ರಮೆಯಲ್ಲೇ ಇರುತ್ತಾರೆ. ಸತ್ಯ ಸಂಗತಿಗಳನ್ನು ಅರಿಯುವದು ಯಾರಿಗೆ ಬೇಕಾಗಿದೆ?

ಆದಿವಾಸಿಗಳ ಆಧುನೀಕರಣಕ್ಕಾಗಿ, ಅಸಂಖ್ಯಾತ ಹಣ ವೆಚ್ಚ ಮಾಡಿದರೂ ಅದರಿಂದ ಉಂಟಾದ ಲಾಭ-ಹಾನಿಗಳ ಲೆಕ್ಕಾಚಾರ ಎಲ್ಲಿಯೂ ಸಿಗುತ್ತಿಲ್ಲ. ಅವರು ಒಂದೆಡೆ ಸ್ಥಾಯಿಯಾಗಿ ವಾಸಮಾಡಿ ಕೃಷಿ, ದನಕರು ಸಂಗೋಪನ ಮಾಡಬೇಕೆಂಬ ಸದುದ್ದೇಶದಿಂದ ಸರಕಾರ, ಕಾಡನ್ನು ಸವರಿ ಅವರು ಕೈಗೊಳ್ಳುತ್ತಿದ್ದ ಪೆಂಡಾ (ಕುಮರಿ) ಕೃಷಿಯನ್ನು ಪ್ರತಿಬಂಧಿಸಿತು. ಅದರಂತೆ ಕಾಡನ್ನು ಸಂರಕ್ಷಿಸುವ ಉದ್ದೇಶದಿಂದ ಕಾದಿಟ್ಟ ಮತ್ತು ಸಂರಕ್ಷಿಸಿದ ಕಾಡಿನಲ್ಲಿ ಆದಿವಾಸಿಗಳು ಕಾಲಿಡಕೂಡದೆಂದು ಕಟ್ಟಪ್ಪಣೆ ಹೊರಡಿಸಿತು. ಇದರಿಂದ ಕಂಗಾಲಾದ ಕಾಡಿನ ಮಕ್ಕಳು ಕಂಠೀಬಾಬಾನ ಮೊರೆಹೊಕ್ಕರು. ಆತನು ''ಬಸ್ತರದ ಮರಮಟ್ಟು ಅಲ್ಲಿಯ ನಿವಾಸಿಗಳದ್ದು'' ಎಂದು ಮುಕ್ತಕಂಠದಿಂದ ಘೋಷಿಸಿದ್ದರಿಂದ ಸರಕಾರ, ಸಾಹುಕಾರರಿಗೆ ಪಾಠ ಕಲಿಸಲು ಆದಿವಾಸಿಗಳು ಮುಂದಾದರು. 1982ರಲ್ಲಿ ಮೂರು ನೂರು ಜನ ಬಿಲ್ಲು-ಬಾಣ ಹಿಡಿದು ಮಂದಪಾಲ ಅರಣ್ಯದಿಂದ ದಿಂಡುಗಳನ್ನು ಸಾಗಿಸುತ್ತಿದ್ದ ಲಾರಿಗಳಿಗೆ ದಾರಿ ಅಡ್ಡಗಟ್ಟಿ ನಾಟುಗಳನ್ನು ಕೆಳಗಿಳಿಸಲು ಒತ್ತಾಯಿಸಿದಾಗ ಪೊಲೀಸ್ ಪಡೆಯವರು ಗುಂಡು ಹಾರಿಸಿ ಹಲವರನ್ನು ಬಂಧಿಸಿದರು. ಮೂರು ದಿನಗಳ ತರುವಾಯ 50 ಸಶಸ್ತ್ರ ಆದಿವಾಸಿಗಳು ಪೊಲೀಸ್ ಠಾಣೆಯನ್ನು ಸುತ್ತುವರಿದು ಬಂಧಿತರನ್ನು ಬಿಡುಗಡೆ ಮಾಡಲು ಆಗ್ರಹಪಡಿಸಿದರು. ಇಂಥ ಸಣ್ಣಪುಟ್ಟ ಘಟನೆಗಳೇ ಸರಕಾರದ ಉದ್ದೇಶದ ಬಗ್ಗೆ ಅಪನಂಬಿಕೆ ಮೂಡುವಂತೆ ಮಾಡಿದವು.

ತಾನು ದೀನ ದಲಿತರ ಬಂಧು ಎಂದು ಸಿದ್ಧ ಮಾಡಲು ಸರಕಾರ, ಹೊಸ ಹೊಸ ಕಾನೂನುಗಳನ್ನು ಜಾರಿಗೆ ತರಲು ಪ್ರಾರಂಭಿಸಿತು. ''ಆದಿವಾಸಿಗಳ ಪರಿಸರದಲ್ಲಿರುವ ಅರಣ್ಯ ಸಂಪತ್ತಿಗೆ ಅವರೇ ಮಾಲೀಕರು. ಅಂತೆಯೇ ದಿಂಡುಗಳನ್ನು ಪಡೆಯಲಿಚ್ಛಿಸುವವರು ಅವರ ಅನುಮತಿ ಪಡೆಯಬೇಕಲ್ಲದೇ ಅವುಗಳ ಮೌಲ್ಯವನ್ನು ಅವರಿಗೇ ಸಂದಾಯ ಮಾಡಬೇಕು'' ಎಂಬ ಕಾನೂನು ಜಾರಿಗೆ ಬರುತ್ತಲೇ ಕೊರಡುಗಳ ಕಂಟ್ರ್ಯಾಕ್ಟರರು ಆದಿವಾಸಿಗಳ ದರ್ಶನಕ್ಕೆ ಧಾವಿಸಲಾರಂಭಿಸಿದರು. ಜೀವನದುದ್ದಕ್ಕೂ ಒಂದೆರಡು ರೂಪಾಯಿಗಳಿಗಿಂತ ಹೆಚ್ಚಿನ ಹಣದ ವ್ಯವಹಾರವನ್ನೇ ಮಾಡದವರಿಗೆ ದಿಂಡಿನ ಬೆಲೆಯಾಗಲೀ, ವ್ಯಾಪಾರವಾಗಲೀ ಹೇಗೆ ಅರಿವಾಗಬೇಕು? ಒಬ್ಬನು ಐದು ರೂಪಾಯಿಗೆ ಒಂದು ದಿಂಡನ್ನು ಮಾರಿ ಖುಷಿಪಟ್ಟರೆ, ಇನ್ನೊಬ್ಬನು ಹತ್ತು ರೂಪಾಯಿಗೆ ಮಾರಿದ್ದರಿಂದ ತಾನು ಜಾಣನೆಂದುಕೊಂಡ. ಇದು ಶುದ್ಧ ಮೋಸವೆಂದು ಮನಗಂಡಾಗ ಸರಕಾರ ಬೇರೊಂದು ಕಾನೂನನ್ನು ಜಾರಿಗೆ ತಂದಿತು. ''ಗುತ್ತಿಗೆದಾರರು ಕೊಳ್ಳಲಿರುವ ದಿಂಡಿನ ಬೆಲೆಯನ್ನು ಜಿಲ್ಲಾಧಿಕಾರಿಗಳು ನಿರ್ಧರಿಸುವರು. ಮತ್ತು ಅದರ ಬೆಲೆಯನ್ನು ಅವರ ಸಮ್ಮುಖದಲ್ಲಿಯೇ ಆದಿವಾಸಿಗೆ ಸಂದಾಯ ಮಾಡತಕ್ಕದ್ದು'' ಎಂದು ನಿರ್ಧರಿಸಲಾಯಿತು. ಬಡ ಪಾಹುಡುವಿನ ತೇಗಿನ ಮರ ಒಂದಕ್ಕೆ ಹನ್ನೆರಡು ಸಹಸ್ರ ರೂಪಾಯಿಗಳೆಂದು ನಿರ್ಧರಿಸಿ ಕಲೆಕ್ಟರರೇ ಅಷ್ಟು ಹಣವನ್ನು ಅವನ ಕೈಗಿತ್ತರು. ಜೊತೆಗೆ

ಬಂದ ಊರ ಪ್ರಧಾರಿ, ಸುರಕ್ಷಿತತೆಗೆಂದು ತಾನೇ ಹಣ ಪಡೆದು ಹಳ್ಳಿಗೆ ಹೋದಾಕ್ಷಣ ತಲುಪಿಸುವೆನೆಂದ. ಮರುದಿನ ದಾರಿಯಲ್ಲಿ ಪಾಹುಡುಪಿಗೆ ಯಥೇಚ್ಛ ಸುರಾಪಾನ ಮಾಡಿಸಿ ತನ್ನವರಿಂದ ಹೊಡೆಯಿಸಿ, ಬಡಿಸಿ ಹಣ ದೋಚಿದ. ಹನ್ನೆರಡು ಸಾವಿರ ರೂಪಾಯಿಗಳಲ್ಲಿ ಆ ಬಡಪಾಯಿಗೆ ಲಭಿಸಿದ್ದು ಉದರಕ್ಕೆ ಸೇರಿದ ಹನ್ನೆರಡು ರೂಪಾಯಿಯ ಕಳ್ಳ ಸೆರೆ ಮಾತ್ರ !

ಈಗ ಸರಕಾರ ಆದಿವಾಸಿಗಳ ವಾರ್ಷಿಕ ತಲಾ ಉತ್ಪನ್ನ ದೇಶದಲ್ಲಿಯೇ ಅತ್ಯಂತ ಕಡಿಮೆ ಎಂದು ಅದನ್ನು ಹೆಚ್ಚಿಸಲು ಸಕಲ ಪ್ರಯತ್ನಗಳನ್ನು ಪ್ರಾರಂಭಿಸಿತು. ದಲ್ಲಾಳಿಗಳು ಅತಿ ಅಗ್ಗದ ಬೆಲೆಯಲ್ಲಿ ಹುಣಿಸೆಹಣ್ಣನ್ನು ಕೊಂಡು ಆಂಧ್ರಪ್ರದೇಶ, ತಮಿಳುನಾಡುಗಳಿಗೆ ಕಳಿಸಲಾರಂಭಿಸಿದರು. ಬೀಡಿ ಕಟ್ಟಲು ಬಳಸುವ ಟೆಂಡು ಎಲೆಗಳ ವ್ಯಾಪಾರವನ್ನು ಸರಕಾರ ತನ್ನ ಕೈಯಲ್ಲಿ ತೆಗೆದುಕೊಂಡು ಎಲೆಗಳನ್ನು ಸಂಗ್ರಹಿಸಿದ್ದಕ್ಕೆ ಆದಿವಾಸಿಗಳ ಕೈಯಲ್ಲಿ ನಾಲ್ಕು ಕಾಸು ಹಾಕಲಾರಂಭಿಸಿತು. ಸಾಲ್, ಮಹುವಾ ಬೀಜಗಳನ್ನು ಕೊಂಡು ಹಿಂದುಸ್ಥಾನ್ ಲಿವರ್ ಕಂಪನಿ, ಚಾಕೊಲೇಟ್ ಉತ್ಪಾದನೆಯಲ್ಲಿ ಬಳಸಿ ಲಾಭ ಪಡೆಯಲಾರಂಭಿಸಿತು. ಬೇವಿನ ಹಣ್ಣು, ಸೀಗೆಕಾಯಿಗಳು ಸಾಬೂನ ತಯಾರಕರನ್ನು ಸಿರಿವಂತರಾಗಿಸಲು ಹೊರರಾಜ್ಯಕ್ಕೆ ಹೋಗಲಾರಂಭಿಸಿದವು. ಪ್ರಾಣಿ ಚರ್ಮ, ಕೋಡುಗಳು, ಕೋರೆ ಹಲ್ಲುಗಳನ್ನು ಆದಿವಾಸಿಗಳು ಮುಟ್ಟಲೇ ಕೂಡದು ! ಎಂದು ಸರಕಾರದ ಇನ್ನೊಂದು ಆಜ್ಞೆ. ಅವರು ಯಾವದೇ ತರದ ಸೆರೆಯನ್ನು ತಯಾರಿಸಕೂಡದೆಂದು ಅಬಕಾರಿ ಖಾತೆ ನಿಷೇಧಿಸಿತು. ಇದರಿಂದಾಗಿ ಹಿಂದೊಮ್ಮೆ ಯಾವ ಹಣ ಖರ್ಚು ಮಾಡದೇ ಸೆರೆಯನ್ನು ಮನೆಯಲ್ಲಿ ತಯಾರಿಸಿ ನೆಮ್ಮದಿಯ ಜೀವನ ನಡೆಸುತ್ತಿದ್ದವರಿಗೆ, ಸಿಗುವ ನಾಲ್ಕು ಕಾಸು ಸೆರೆಗೆ ಸುರಿಯುವಂತಾಗಿ, ಸಾಲ ಮಾಡುವಂತಾಯಿತು. ಇದರಿಂದ ಒಂದಿಲ್ಲೊಂದು ಕಾರಣಕ್ಕಾಗಿಯಾದರೂ ಸಾಲ ಪಡೆಯುವ ಪಟ್ಟಣದವರ ಸಮಸಮ ಈ ಆದಿವಾಸಿಗಳು ಬಂದಾರು ! ಎಂಬುದೇ ಸರಕಾರದ ಲೆಕ್ಕಾಚಾರ ಇರಬಹುದೇ ?

ನಿಸರ್ಗದ ಪ್ರಕೋಪವನ್ನು ಒಂದಿಲ್ಲೊಂದು ಬಗೆಯಲ್ಲಿ ಎದುರಿಸಿಯೇ ಆದಿವಾಸಿಗಳೂ ಬದುಕಬೇಕಾಗಿದ್ದರಿಂದ ಅವರು ಸಾಂಘಿಕವಾಗಿಯೇ ಬಾಳಿ ಬದುಕಬೇಕಾಗುತ್ತದೆ. ಮನೆ ಕಟ್ಟುವದಿರಲಿ, ಪೆಂಡಾ ಕೃಷಿ ಮಾಡುವದಿರಲಿ, ಹಬ್ಬ-ಹುಣ್ಣಿಮೆಗಳನ್ನು ಆಚರಿಸುವದಿರಲಿ ಅವರು ಒಬ್ಬರಿಗೊಬ್ಬರು ನೆರವಾದಾಗಲೇ ಅದು ಸಾಧ್ಯವಾಗುವದು. ಕಾಳು-ಕಡಿಗಳ ಕೊರೆಯಾದರೆ, ಅತಿಥಿಗಳು ಬಂದಾಗ ಹೆಂಡದ ದಾಸ್ತಾನು ಖಾಲಿಯಾದರೆ ಇದ್ದವರಿಂದ ಮುಲಾಜಿಲ್ಲದೇ ಕೈಗಡ ತಂದು ನಂತರ ಹಿಂದಿರುಗಿಸುವರು. ಇದಕ್ಕಾಗಿ ಯಾವ ಬಗೆಯ ಬಡ್ಡಿಯನ್ನೂ ಕೊಡಬೇಕಾಗಿಲ್ಲವಾದ್ದರಿಂದ ಇದು ಕೇವಲ ನೆರವು ಎಂದು ಪರಿಗಣಿಸ ಲಾಗುವದು. ಆದರೆ 'ಸುಸಂಸ್ಕೃತ' ವ್ಯಾಪಾರಿಗಳು ಕೊಟ್ಟ ಸಾಲದ ಮೇಲೆ ಬಡ್ಡಿ , ಚಕ್ರಬಡ್ಡಿ ಗಳನ್ನು ಹೇರಿ ಹಿರಿದಾದ ಮೊತ್ತ ತೋರಿಸಿದಾಗ ಗಿರಿವಾಸಿ ಹೌಹಾರುತ್ತಾನೆ. ತನ್ನ ಸರ್ವಸ್ವ ಮಾರಿದರೂ ಈ ಸಾಲವನ್ನು ಸಾಯುವ ತನಕ ಸಲ್ಲಿಸುವುದು ಅಸಾಧ್ಯವೆಂದು ಕಂಡು ಕೊಳ್ಳುತ್ತಾನೆ. ಅಂತೆಯೇ ಪೆಂಡಾಕೃಷಿ, ಬೇಟೆಗಳನ್ನು ಬದಿಗೊತ್ತಿ, ದಿನಗೂಲಿ ತರುವ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಮಣಿಗಳ ಸರತೊಟ್ಟು ರಂಗುರಂಗಿನ ಹೂ ಮುಡಿದು ರಸಿಕತೆಯಿಂದ ಕಾಡಿನ ಮಡಿಲಲ್ಲಿ ವಿಹರಿಸುವ ಆದಿವಾಸಿ ಭಿಲಾಡೆಲಾದ ಗಣಿಗಳಲ್ಲಿ, ರಸ್ತೆಯ ನಿರ್ಮಾಣದಲ್ಲಿ ಮಣ್ಣಿನ ಧೂಳಿ ಕೆಲಸ ಮಾಡುವ ಕೂಲಿಯಾಗಿಬಿಡುತ್ತಾನೆ. ಇವನ ಜೀವನದ ರೀತಿ ನೀತಿ ಸಂಸ್ಕಾರಗಳನ್ನು ಅರಿಯದ ನಗರವಾಸಿ ಕಾರ್ಮಿಕರು ತಮ್ಮ ಯಾವತ್ತೂ ದುಶ್ಚಟಗಳನ್ನು ಈ ಮುಗ್ಧನಿಗೆ ಕಲಿಸುತ್ತಾರೆ. ಮೈದಣಿವು ಆರಿಸಿಕೊಳ್ಳುವದಕ್ಕಾಗಿ ವಿಪರೀತ ಕುಡಿತ, ಜೂಜಾಡುವದು, ವೇಶ್ಯಾಗಮನ ಮುಂತಾದವುಗಳಿಂದ ಅವನ ಸಾಲದ ಹೊರೆ ಏರುತ್ತಾ

ಹೋಗುತ್ತದೆ. ಇವೆಲ್ಲ ಚಟಗಳು ಅವನ ಸಮಾಜದಲ್ಲಿ ಇಲ್ಲವೆ ಇಲ್ಲವಾದ್ದರಿಂದ ಇವುಗಳು ಆಧುನಿಕತೆಯ ಸಂಕೇತವೆಂದು ಅವನು ಪರಿಗಣಿಸಿದರೆ ಆಶ್ಚರ್ಯವಿಲ್ಲ.

ಸಾಲದ ಹೊರೆ ಕಡಿಮೆ ಮಾಡುವದಕ್ಕಾಗಿ, ಹೆಂಗಳೆಯರೂ ಕೂಲಿ ಕೆಲಸ ಮಾಡುವದು ಅನಿವಾರ್ಯವಾಯಿತು. ರಸ್ತೆಯ ದುರಸ್ತಿ, ಕಾಜಸ್ನು ಸವರುವುದು, ಸಾಹೇಬರ ಮನೆಗಳಲ್ಲಿ ಮನೆಗೆಲಸ ಮುಂತಾದವಕ್ಕೆ ಸೇರಿಕೊಳ್ಳಲಾರಂಭಿಸಿದರು. ನಡುವಿಗೊಂದು ಕಿರಿಸೀರೆ ಸುತ್ತಿಕೊಂಡು, ಕೊರಳ ತುಂಬ ಮಣಿಗಳ ಸರ ತೊಟ್ಟು ಕಾಡಿನಲ್ಲಿ ಓಡಾಡುತ್ತಿದ್ದಾಗ ಪಶು-ಪಕ್ಷಿಗಳು ಅವಳ ಸುಂದರ ಶರೀರದತ್ತ ಆಕರ್ಷಿತರಾಗಲೇ ಇಲ್ಲ. ಆದರೆ ನಗರಗಳಲ್ಲಿ ಪಳಗಿದ ಸಹಕಾರ್ಮಿಕರು ಕಟೆದಂತಿದ್ದ ಅವಳ ಅರೆ ನಗ್ನ ಶರೀರವನ್ನು ಅಲಕ್ಷಿಸಲು ಸಾಧ್ಯವೇ ? ಕ್ರಮೇಣ ಸಾಹೇಬಜನಾಂಗ, ಈ ಅಬಲೆಯರನ್ನು ಉಪಪತ್ನಿಯಾಗಿಸಿದರು. ಅವರ ಹೆಂಡಂದಿರು ತ್ಯಜಿಸಿದ ಸೀರೆ-ಕುಪ್ಪಸಗಳಲ್ಲಿ ಅವರು 'ಬೆಚ್ಚು'ಗಳಂತೆ ತೋರಲಾರಂಭಿಸಿದರು. ಇನ್ನಿತರ ಕಡೆ ಕೆಲಸ ಮಾಡುವವರು ಸಂತೆಗಳಲ್ಲಿ ಮಾರ ಸಿಗುತ್ತಿದ್ದ ಹಳೆ ಬಟ್ಟೆಗಳನ್ನು ಧರಿಸಲಾರಂಭಿಸಿದರು. ಆಧುನಿಕರ ಸಂಪರ್ಕದಿಂದ ತಮ್ಮ ಶರೀರ ಸಂಪತ್ತಿಗೆ ಅವರೇ ಮುಜುಗರ ಪಡುವಂತೆ ಆಯಿತು. ಪ್ರೇಮಿಗಳು ಪಾರಿವಾಳಗಳಂತೆ ಸದಾಕಾಲ ಅಂಟಿಕೊಂಡೇ ಇರುವದನ್ನು ಬಿಟ್ಟು ಎಲ್ಲವನ್ನೂ ಗುಟ್ಟುಗುಟ್ಟಾಗಿ ಮಾಡಲಾರಂಭಿಸಿದರು. ಈ ಹುಡುಗಿಯರು ಎಂದಾದರೊಮ್ಮೆ ಸ್ವಗ್ರಾಮಕ್ಕೆ ಹೋಗುವಾಗ ತಾಯಿಯ ಅರೆನಗ್ನತೆ ಮುಚ್ಚಲು ಬ್ರಾ, ಕುಪ್ಪಸ ಒಯ್ದರೆ ಆಶ್ಚರ್ಯವಿಲ್ಲ! ಈ ಹೆಂಗಳೆಯರು ವಿವಾಹದ ಹೊರಗೆ ತಾಯಾಗಲಾರಂಭಿಸಿದಾಗ ಆದಿವಾಸಿ ಸಮಾಜಕ್ಕೆ ಸಿಡಿಲು ಬಡಿದಂತೆ ಆಯಿತು. ಆದರೆ ಅವರ ಮುಖಂಡನ ನ್ಯಾಯದಾನ ಪದ್ಧತಿ ಆಧುನಿಕರ ಸಮಾಜದಲ್ಲಿ ನಡೆಯದ್ದರಿಂದ ಕೈಗಳನ್ನು ಹಿಸುಕಿಕೊಳ್ಳುವದಲ್ಲದೇ ಬೇರೇನೂ ಮಾಡಲಾಗಲಿಲ್ಲ. ಬಸ್ತರದ ಕಲೆಕ್ಟರರು ಈ ನಿರ್ಭಾಗಿಗಳನ್ನು ಅವರು ಹೆಸರಿಸಿದವರಿಗೇ ವಿವಾಹವಾಗಲು ಒತ್ತಾಯಿಸಿದಾಗ ಅಂಥ ಮಹಾನುಭಾವರು ತಮ್ಮ ವರ್ಚಸ್ಸು ಬಳಸಿ ವರ್ಗಾವಣೆ ಮಾಡಿಸಿಕೊಂಡು ಕಾಲಿಗೆ ಬುದ್ಧಿ ಹೇಳಿದರು. ಈ ಅನಾಥೆಯರು ದಿಕ್ಕು ತೋರದೇ ಬೀದಿಪಾಲಾದರು. ಆದಿವಾಸಿ ಸಮಾಜ, ಅವರನ್ನು ಬರಮಾಡಿಕೊಳ್ಳದಿದ್ದರಿಂದ ಉಪಜೀವನಕ್ಕೆ ಮೈಮಾರಿಕೊಳ್ಳಲೇಬೇಕಾಯಿತು. ಆಧುನಿಕರ ಆಶೀರ್ವಾದದಿಂದಾಗಿ, ಕಾಡಿನಲ್ಲಿ ಹುಲ್ಲೆಯಂತೆ ಸ್ವಚ್ಛಂದವಾಗಿ ಜಿಗಿದಾಡಿ ಇದ್ದವಳು ನಾಡಿಗೆ ಬಂದು ದುಶ್ಚಟಗಳಿಗೆ ಬಲಿಯಾಗಿ, ನಾಗರಿಕತೆಯ ಸೋಂಕುರೋಗಗಳನ್ನು ಬಡಿಸಿಕೊಳ್ಳುವಂತಾದದ್ದು ಅತ್ಯಂತ ಶೋಚನೀಯ.

ಪಶ್ಚಿಮ ಪಾಕಿಸ್ತಾನ (ಈಗಿನ ಬಾಂಗ್ಲಾದೇಶ)ದಿಂದ ಬಂದ ನಿರಾಶ್ರಿತ ಬಂಗಾಲಿಗಳು ಬೇರಾರಿಗೂ ಬೇಡವಾದ್ದರಿಂದ ಬಸ್ತರ ಜಿಲ್ಲೆಯಲ್ಲಿ ಅವರಿಗೆ ಆಶ್ರಯ ನೀಡಲಾಯಿತು. ದಂಡಕಾರಣ್ಯದಲ್ಲಿ ಅವರನ್ನು ಸ್ಥಾಪಿಸಿ ಕೃಷಿ ಮಾಡುವ ಸಲುವಾಗಿ ಭೂಮಿ, ಧನಕರು, ಬೀಜಗಳಲ್ಲದೇ ಹಣಕಾಸೂ ಕೊಡಲಾಯಿತು. ಆಗಂತುಕರು ಆದಿವಾಸಿಗಳ ಬಗ್ಗೆ ಅಜ್ಞಾನಿಗಳಾದ್ದರಿಂದ ಅವರನ್ನು ತೀರ ಕೀಳಾಗಿ ನಡೆಯಿಸಿಕೊಳ್ಳಲಾರಂಭಿಸಿದರು. ಇದರಿಂದಾಗಿ ಎರಡೂ ಬಣದವರಲ್ಲಿ ಮೇಲಿಂದ ಮೇಲೆ ಘರ್ಷಣೆ ಪ್ರಾರಂಭವಾಯಿತು. ಸಾಲದ್ದಕ್ಕೆ ಮತ್ಸ್ಯಪ್ರಿಯ ಬಂಗಾಲಿಗಳು ಆದಿವಾಸಿಗಳ ತಾಣದಲ್ಲಿದ್ದ ಹೊಂಡ, ನದಿಗಳಲ್ಲಿ ಮೀನು ಹಿಡಿಯಲಾರಂಭಿಸಿದರು. ಬಿತ್ತಲು ಕೊಟ್ಟ ಬೀಜಗಳನ್ನು ತಿಂದುಂಡು ತೇಗಿದರು. ಊಳಲು ಕೊಡಮಾಡಿದ ಎತ್ತುಗಳನ್ನು ಮಾರಿದರು. 'ನಾಗರಿಕ' ಬಂಗಾಲಿಗಳ ಒಡನಾಟದಲ್ಲಿ ಆದಿವಾಸಿಗಳ ಆಧುನೀಕರಣ ಮಾಡುವದು ಸರಕಾರದ ಯೋಜನೆಯಾಗಿತ್ತು. ಆದರೆ ಆಗಂತುಕರ ವರ್ತನೆಯಿಂದಾಗಿ ಅವರು ಮೂಗು ಮುರಿಯುವಂತೆ ಆಯಿತು. ಪುಕ್ಕಟೆ ಕೊಡಮಾಡಿದ ಹೊಲ

ಮಾರುಗಳನ್ನು ಆದಿವಾಸಿಗಳಲ್ಲದವರಿಗೆ ಮಾರಿ ನಿರಾಶ್ರಿತರು ಮರಳಿಹೋದರು. ಆದಿವಾಸಿ ಬಡಪಾಯಿಗಳು, ತಮ್ಮ ಭೂಮಿಯನ್ನು ಶಾಶ್ವತವಾಗಿ ಕಳೆದುಕೊಂಡದ್ದು ಮಾತ್ರ ಬಂದಿತು.

ಈಗ ಸರಕಾರ ಆದಿವಾಸಿಗಳ ಅಭ್ಯುದಯಕ್ಕೆ ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸಿ ಅವರ ಆಧುನೀಕರಣಕ್ಕೆ ಅಧಿಕೃತ ರೂಪ ನೀಡಿತು. ಅಧಿಕಾರಿಗಳು ನೇಮಕಗೊಂಡರು. ಆಫೀಸುಗಳು ತಲೆ ಎತ್ತಿ ನಿಂತವು. ಗುಮಾಸ್ತರು, ಸೇವಕರು ಸಂಬಳ ಪಡೆಯಲಾರಂಭಿಸಿದರು. ಜೀಪ್, ಕಾರುಗಳು ಕಾಡಿನ ರಸ್ತೆಗಳಲ್ಲಿ ಏಕಪ್ರಕಾರವಾಗಿ ಓಡಲಾರಂಭಿಸಿದವು. ಆದಿವಾಸಿಗಳ ಉದ್ಧಾರ ಕೇಂದ್ರಗಳು ತಲೆಯೆತ್ತಿ ಇನ್ನಷ್ಟು ಮತ್ತಿಷ್ಟು ಸರಕಾರಿ ಸವಲತ್ತುಗಳನ್ನು ದೋಚಿಕೊಳ್ಳಲು ಆರಂಭಿಸಿದವು. ಶಿಕ್ಷಣ, ಆರೋಗ್ಯ, ಸಂಪರ್ಕ, ಸಮತೋಲ ಆಹಾರಗಳ ನೆಪದಲ್ಲಿ ದುಂದುಗಾರಿಕೆ ಏರುತ್ತ ಹೋಯಿತು. ನಗರವಾಸಿಗಳ ಈ ದರ್ಪ, ದರಬಾರುಗಳನ್ನು ನೋಡಿ ಆದಿವಾಸಿಗಳು ಅವರ ಹತ್ತಿರ ಸುಳಿಯುವ ಗೋಜಿಗೆ ಹೋಗಲೇ ಇಲ್ಲ. ಆದರೂ ಅವಕಾಶ ಸಿಕ್ಕಾಗಲೆಲ್ಲಾ ಅವರ ಕಾಳುಕಡಿ, ಕುಕ್ಕುಟ, ಕಟ್ಟಿಗೆ, ಕಳ್ಳುಗಳನ್ನು ಅಧಿಕಾರಿಗಳು ದೋಚಲಾರಂಭಿಸಿದರು. ಕಳ್ಳರೇ ಕೋಶಾಗಾರರಾದಾಗ ಆದಿವಾಸಿಗಳ ಪ್ರಗತಿ ಆಗುವದಾದರೂ ಹೇಗೆ ? ಇಷ್ಟಾದರೂ ತಮ್ಮ ಸಾಧನೆಗಳ ಬಗ್ಗೆ ವಿವರವಾದ ವರದಿಗಳನ್ನು ರಾಜ್ಯದ ರಾಜಧಾನಿಯಾದ ಭೋಪಾಲಕ್ಕೆ ಪ್ರತಿ ತಿಂಗಳು ಕಳಿಸದೇ ಇರುತ್ತಿರಲಿಲ್ಲ. ಅವರು ಅದನ್ನು ದಿಲ್ಲಿಗೆ ಕಳುಹಿಸಿ, ಆದಿವಾಸಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಧನ ಸಹಾಯಕ್ಕೆ ಕೈ ಮುಂದೆ ಮಾಡುತ್ತಲೇ ಇದ್ದರು.

ಆದಿವಾಸಿಗಳಲ್ಲಿ ಹಲ್ಬಿಯಂತಹ ಮುಂದುವರಿದ ಪಂಗಡದವರಿಗೆ ತಮ್ಮ ಮತಾಧಿಕಾರದ ಮಹತ್ವ ತಿಳಿದಾಗ, ಅದರ ಪೂರ್ಣ ಉಪಯೋಗ ಮಾಡಿಕೊಳ್ಳಲಾರಂಭಿಸಿದರು. ಅವರ ಅಭ್ಯರ್ಥಿಯೇ ವಿಧಾನಸಭೆ, ಲೋಕಸಭೆಗಳಿಗೆ ಆರಿಸಿ ಬರುವದು ಸುಲಭವಾಯಿತು. ಇದರಿಂದಾಗಿ ಅತ್ಯಂತ ಬಡವರಿಗೆ ಕೊಡಮಾಡುವ ಸಕಲ ಸವಲತ್ತುಗಳನ್ನು ಇವರು ತಮ್ಮದನ್ನಾಗಿ ಮಾಡಿಕೊಂಡರು. ಶಾಲೆ ಕಾಲೇಜುಗಳಲ್ಲಿ ಹೆಸರು ನೋಂದಾಯಿಸಿ ಹಾಸ್ಟೆಲಿನ ವಸತಿ- ಊಟಗಳನ್ನು ಪಡೆದರು. ಸರಕಾರಿ ಜಮೀನುಗಳನ್ನು ತಮ್ಮದನ್ನಾಗಿ ಮಾಡಿಕೊಂಡರು. ಕಾಲೇಜು ಪ್ರವೇಶವೂ ಸುಲಭವಾಯಿತು. ಶೇಕಡಾ ಇಪ್ಪತ್ನಾಲ್ಕು ಗುಣ ಪಡೆದವರಿಗೆ ತಾಂತ್ರಿಕ ಕಾಲೇಜುಗಳಲ್ಲಿ ಸ್ಥಳ ಸಿಗುವಂತೆ ಮಾಡಿದ್ದರಿಂದ ಇಂಜಿನಿಯರ್, ಡಾಕ್ಟರರೂ ಆದರು. ಅಂತೆಯೇ ಸರಕಾರಿ ನೌಕರಿಗಳು ಇವರ ಜೇಬಿಗೇ ಸೇರಿದವು. ರೋಸ್ಟರ್ ಸೂತ್ರದ ಪ್ರಕಾರ ಮುಂಬಡ್ತಿಯೂ ಬಹುಬೇಗ ಅವರದಾಯಿತು. ಈಗ ಅಧಿಕಾರ, ಆಸ್ತಿಗಳು ದಕ್ಕಿ ಬಸ್ತರದ ಹೊಸ ರಾಜವಂಶದವರಂತೆ ಮೆರೆದಾಡುತ್ತಿದ್ದಾರೆ. ಕೆಲವು ಯುವ ಮಾರಿಯರು ಇವರ ಅನುಯಾಯಿಗಳಾಗಿದ್ದಾರೆ. ಗೀದಮ್ ಊರಿನ ಆಸು-ಪಾಸಿನಲ್ಲಿ ಇವರು ಹೇಳಿದ್ದೇ ವೇದವಾಕ್ಯ. ವರ್ಷಕ್ಕೊಮ್ಮೆ ಈ ತಂಡದವರೆಲ್ಲ ಸೇರಿ ಇಂದ್ರಾವತಿ ನದಿಯನ್ನು ದಾಟಿ ಉತ್ತರದ ದಂಡೆಯಲ್ಲಿರುವ ದಟ್ಟಕಾಡಿನಲ್ಲಿ ಮನಸ್ವೀ ಬೇಟೆಯಾಡಿದರೆ, ಅವರನ್ನು ತಡೆಗಟ್ಟುವ ಧೈರ್ಯ ಅರಣ್ಯ ಇಲಾಖೆಯವರಿಗೂ ಇಲ್ಲ.

ಸರಕಾರ ಮತ್ತು ಸಾಹುಕಾರರು ಆದಿವಾಸಿಗಳ ಪ್ರತಿನಿತ್ಯದ ಆಗುಹೋಗುಗಳಲ್ಲಿ ಆಸಕ್ತಿ ವಹಿಸುವ ಮುನ್ನ, ಅವರ ಜೀವನ ಸರ್ವರೀತಿಯಲ್ಲೂ ಸ್ವಯಂಪೂರ್ಣವಾಗಿತ್ತು.ಆದಿವಾಸಿ ಮನೆ ಕಟ್ಟುತ್ತಿದ್ದ, ಕೃಷಿ ಮಾಡುತ್ತಿದ್ದ, ಬೇಟೆಯಾಡುತ್ತಿದ್ದ, ಮೀನು ಹಿಡಿಯುತ್ತಿದ್ದ, ಮರ ಏರುತ್ತಿದ್ದ, ಬಾವಿ ಇಳಿಯುತ್ತಿದ್ದ, ಬಡಗಿಯ ಕೆಲಸ ಬಲ್ಲವನಾಗಿದ್ದ, ಕಮ್ಮಾರನಾಗುತ್ತಿದ್ದ, ಹಗ್ಗಕ್ಕೆ ಹುರಿ ಹಾಕುತ್ತಿದ್ದ, ಬುಟ್ಟಿ ಹೆಣೆಯುತ್ತಿದ್ದ, ಸೆರೆ ಇಳಿಸುತ್ತಿದ್ದ, ವೈದ್ಯನಾಗುತ್ತಿದ್ದ, ಕ್ಷೌರಿಕ ನಾಗಿದ್ದ, ಸತ್ಯವಾದಿಯಾಗಿದ್ದ, ನವಿಲಿನಂತೆ ನರ್ತಿಸುತ್ತಿದ್ದ, ಕೋಗಿಲೆಯಂತೆ ಹಾಡುತ್ತಿದ್ದ,

ಅಪೂರ್ವ ಪ್ರೇಮಿಯಾಗಿದ್ದ. ಅವನಿಗೆ, ಮಗ-ಮಗಳಲ್ಲಿ ಭೇದವಿರಲಿಲ್ಲ. ಗರ್ಭನಿರೋಧ ಬೇಕಿರಲಿಲ್ಲ. ಗರ್ಭಪಾತ ಮಾಡಿಸುತ್ತಿರಲಿಲ್ಲ. ಮಿತಸಂತಾನದ ಅವಶ್ಯಕತೆಯಿರಲಿಲ್ಲ. ರಾಜಕಾರಣಿಗಳಿಗೆ ಮಣಿಯಬೇಕೆಂದಿರಲಿಲ್ಲ. ವಿದ್ಯುತ್ತಿಗಾಗಿ ಬಾಯಿ ಬಿಡಲಿಲ್ಲ. ಪೆಟ್ರೋಲ್ ಪದಾರ್ಥಗಳಿಗೆ ಪರದಾಡಲಿಲ್ಲ. ಪೊಲೀಸರ ಅವಶ್ಯಕತೆ ಅವನಿಗಿರಲಿಲ್ಲ. ಮೊನ್ನೆ ಮೊನ್ನೆಯವರೆಗೂ ಇಂಥ ಪ್ರಜೆಗಳು ನಮ್ಮ ದೇಶದಲ್ಲಿ ಇದ್ದರು, ಎಂದರೆ ನಂಬುವುದು ಕಷ್ಟ. ಮಹಾತ್ಮಾ ಗಾಂಧಿಯವರು ಪ್ರತಿಯೊಬ್ಬನು, ಪ್ರತಿ ಹಳ್ಳಿಯು ಸರ್ವತಂತ್ರ ಸ್ವತಂತ್ರವಾಗ ಬೇಕೆಂದು ಕನಸು ಕಟ್ಟಿದ್ದರು. ಆದರೆ ನಾವು, ಅತ್ಯಾಧುನಿಕರೆಂದು ಅನಿಸಿಕೊಂಡವರು ಅನಾದಿ ಕಾಲದಿಂದಲೂ ತಮ್ಮತನವನ್ನು ಸಂರಕ್ಷಿಸಿಕೊಂಡು ಬಂದವರನ್ನು ನಿರ್ಗತಿಕರನ್ನಾಗಿ ಮಾಡಿದ್ದೇವೆ. ಕೃಷಿ, ಆರೋಗ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ಅವರಿಗೆ ಅಲ್ಪಸ್ವಲ್ಪ ಸಹಾಯ ಹಸ್ತ ನೀಡಿದ್ದರೆ, ಅವರು ಗ್ರಾಮರಾಜ್ಯದ ಆದರ್ಶ ನಾಗರಿಕರಾಗಿಬಿಡುತ್ತಿದ್ದರು. ಉತ್ತಮವಾದ ಸಂಪ್ರದಾಯಗಳನ್ನು ಹಾಳುಗೆಡಹುವದೇ ಭಾರತೀಯರ ವೈಶಿಷ್ಟ್ಯವೆಂದು ತೋರುತ್ತದೆ !

# ನವಕರ್ನಾಟಕ ಪ್ರಕಟಣೆಗಳು

## ಕಥಾಸಾಹಿತ್ಯ

### ❖ ಕಾದಂಬರಿ

| ಶೀರ್ಷಿಕೆ | ಲೇಖಕರು | ಬೆಲೆ |
|---|---|---|
| ಯಾದ್ ವಶೇಮ್ (ನೂರು ಸಾವಿರ ಸಾವಿನ ನೆನಪು) | ನೇಮಿಚಂದ್ರ | 175.00 |
| ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ) | ಕೋ. ಚೆನ್ನಬಸಪ್ಪ | 600.00 |
| ಹೆಜ್ಜೆ ಗುರುತು | ವ್ಯಾಸರಾಯ ಬಲ್ಲಾಳ | 175.00 |
| ಹೇಮಂತಗಾನ (5ನೇ ಮುದ್ರಣ) | ವ್ಯಾಸರಾಯ ಬಲ್ಲಾಳ | 140.00 |
| ತಿರುಗಿ ನರಜನ್ಮ | ಮುದ್ದೂರು ಗೋಪಾಲಕೃಷ್ಣನಾಯಕ್ | 70.00 |
| ಬದಿ | ಇಂದಿರಾ ಹೆಗ್ಗಡೆ | 50.00 |
| ವಾರಾಣಸಿ | ಮಲಯಾಳಂ ಮೂಲ : ಎಂ. ಟಿ. ವಾಸುದೇವನ್ ನಾಯರ್ | 75.00 |
| ಕಡಲ ತೀರದ ಒಂದು ಗ್ರಾಮದ ಕಥೆ | ತಮಿಳು ಮೂಲ : ತೋಪ್ಪಿಲ್ ಮುಹಮ್ಮದ್ ಮೀರಾನ್ | 80.00 |
| ಮಯ್ಯಾದಾಸನ ವಾಡೆ | ಹಿಂದಿ ಮೂಲ : ಭೀಷ್ಮ ಸಾಹನಿ | 160.00 |
| ತಮಸ್ (3ನೇ ಮುದ್ರಣ) | ಹಿಂದಿ ಮೂಲ : ಭೀಷ್ಮ ಸಾಹನಿ | 110.00 |
| ವೋಲ್ಗಾ-ಗಂಗಾ (6ನೇ ಮುದ್ರಣ) | ಹಿಂದಿ ಮೂಲ : ರಾಹುಲ ಸಾಂಕೃತ್ಯಾಯನ | 160.00 |
| ಅಗ್ನಿಗರ್ಭ | ಬಂಗಾಳಿ ಮೂಲ : ಮಹಾಶ್ವೇತಾದೇವಿ | 60.00 |
| ಪುನರ್ಜನ್ಮ (ಸಂಕ್ಷಿಪ್ತ, 2ನೇ ಮುದ್ರಣ) | ರಷ್ಯನ್ ಮೂಲ : ಲೆವ್ ಟಾಲ್‌ಸ್ಟಾಯ್ | 55.00 |
| ತಾಯಿ (4ನೇ ಮುದ್ರಣ) | ರಷ್ಯನ್ ಮೂಲ : ಮಕ್ಸಿಂ ಗೋರ್ಕಿ | 110.00 |

### ❖ ಕಥಾ ಸಂಕಲನ

| ಶೀರ್ಷಿಕೆ | ಲೇಖಕರು | ಬೆಲೆ |
|---|---|---|
| ಮೇಘನಾ ಪೇಠೆ ಕಥೆಗಳು | ಮೇಘನಾ ಪೇಠೆ | 90.00 |
| ನನ್ನ ಮಿತ್ರ ಸೋರಣ್ಣ | ಜೆ. ಬಿ. ಎಸ್. ಹಾಲ್ಡೇನ್ | 50.00 |
| ಎಲೆ ಮರೆಯ ಹಣ್ಣುಗಳು | ಗೀತಾ ವಿಶ್ವನಾಥ್ | 40.00 |
| ಇವರದ್ದು ಇನ್ನೊಂದು ಕಥೆ | ನಾ. ಡಿಸೋಜ | 35.00 |
| ಕೃಷ್ಣಚಂದರ ಕಥೆಗಳು | (ಅನು : ಪಂಚಾಕ್ಷರಿ ಹಿರೇಮಠ) | 40.00 |
| ಅಮೆರಿಕದ ಕಥೆಗಳು | ಶಾಂತಾರಾಮ ಸೋಮಯಾಜಿ | 55.00 |
| ಅರ್ಥಮಂತ್ರಿ ಮತ್ತು ಹಂದಿಗಳು | ಶಾಂತಾರಾಮ ಸೋಮಯಾಜಿ | 50.00 |
| ಅಲೀಮಾ ಅಕ್ಷರ ಕಲಿತದ್ದು | ಫಕ್ರುದ್ದೀನ್ ಇರುವೈಲ್ | 55.00 |
| ಮೋಡಗಳಲ್ಲಿ ಮೊದಲ ಹೆಜ್ಜೆ | (ಸಂಪಾದನೆ – ಅನುವಾದ : ವೆಂಕಟರಾಜ ಪಾನಸೆ) | 40.00 |

### ❖ ಆತ್ಮಕಥನ, ಜೀವನ ಚಿತ್ರಣ

| ಶೀರ್ಷಿಕೆ | ಲೇಖಕರು | ಬೆಲೆ |
|---|---|---|
| ನೆನಪಿನ ಅಲೆಗಳು | ಜೆ. ಆರ್. ಲಕ್ಷ್ಮಣ ರಾವ್ | 125.00 |
| ಮೇರಿಯ ಕಥೆ (ಕ್ಯಾನ್ಸರ್ ಮತ್ತು ಸಂಸಾರ ಸಂಘರ್ಷದ ಕಥನ) | ಶಾಂತಾರಾಮ ಸೋಮಯಾಜಿ | 75.00 |
| ಗುತ್ತಿನಿಂದ ಸೈನಿಕ ಜಗತ್ತಿಗೆ | ಎಸ್. ಆರ್. ಹೆಗ್ಗಡೆ, ಇಂದಿರಾ ಹೆಗ್ಗಡೆ | 50.00 |
| ಬಹಿಷ್ಕೃತ. ಒಂದು ನೆನಪು | ಡಾ॥ ನರೇಂದ್ರ ಜಾಧವ್ | 150.00 |
| ಅಕ್ರಮ ಸಂತಾನ (2ನೇ ಮುದ್ರಣ) | ಮರಾಠಿ ಮೂಲ : ಶರಣಕುಮಾರ ಲಿಂಬಾಳೆ | 50.00 |
| ಉಚಲ್ಯಾ (4ನೇ ಮುದ್ರಣ) | ಮರಾಠಿ ಮೂಲ : ಲಕ್ಷ್ಮಣ ಗಾಯಕವಾಡ | 50.00 |

### ಪ್ರವಾಸ ಕಥನ, ಅನುಭವ ಚಿತ್ರಣ, ಪ್ರಬಂಧ

| | | |
|---|---|---|
| ಬದುಕು ಬದಲಿಸಬಹುದು (3ನೇ ಮುದ್ರಣ) | ನೇಮಿಚಂದ್ರ | 110.00 |
| ಪೆರುವಿನ ಪವಿತ್ರ ಕಣಿವೆಯಲ್ಲಿ (2ನೇ ಮುದ್ರಣ) | ನೇಮಿಚಂದ್ರ | 120.00 |
| ಅಂಡಮಾನ್ ಕನಸು (2ನೇ ಮುದ್ರಣ) | ಡಾ|| ರಹಮತ್ ತರೀಕೆರೆ | 60.00 |
| ಬಸ್ತರ ಪ್ರವಾಸ (2ನೇ ಮುದ್ರಣ) | ಡಾ|| ಕೃಷ್ಣಾನಂದ ಕಾಮತ | 65.00 |
| ಅಕ್ಷತ (ನಾವು, ನಮ್ಮವರು : ರೀತಿ-ರಿವಾಜುಗಳು) | ಡಾ|| ಕೃಷ್ಣಾನಂದ ಕಾಮತ | 38.00 |
| ಸಫಾರಿ ಎಂಬ ಲಕ್ಸುರಿ | ಡಾ|| ಬಿ. ಎನ್. ಶೈಲಜಾ | 70.00 |
| ಅಜ್ಜನ ಮನೆ ಅಂಗಳದಲ್ಲಿ | ವಿಜಯಾ ಶ್ರೀಧರ್ | 60.00 |
| ಇದು ಅಮೆರಿಕ | ಸಿ. ಆರ್. ಕೃಷ್ಣರಾವ್ | 35.00 |
| ಮುಂಬಯಿ ದಿನಾಂಕ | ವ್ಯಾಸರಾಯ ಬಲ್ಲಾಳ | 125.00 |
| ಮುಂಬೈ ಡೈರಿ | ಉಮಾ ರಾವ್ | 60.00 |
| ಹೃದಯದಿಂದ ಹೃದಯಕ್ಕೆ (3ನೇ ಮುದ್ರಣ) | ಎಸ್. ಆರ್. ಗೌತಮ್ | 40.00 |
| ಕಳವು ಕಲಿಸುವ ದೇವರು | ಡಾ|| ಸ. ಜ. ನಾಗಲೋಟಿಮಠ | 22.00 |
| 'ಚಂಪಾ'ದಕೀಯ (ಲೇಖನಗಳು) | ಪ್ರೊ|| ಚಂದ್ರಶೇಖರ ಪಾಟೀಲ | 45.00 |
| ಕಾರಂತರೊಂದಿಗೆ ಕೆಲವು ವರ್ಷಗಳು | ನಾರಾಯಣ ಮಂಜೇಶ್ವರ | 40.00 |
| ಮುದ್ರಕನ ಸಾಹಿತ್ಯ ನಂಟು | ಶೇಷನಾರಾಯಣ | 75.00 |
| ಉರುಳಿನ ನೆರಳಲ್ಲಿ (2ನೇ ಮುದ್ರಣ) | ಜ್ಯೂಲಿಯಸ್ ಫ್ಯೂಜಿಕ್ (ಅನು : ವಾಸುದೇವ) | 55.00 |

### ಕವನ

| | | |
|---|---|---|
| ನಕ್ಷತ್ರ ನಕ್ಕಾಗ (ಹನಿಗವನಗಳ ಸಂಕಲನ) | ಜಿ. ಆರ್. ಪರಿಮಳಾ ರಾವ್ | 25.00 |
| ಋತುಗಾನ (ಇಂಗ್ಲೆಂಡಿನ ಇಂಚರ ಹೈಕುಗಳು) | ಜಿ. ಆರ್. ಪರಿಮಳಾ ರಾವ್ | 25.00 |
| ಸ್ವರ್ಣ ಸಂಪಿಗೆ (ಜಪಾನಿನ ಮಾದರಿ ಹೈಕುಗಳು) | ಜಿ. ಆರ್. ಪರಿಮಳಾ ರಾವ್ | 20.00 |
| ತೊಟ್ಟಿಕ್ಕುವ ಪದ್ಯಗಳು | ಡಾ|| ಅರ್ಕೆ, ಮಣಿಪಾಲ | 25.00 |
| ಭಾನುವಾರವೆಂದರೆ | ಸುಕನ್ಯಾ ಕಳಸ | 20.00 |
| ಗೋಂದಿಯ ತೆನೆಗಳು | ಸು. ರಂ. ಎಕ್ಕುಂಡಿ | 28.00 |
| ಪೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) | ರಂಜಾನ್ ದರ್ಗಾ | 25.00 |
| ರಸ್ತೆ | ಗಣೇಶ ಪಿ. ನಾಡೋರ | 20.00 |

### ನಾಟಕ

| | | |
|---|---|---|
| ಹಾನೂಶ್ | ಹಿಂದಿ ಮೂಲ : ಭೀಷ್ಮ ಸಾಹನಿ | 25.00 |
| ಪರಿಹಾರ | ಹಿಂದಿ ಮೂಲ : ಭೀಷ್ಮ ಸಾಹನಿ | 50.00 |
| ಬರ್ಟೋಲ್ಟ್ ಬ್ರೆಖ್ಟ್‌ನ ನಾಟಕ 'ಗೆಲಿಲಿಯೊ' | ಅನು : ಪ್ರೊ|| ಜಿ. ಆರ್. ಲಕ್ಷ್ಮಣ ರಾವ್ | 28.00 |

### ಹಾಸ್ಯ ಸಾಹಿತ್ಯ

| | | |
|---|---|---|
| ಅಪಾರ್ಥಿನಿ (ಪರಿಷ್ಕೃತ 2ನೇ ಮುದ್ರಣ) | ಅಮೃತ ಸೋಮೇಶ್ವರ | 30.00 |
| ಹಾಸ್ಯ ವಾಹಿನಿ (ನಗೆ ಬರಹಗಳು) | ರಾಮಿ | 40.00 |
| ಐರಾವತದ ಕಥೆಗಳು (ನಗೆ ಬರಹಗಳು) | ಕೆ. ಚಂದ್ರಮೌಳಿ | 48.00 |
| ಅವಾರ್ಡ್ ಬೇಕೇ ಬೇಕು (ನಗೆಬರಹಗಳು) | ಎಂ. ಪಿ. ಮನೋಹರಚಂದ್ರನ್ | 45.00 |



www.navakarnatakabooks.com

ಮಧ್ಯಪ್ರದೇಶದ ಅತೀ ಹಿಂದುಳಿದ ಜಿಲ್ಲೆ ಬಸ್ತರ. ಸಮುದ್ರ ಮಟ್ಟಕ್ಕಿಂತ ಮೂರು ಸಾವಿರ ಅಡಿಗಳಷ್ಟು ಎತ್ತರದಲ್ಲಿರುವ, ನಿಸರ್ಗ ಸಂಪತ್ತಿನಿಂದ ಕಂಗೊಳಿಸುವ ಪ್ರದೇಶ. ವಾರ್ಷಿಕ ನೂರ ಅರವತ್ತು ಸೆಂ. ಮೀ. ಮಳೆ ಸುರಿಯುವ ಕಾರಣ ಸದಾ ತುಂಬಿ ಹರಿಯುವ ನದಿಗಳು. ಮುಕ್ಕಾಲು ಭಾಗದಷ್ಟು ದಟ್ಟ ಕಾಡು. ಆದಿವಾಸಿಗಳ ಸಂಖ್ಯೆ ಹೆಚ್ಚು. ಮಾರಿಯ, ಮುರಿಯ, ಹಲ್ಬಿ, ಕವಾರ್, ಬಂಜವಾರ, ಕವಾರ, ಕುಮಾರ, ಭಾತ್ರಾ – ಮುಂತಾದುವು ಮುಖ್ಯ ಆದಿವಾಸಿ ಗುಂಪುಗಳು.

ಹೊರಗಿನವರಿಗೆ ದುಸ್ತರವೆನ್ನಿಸುವಂಥ ಪ್ರದೇಶದಲ್ಲಿ ಪ್ರವಾಸ ಮಾಡಿ ನಿಸರ್ಗದೊಂದಿಗೆ ತನ್ಮಯರಾಗಿ ಬದುಕುತ್ತಿರುವ ಸರಳ, ಅಮಾಯಕ, ಅದೇ ವೇಳೆ ವರ್ಣ ರಂಜಿತ ಜನರನ್ನು ಆತ್ಮೀಯತೆಯಿಂದ ಪರಿಚಯ ಮಾಡಿ ಕೊಡುವ ಲೇಖನಗಳು ಇದರಲ್ಲಿವೆ. ಲೇಖಕರಾದ ಡಾ॥ ಕೃಷ್ಣಾನಂದ ಕಾಮತರು ಆ ಜನರ ರೇಖಾಚಿತ್ರ ಗಳನ್ನು ಬಿಡಿಸಿ ಪುಸ್ತಕದ ಅಂದವನ್ನು ಮತ್ತಷ್ಟು ಹೆಚ್ಚಿಸಿದ್ದಾರೆ.

ಡಾ॥ ಕೃಷ್ಣಾನಂದ ಕಾಮತ್ ನಮ್ಮೊಡನೆ ಬದುಕಿದ್ದ ಖ್ಯಾತ ಅರಣ್ಯ ಕೀಟಶಾಸ್ತ್ರಜ್ಞರು, ಛಾಯಾಚಿತ್ರಕಾರರು. ಪ್ರಾಣಿ, ಪಕ್ಷಿ ಪರಿಸರ ಕುರಿತ ಇವರ ಹಲವು ಕೃತಿಗಳು ಪ್ರಕಟವಾಗಿವೆ.



ರೂ. 65 Code : 001180 ISBN 978-81-7302-982-0